ಪರಮದಯಾಮಯ ಕರುಣಾಳುವಾದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಪ್ರವಾದಿಯವರ(ಸ) ಜತೆಯಲ್ಲಿ ಬಾಳಿ, ಮಹಾ ತ್ಯಾಗಗಳನ್ನು ಸಹಿಸಿ ಜನ ಸಮುದಾಯಕ್ಕೆ ಆದರ್ಶರಾದ ಪ್ರವಾದಿ ಪತ್ನಿಯರು, ಪುತ್ರಿಯರು ಹಾಗೂ ಇತರ ಸಹಾಬಿ ಸ್ತ್ರೀಯರನ್ನೊಳಗೊಂಡ ಇಪ್ಪತ್ತೈದು ಆದರ್ಶ ನಾರಿಯರ ಕುರಿತು ಈ ಕೃತಿಯಲ್ಲಿ ಪ್ರತಿಪಾದಿಸ ಲಾಗಿದೆ. ಇಸ್ಲಾಮಿನಲ್ಲಿ ಸ್ತ್ರೀಯರಿಗಿರುವ ಸ್ಥಾನಮಾನ, ಇಸ್ಲಾಮೀ ಆಂದೋಲನದಲ್ಲಿ ಸ್ತ್ರೀಯರ ಪಾತ್ರ, ಕುಟುಂಬ ವ್ಯವಸ್ಥೆಯಲ್ಲಿ ಅವರ ಹಕ್ಕು ಬಾಧ್ಯತೆಗಳೇ ಮುಂತಾದ ವಿಷಯಗಳ ಬಗ್ಗೆ ಇದರಲ್ಲಿ ಪರಾಮರ್ಶಿಸಲಾಗಿದೆ.

ಗ್ರಂಥಕರ್ತರು ಪ್ರವಾದಿಯವರ(ಸ) ಪತ್ನಿ ಮತ್ತು ಪುತ್ರಿಯರ ಬಗೆಗಿರುವ ಕಪೋಲ ಕಲ್ಪಿತ ಭಾವನಾತ್ಮಕ ಕಥೆಗಳನ್ನೆಲ್ಲಾ ಉಪೇಕ್ಷಿಸಿ, ಅಧಿಕೃತ ಇತಿಹಾಸ ದಾಖಲೆಗಳನ್ನು ಮಾತ್ರ ಅವಲಂಬಿಸಿ ಈ ಕೃತಿಯನ್ನು ರಚಿಸಿರುವರು. ವಾತಾವರಣದ ಆಧುನಿಕ ಕಾಲದ ಕಲುಷಿತ ಸಾಮಾಜಿಕ ಸ್ಥಿತಿಯಿಂದ ಮುಸ್ಲಿಮ್ ಸ್ತ್ರೀಯರನ್ನು ಪಾರುಗೊಳಿಸಿ, ಅವರ ಜೀವನವನ್ನು ಇಸ್ಲಾಮೀ ಜೀವನವನ್ನಾಗಿ ಮಾರ್ಪಡಿಸಲು 'ಆದರ್ಶ ನಾರಿಯರು' ಕೃತಿಯು ಉಪಯುಕ್ತ ವಾದೀತೆಂದು ಆಶಿಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಹಝ್ರತ್ ಖದೀಜಾ(ರ)

ಹದಿನಾಲ್ಕು ಶತಮಾನಗಳ ಹಿಂದೆ ಅರೇಬಿಯಾದ ಕುರೈಶಿ ಗೋತ್ರದ ಉನ್ನತ ಕುಟುಂಬವೊಂದರಲ್ಲಿ ಒಂದು ಹೆಣ್ಣು ಮಗು ಹುಟ್ಟಿತು. ಆ ಮಗುವಿಗೆ ಖದೀಜಾ ಎಂದು ನಾಮಕರಣ ಮಾಡಲಾಯಿತು. ಖದೀಜಾ ಪುಣ್ಯ ಪ್ರವಾದಿವರ್ಯರ ಪತ್ನಿಪಟ್ಟವನ್ನು ಅಲಂಕರಿಸುವರು ಅಥವಾ 'ಸತ್ಯವಿಶ್ವಾಸಿಗಳ ಮಾತೆ' ಎಂಬ ಬಿರುದಿಗೆ ಪಾತ್ರರಾಗುವರೆಂದು ಅಂದು ಯಾರೂ ಊಹಿಸಿರಲಿಲ್ಲ. ಖದೀಜಾರನ್ನು 'ತಾಹಿರಃ' ಎಂದೂ ಅವರು ಕರೆಯುತ್ತಿದ್ದರು. ಅಂದರೆ 'ನಿರ್ಮಲ' ಎಂದರ್ಥ. ಖದೀಜಾರು ಖುವೈಲಿದ್ ಬಿನ್ ಅಸದ್ ಮತ್ತು ಫಾತಿಮಃ ಬಿಂತಿ ಝಾಯಿದ್‌ರ ದಾಂಪತ್ಯತನದಲ್ಲಿ ಅರಳಿದ ಸುಂದರ ಕುಸುಮ.

ತಾಹಿರಃ ಎಂಬ ಹೆಸರಿಗೆ ಅನ್ವರ್ಥವಾಗಿ ಖದೀಜಾ ಬೆಳೆದರು. ಚಿಕ್ಕಂದಿನಲ್ಲಿಯೇ ಖದೀಜಾರು ಸದ್ಗುಣ ಸಂಪನ್ನೆ ಮತ್ತು ಸುಶೀಲೆಯಾಗಿದ್ದರು. ಶ್ರೀಮಂತ ಮತ್ತು ಕುಲೀನ ಕುಟುಂಬದಲ್ಲಿ ಜನಿಸಿದರು. ಆದ್ದರಿಂದ ಬಾಲ್ಯ ಕಾಲವೂ ಸುಖಮಯವಾಗಿತ್ತು. ಕುಟುಂಬದ ಕಣ್ಮಣಿಯಾಗಿದ್ದ ಖದೀಜಾರು ಪತಂಗದಂತೆ ನಲಿದಾಡಿದರು.

## ಮೊದಲ ವಿವಾಹ

ಖದೀಜಾರಿಗೆ ವಿವಾಹ ಪ್ರಾಯವಾದಾಗ ಹಲವು ಪ್ರಸ್ತಾಪಗಳು ಬಂದುವು. ವರಕ ಬಿನ್ ನೌಫಲ್‌ರು ಪ್ರಸ್ತಾವಿತ ಪ್ರಥಮ ವರರಾಗಿದ್ದರು. ಆದರೆ ಕಾರಣವಶಾತ್ ಆ ಮದುವೆ ನಡೆಯಲಿಲ್ಲ. ಖದೀಜಾರ ಪ್ರಥಮ ವಿವಾಹವು ಅಬೂಹಾಲರೊಂದಿಗೆ ಜರಗಿತು. ಆ ವೈವಾಹಿಕ ಜೀವನದಲ್ಲಿ ಹಿಂದ್ ಮತ್ತು ಹಾರಿಸ್ ಎಂಬೀರ್ವರು ಮಕ್ಕಳು ಜನಿಸಿದರು. ಅಬೂಹಾಲರ ನಿಧನದ ಬಳಿಕ ಅತೀಖ್ ಬಿನ್ ಆಬಿದ್‌ರೊಡನೆ ಖದೀಜಾರ ವಿವಾಹ ನಡೆಯಿತು. ಅದರಲ್ಲಿ ಹಿಂದ್ ಎಂಬ ಹೆಸರಿನ ಹೆಣ್ಣು ಮಗು ಹುಟ್ಟಿತು. ಅತೀಖ್‌ರೂ ಮೃತ್ಯುವಶರಾದರು. ಖದೀಜಾ ಪುನಃ ವಿಧವೆಯಾದರು.

## ವರ್ತಕಿ

ಖದೀಜಾರು ಪ್ರಮುಖ ವರ್ತಕಿಯಾಗಿದ್ದರು. ಅರಬರು ಪ್ರಾಚೀನ ಕಾಲದಿಂದಲೇ ಸಿರಿಯಾ, ಯಮನ್ ಮುಂತಾದ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಸರಕು ಹೇರಿ ಒಟ್ಟಿಗೆ ಸಂಚರಿಸುವ ಒಂಟೆಗಳ ಸಾಲನ್ನು ಅರಬರು 'ಖಾಫಿಲಾ' ಎನ್ನುತ್ತಿದ್ದರು.

ನೀಲಾಕಾಶದ ಕೆಳಗೆ ವಿಸ್ತಾರವಾಗಿ ಹರಡಿಕೊಂಡಿರುವ ಮರುಭೂಮಿಯಲ್ಲಿ ಹಾಡುತ್ತಾ ಸಂಚರಿಸುವ ಖಾಫಿಲಗಳ ದೃಶ್ಯವು ನಯನ ಮನೋಹರವಾಗಿತ್ತು. ಅಂತಹ ಖಾಫಿಲಗಳ ಮೂಲಕ ಖದೀಜಾರು ತಮ್ಮ ವ್ಯಾಪಾರೀ ಸರಕುಗಳನ್ನು ಸಿರಿಯಾಕ್ಕೆ ಕಳುಹಿಸುತ್ತಿದ್ದರು. ಸರಕುಗಳೊಂದಿಗೆ ಹೊರನಾಡುಗಳಿಗೆ ಖದೀಜಾ ಸ್ವಯಂ ಹೋಗುತ್ತಿರಲಿಲ್ಲ. ಅದಕ್ಕಾಗಿ ಏಜೆಂಟರನ್ನು ನೇಮಿಸಿ ಕಮಿಷನ್ ನೀಡುತ್ತಿದ್ದರು.

ಖದೀಜಾರಿಗೆ ಸಂಪತ್ತು ಮತ್ತು ಸ್ಥಾನಮಾನಗಳಿದ್ದುವು. ಆದರೆ, ಅವರಿಗೆ ಅದರಿಂದ ಸಂತೃಪ್ತಿಯಿರಲಿಲ್ಲ. ಕೆಲವು ಸಮಸ್ಯೆಗಳು ಅವರನ್ನು ನೋಯಿಸುತ್ತಿದ್ದುವು. ಅವರಿಗೆ ಎರಡು ಬಾರಿ ವಿವಾಹವಾಗಿತ್ತು. ಹಾಗಿದ್ದರೂ ಅವರ ಪತಿಯರೀರ್ವರೂ ನಿಧನರಾಗಿದ್ದರು.

ಈಗ ವಿಧವಾ ಜೀವನವನ್ನು ಸಾಗಿಸಬೇಕಾಗಿದೆ. ತನ್ನ ಒಂಟಿತನದ ನಿವಾರಣೆ ಹಾಗೂ ವ್ಯಾಪಾರ ವಹಿವಾಟುಗಳನ್ನು ನೋಡಿಕೊಳ್ಳಲು ಅರ್ಹರಾದ ಓರ್ವ ಬಾಳಸಂಗಾತಿಯು ಅವರಿಗೆ ಬೇಕಾಗಿದ್ದಾರೆ. ಹೀಗಿರುತ್ತಾ ಯುವಕ ಮುಹಮ್ಮದ್‌ರು(ಸ) ಅವರ ಕಣ್ಣಿಗೆ ಬಿದ್ದರು. ಮುಹಮ್ಮದ್‌ರು(ಸ) ಸತ್ಯಸಂಧ ಮತ್ತು ಪ್ರಾಮಾಣಿಕ ಯುವಕನೆಂದು ಖ್ಯಾತರಾಗಿ ದ್ದರು. ವ್ಯಾಪಾರ ವಹಿವಾಟುಗಳನ್ನು ಬಲ್ಲವರಾಗಿದ್ದರು. "ನನ್ನ ಸರಕುಗಳನ್ನು ಸಿರಿಯಾದಲ್ಲಿ ಮಾರಾಟ ಮಾಡುವಂತಹ ಓರ್ವ ನಂಬಿಗಸ್ಥ ಏಜೆಂಟನ ಅಗತ್ಯವಿದೆ. ತಾವು ಈ ಕೆಲಸವನ್ನು ವಹಿಸಿಕೊಳ್ಳುವಿರಾದರೆ ಇತರರಿಗಿಂತ ನಿಮಗೆ ಇಮ್ಮಡಿ ಕಮಿಷನ್ ನೀಡುವುದಾಗಿ" ಖದೀಜಾರು ಮುಹಮ್ಮದ್‌ರಿಗೆ(ಸ) ತಿಳಿಸಿದರು. ಮುಹಮ್ಮದರು(ಸ) ಅದಕ್ಕೆ ಒಪ್ಪಿದರು. ಅವರು ಮಾರಾಟ ವಸ್ತುಗಳೊಂದಿಗೆ ಬಸ್ರಾಕ್ಕೆ ಹೊರಟರು. ಬಸ್ರಾ ಪಟ್ಟಣವು ಅಂದು ಸಿರಿಯಾದ ಪ್ರಮುಖ ವ್ಯಾಪಾರೀ ಕೇಂದ್ರವಾಗಿತ್ತು. ಖದೀಜಾರು ಮುಹಮ್ಮದ್‌ರ(ಸ) ನೆರವಿಗಾಗಿ ತನ್ನ ಸೇವಕನಾಗಿದ್ದ ಮೈಸರನನ್ನೂ ಸಂಗಡ ಕಳುಹಿಸಿದ್ದರು. ಅವರು ಕೊಂಡೊಯ್ದ ವಸ್ತುಗಳೆಲ್ಲವೂ ಉತ್ತಮ ಬೆಲೆಗೆ ಮಾರಾಟವಾದುವು. ಅಲ್ಲಿಂದ ಅವಶ್ಯಕ ಸಾಮಗ್ರಿಗಳನ್ನು ಖರೀದಿಸಿ ಮುಹಮ್ಮದ್(ಸ) ಮಕ್ಕಾಕ್ಕೆ ಮರಳಿದರು. ಖದೀಜಾರಿಗೆ ಲೆಕ್ಕ ನೀಡಿದಾಗ ಎಂದಿಗಿಂತ ಇಮ್ಮಡಿ ಲಾಭ ದೊರೆತಿತ್ತು. ಅವರಿಗೆ ಭಾರೀ ಸಂತೋಷವಾಯಿತು. ಅವರು ನಿಗದಿಪಡಿಸಿದ್ದಕ್ಕಿಂತ ಇಮ್ಮಡಿ ಹಣವನ್ನು ಮುಹಮ್ಮದ್‌ರಿಗೆ(ಸ) ನೀಡಿದರು.

## ಮುಹಮ್ಮದ್‌ರೊಡನೆ(ಸ) ವಿವಾಹ

ಬಸ್ರಾದಿಂದ ಮರಳಿ ಮೂರು ತಿಂಗಳಾಗಿರಬಹುದು. ಮುಹಮ್ಮದ್‌ರವರ(ಸ) ಗುಣ ಸ್ವಭಾವ ಮತ್ತು ಸಾಮರ್ಥ್ಯಗಳಿಂದ ಆಕರ್ಷಿತರಾದ ಖದೀಜಾರು ಅವರೊಡನೆ ವಿವಾಹ ಪ್ರಸ್ತಾಪ ಮಾಡಿದರು. ಖದೀಜಾರ ತಂದೆ ಖುವೈಲಿದ್ ಬಿನ್ ಅಸದ್‌ರು ಫಿಜಾರ್ ಯುದ್ಧದಲ್ಲಿ ವಧಿಸಲ್ಪಟ್ಟಿದ್ದರು. ಚಿಕ್ಕಪ್ಪನಿದ್ದರೂ ಖದೀಜಾರು ತನ್ನ ದಾಸಿ ನಫೀಸಾಳ ಮೂಲಕ ವಿವಾಹದ ಅಪೇಕ್ಷೆಯನ್ನು ಮುಹಮ್ಮದ್‌ರಿಗೆ(ಸ) ತಿಳಿಸಿದರು. ಅಂದು

ಅರೇಬಿಯಾದ ಮಹಿಳೆಯರಿಗೆ ರಕ್ಷಕರ ಹಸ್ತಕ್ಷೇಪವಿಲ್ಲದೆಯೇ ನೇರವಾಗಿ ವಿವಾಹ ಪ್ರಸ್ತಾಪ ಮಾಡುವ ಸ್ವಾತಂತ್ರ್ಯವಿತ್ತು. ಮುಹಮ್ಮದ್‌ರು(ಸ) ಖದೀಜಾರ ಅಪೇಕ್ಷೆಯನ್ನು ಅಂಗೀಕರಿಸಿದರು. ಮುಹಮ್ಮದ್‌ರ(ಸ) ದೊಡ್ಡಪ್ಪರಾಗಿದ್ದ ಅಬೂತಾಲಿಬ್ ಮತ್ತು ಹಮ್‌ಝಾ ಮುಂತಾದ ಕುಟುಂಬದ ಗಣ್ಯರ ಸಮ್ಮುಖದಲ್ಲಿ ಖದೀಜಾರ ಮನೆಯಲ್ಲಿ ವಿವಾಹಕರ್ಮಗಳು ಸಮಂಗಳ ಜರಗಿತು. 500 ದಿರ್ಹಮ್ ಮಹ್ರ್ (ವಧು ದಕ್ಷಿಣೆ) ನಿಶ್ಚಯಿಸಲಾಗಿತ್ತು. ಅಂದು ಖದೀಜಾರಿಗೆ ನಲ್ವತ್ತು ಮತ್ತು ಮುಹಮ್ಮದ್‌ರಿಗೆ(ಸ) ಇಪ್ಪತ್ತೈದು ವರ್ಷ ವಯಸ್ಸಾಗಿತ್ತು. ಮುಹಮ್ಮದ್‌ರೊಂದಿಗಿನ(ಸ) ವಿವಾಹದಿಂದ ಖದೀಜಾರ ಜೀವನಕ್ಕೆ ಹೊಸ ಕಳೆ ಮತ್ತು ಸ್ಫೂರ್ತಿ ಮರಳಿ ದೊರೆತಂತಾಯಿತು. ದುಃಖದಿಂದ ಬಾಡಿಕೊಂಡಿದ್ದ ಅವರ ಮುಖಕಮಲ ಪುನಃ ಅರಳಿ ಶೋಭಿಸಿತು.

ಮುಹಮ್ಮದ್‌ರವರ(ಸ) ಮತ್ತು ಖದೀಜಾರ ದಾಂಪತ್ಯ ಜೀವನವು ನಿಷ್ಕಳಂಕ ಸ್ನೇಹ ಸಂಬಂಧದ ಉತ್ಕೃಷ್ಟ ಮಾದರಿಯಾಗಿದೆ. ಮುಹಮ್ಮದ್‌ರವರಿಗೆ(ಸ) ಖದೀಜರೂ, ಖದೀಜಾರಿಗೆ ಮುಹಮ್ಮದ್‌ರವರೂ(ಸ) ಪ್ರಾಣಪ್ರಿಯರಾಗಿದ್ದರು. ಖದೀಜಾರ ಜೀವನ ಕಾಲದಲ್ಲಿ ಮುಹಮ್ಮದ್‌ರವರು(ಸ) ಬೇರೆ ವಿವಾಹವಾಗಲಿಲ್ಲ. ಆ ದಾಂಪತ್ಯ ಜೀವನದ ಸುದೃಢ ಬೆಸುಗೆಗೆ ಯೌವನ ಮತ್ತು ಸೌಂದರ್ಯದ ಮಾಧುರ್ಯ ಕಾರಣವಾಗಿರಲಿಲ್ಲ. ಅದಕ್ಕಿಂತ ಉನ್ನತವಾದ ಏನೋ ಅಲೌಕಿಕ ವೈಶಿಷ್ಟ್ಯಗಳು ಪ್ರೇರಕವಾಗಿದ್ದುವು. ಅದನ್ನು ಅಲೌಕಿಕ ಸುಂದರವಾದ ದಾಂಪತ್ಯ ಸಂಬಂಧದ ಚಿರಂತನ ಮಾದರಿಯೆಂದು ವರ್ಣಿಸಬಹುದು.

ಖದೀಜಾರ(ರ) ಮರಣದ ಬಳಿಕ ಆಯಿಶಾರಂತಹ(ರ) ತರುಣಿಯರು ಪತ್ನಿಯರಾಗಿ ದೊರೆತರೂ ಪ್ರವಾದಿಯವರು(ಸ) ಅವರನ್ನು ಮರೆಯಲಿಲ್ಲ. ಅವರು ಖದೀಜಾರನ್ನು ಸದಾ ಸ್ಮರಿಸುತ್ತಾ ಅವರ ಕುರಿತು ಆಗಾಗ್ಗೆ ಪ್ರಸ್ತಾಪಿಸುತ್ತಿದ್ದರು. ಒಮ್ಮೆ ಪ್ರವಾದಿ(ಸ) ಖದೀಜಾ ರನ್ನು ಹೊಗಳಿದಾಗ ಆಯಿಶಾರು(ರ) ಒಂದು ಚುಚ್ಚುಮಾತು ನುಡಿದರು: "ಖದೀಜಾರು ಒಬ್ಬ ಮುದುಕಿಯಲ್ಲವೇ? ಅಲ್ಲಾಹನು ಅವರಿಗಿಂತ ಉತ್ತಮ ಪತ್ನಿಯರನ್ನು ನಿಮಗೆ ನೀಡಿದ್ದಾನೆ. ಹಾಗಿರುತ್ತಾ ಸದಾ ಅವರನ್ನೇ ಯಾಕೆ ಸ್ಮರಿಸುತ್ತಿದ್ದೀರಿ?" ಪ್ರವಾದಿಯ ವರಿಗೆ(ಸ) ಈ ಚುಚ್ಚು ಮಾತು ಹಿಡಿಸಲಿಲ್ಲ. ಅವರು ಹೇಳಿದರು: "ಇಲ್ಲ, ನನಗೆ ಖದೀಜರಿಗಿಂತ ಉತ್ತಮ ಪತ್ನಿಯರು ದೊರೆತಿಲ್ಲ. ಎಲ್ಲರೂ ನನ್ನನ್ನು ನಿಷೇಧಿಸಿದಾಗ ಅವರು ನನ್ನನ್ನು ನಂಬಿದರು. ಎಲ್ಲರೂ ನನ್ನನ್ನು ತಿರಸ್ಕರಿಸಿದಾಗ ಅವರು ನನ್ನ ಕೈಬಿಡಲಿಲ್ಲ. ಎಲ್ಲ ಸಂದರ್ಭಗಳಲ್ಲಿಯೂ ಅವರು ನನಗೆ ನೆರವಾದರು. ಅವರ ಮೂಲಕ ಅಲ್ಲಾಹನು ನನಗೆ ಮಕ್ಕಳನ್ನು ಅನುಗ್ರಹಿಸಿದ್ದಾನೆ."

## ಉತ್ತಮ ಗೃಹಿಣಿ

ಮುಹಮ್ಮದ್‌ರಿಗೆ(ಸ) ಖದೀಜಾರಲ್ಲಿ ಆರು ಮಕ್ಕಳು ಜನಿಸಿದುವು. ಎರಡು ಗಂಡು ನಾಲ್ವರು ಹೆಣ್ಣು, ಕಾಸಿಮ್, ಅಬ್ದುಲ್ಲಾ, ಝೈನಬ್, ರುಕಿಯ್ಯ, ಉಮ್ಮು ಕುಲ್ಸೂಮ್ ಮತ್ತು ಫಾತಿಮ. ಗಂಡು ಮಕ್ಕಳ ಸಂಖ್ಯೆಯ ಕುರಿತು ಇತಿಹಾಸಗಾರರಲ್ಲಿ ಭಿನ್ನಾಭಿಪ್ರಾಯವಿದೆ. ಇಬ್ರಾಹೀಮರ ಹೊರತು ಪ್ರವಾದಿಯವರ(ಸ) ಮಕ್ಕಳೆಲ್ಲರೂ ಹ. ಖದೀಜಾರಿಂದ ಹುಟ್ಟಿದ್ದಾರೆ. ಗಂಡು ಮಕ್ಕಳೆಲ್ಲರೂ ಚಿಕ್ಕಂದಿನಲ್ಲಿಯೇ ಮರಣ ಹೊಂದಿದ್ದರು.

ಖದೀಜಾರು(ರ) ಉತ್ತಮ ಗೃಹಿಣಿ ಮತ್ತು ಸ್ನೇಹ ಸಂಪನ್ನೆಯಾದ ಮಾತೆಯಾಗಿದ್ದರು. ಮಕ್ಕಳ ಬಗ್ಗೆ ಪ್ರೀತಿ ವಾತ್ಸಲ್ಯ ಅನುಪಮವಾಗಿತ್ತು. ಪತಿ ಮತ್ತು ಪ್ರವಾದಿಯೆಂಬ ನೆಲೆಯಲ್ಲಿ ಮುಹಮ್ಮದ್‌ರನ್ನು(ಸ) ಅವರು ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ಅವರ ಆದೇಶಗಳನ್ನು ಅಕ್ಷರಶಃ ಪಾಲಿಸುತ್ತಿದ್ದರು. ಖದೀಜಾರ ಗೃಹಕೃತ್ಯದ ಸಾಮರ್ಥ್ಯಗಳನ್ನು ಹೊಗಳುತ್ತಾ ಒಮ್ಮೆ ಪ್ರವಾದಿ(ಸ) ಹೀಗೆಂದಿದ್ದಾರೆ: "ಖದೀಜಾರು ಉತ್ತಮ ಗೃಹಿಣಿ ಮತ್ತು ಸುಶೀಲೆಯಾದ ಮಾತೆಯಾಗಿದ್ದರು." ಮುಹಮ್ಮದ್‌ರು(ಸ) ಹಿರಾಗುಹೆಯಲ್ಲಿ ಆರಾಧನಾ ಮಗ್ನರಾಗಿರುತ್ತಿದ್ದ ವೇಳೆ ಖದೀಜಾರು(ರ) ಆಹಾರ ಪಾನೀಯಗಳನ್ನು ಒದಗಿಸುತ್ತಿದ್ದರು. ಮುಹಮ್ಮದ್(ಸ) ಸ್ವಲ್ಪ ತಿಂಡಿ ಪಾನೀಯಗಳನ್ನು ತೆಗೆದುಕೊಂಡು ಹಿರಾಗುಹೆಗೆ ಹೋಗುತ್ತಿದ್ದರು. ಅದು ಮುಗಿಯುವ ತನಕ ಮನೆಗೆ ಮರಳದೆ ಅಲ್ಲಿಯೇ ಆರಾಧನಾ ನಿರತರಾಗುತ್ತಿದ್ದರು. ಆಹಾರ ಮುಗಿದರೆ ಪುನಃ ಖದೀಜಾರ ಬಳಿಗೆ ಬಂದು ಅದನ್ನು ಒಯ್ಯುತ್ತಿದ್ದರು. ಖದೀಜಾರು(ರ) ಈ ಬಗ್ಗೆ ಯಾವ ಅಸಂತೃಪ್ತಿಯನ್ನೂ ತೋರುತ್ತಿರಲಿಲ್ಲ. ಮುಹಮ್ಮದ್‌ರ(ಸ) ಅಭೀಷ್ಟಕ್ಕೆ ಅವರು ಮನಃಪೂರ್ವಕವಾಗಿ ಬದ್ಧರಾದರು.

## ಮನೋದಾರ್ಢ್ಯ

ಹಝ್ರತ್ ಖದೀಜಾರು ವಿಷಮ ಪರಿಸ್ಥಿತಿಗಳಲ್ಲಿ ವಿಚಲಿತವಾಗದ ಮನೋದಾರ್ಢ್ಯವನ್ನು ಹೊಂದಿದ್ದರು. ಕಳವಳಚಿತ್ತರನ್ನು ಸಾಂತ್ವನಗೊಳಿಸುವ ಅವರ ಪ್ರೌಢಿಮೆ ನಿಸ್ಸೀಮವಾಗಿತ್ತು. ಹಿರಾಗುಹೆಯಲ್ಲಿ ಏಕಾಂಗಿಯಾಗಿದ್ದಾಗ ಆಕಸ್ಮಿಕವಾಗಿ ಜಿಬ್ರೀಲ್ ಪ್ರತ್ಯಕ್ಷವಾಗಿ ಕುರ್‌ಆನ್ ಓದಿ ಹೇಳಿದಾಗ ಮುಹಮ್ಮದ್(ಸ) ಹೆದರಿ ಮನೆಗೆ ಧಾವಿಸಿದರು. ತನಗೆ ಹೊದಿಸುವಂತೆ ಪ್ರವಾದಿ(ಸ) ಖದೀಜಾರನ್ನು ವಿನಂತಿಸಿದರು. ಅವರು ಗಡಗಡನೆ ಕಂಪಿಸುತ್ತಿದ್ದರು. ಖದೀಜಾರು ಅವರಿಗೆ ಹೊದಿಸಿದರು. ನಡೆದ ಘಟನೆಗಳನ್ನು ಪ್ರವಾದಿ(ಸ) ವಿವರಿಸಿದರು. ನಡೆದ ವೃತ್ತಾಂತವನ್ನು ಕೇಳಿ ಖದೀಜಾರು(ರ) ಸ್ವಲ್ಪವೂ ಹೆದರಲಿಲ್ಲ. "ಭೂತವಾಗಿರಬಹುದು; ಪ್ರೇತವಾಗಿರಬಹುದು;" ತಕ್ಷಣವೇ ಜ್ಯೋತಿಷ್ಯರ ಬಳಿ ಶಾಸ್ತ್ರಿ ಮಾಡಿಸಬೇಕೆಂದೇನೂ ಖದೀಜಾ(ರ) ಹೇಳಲಿಲ್ಲ. ಬದಲಾಗಿ ಅವರು ಪ್ರವಾದಿಯವರನ್ನು(ಸ)

ಸಾಂತ್ವನಗೊಳಿಸಿದರು. "ನೀವು ಸತ್ಯ ಹೇಳುತ್ತೀರಿ, ಕುಟುಂಬ ಸೌಹಾರ್ದವನ್ನು ಬೆಳೆಸುತ್ತೀರಿ. ಅತಿಥಿಗಳನ್ನು ಸತ್ಕರಿಸುತ್ತೀರಿ. ನಿರ್ಗತಿಕರಿಗೆ ನೆರವಾಗುತ್ತೀರಿ. ಆದ್ದರಿಂದ ಅಲ್ಲಾಹನು ನಿಮಗೆ ನೆರವಾಗುವನು."

ತರುವಾಯ ಖದೀಜಾರು(ರ) ಪ್ರವಾದಿಯವರನ್ನು(ಸ) ವರಕ ಬಿನ್ ನೌಫಲರ ಬಳಿಗೆ ಕರೆದೊಯ್ದರು. ಹಿರಾಗುಹೆಯಲ್ಲಿ ನಡೆದ ಘಟನೆಯನ್ನು ಅವರಿಗೆ ತಿಳಿಸಿದರು. ವರಕರು ತೌರಾತ್ ಮತ್ತು ಇಂಜೀಲ್ ಗ್ರಂಥಗಳ ಅಧ್ಯಯನ ನಡೆಸಿದ ಓರ್ವ ಕ್ರೈಸ್ತ ವಯೋವೃದ್ಧರಾಗಿದ್ದರು. ಪ್ರವಾದಿಯವರ(ಸ) ಅಸಾಮಾನ್ಯ ಅನುಭವವನ್ನು ಆಲಿಸಿದ ಬಳಿಕ ವರಕ ಹೀಗೆಂದರು: ಮೂಸಾರಿಗೆ(ಅ) ದೇವಸಂದೇಶವನ್ನು ತಲಪಿಸಿದ್ದ ದೇವಚರನೇ ಮುಹಮ್ಮದ್‌ರಿಗೆ(ಸ) ಪ್ರತ್ಯಕ್ಷವಾಗಿದೆ. ಮುಹಮ್ಮದ್, ತಾವು ಈ ಸಮುದಾಯದ ಪ್ರವಾದಿಯಾಗುವಿರಿ. ತಮ್ಮ ಸಮುದಾಯವು ತಮ್ಮನ್ನು ಈ ನಾಡಿನಿಂದ ಓಡಿಸುವಂತಹ ಒಂದು ದಿನ ಬರಲಿದೆ. ಅಲ್ಲಾಹನ ಸಂದೇಶವನ್ನು ತಂದ ಎಲ್ಲ ಪ್ರವಾದಿಗಳನ್ನೂ ಅವರ ಜನತೆಯು ಉಪದ್ರವಿಸಿ ನಾಡಿನಿಂದ ಬಹಿಷ್ಕರಿಸಿವೆ. ಅಂದು ನಾನು ಬದುಕಿದ್ದರೆ ನನ್ನ ಎಲ್ಲ ಶಕ್ತಿಯನ್ನೂ ಬಳಸಿ ನಿಮಗೆ ಸಹಾಯ ಮಾಡುತ್ತೇನೆ. ವರಕರ ಈ ಭವಿಷ್ಯ ನುಡಿ ಕೇಳಿ ಖದೀಜಾರು ಅಧೀರರಾಗಲಿಲ್ಲ. ನಮ್ಮ ದಾಂಪತ್ಯ ಜೀವನವು ಒಂದು ಹೊಸ ತಿರುವಿನತ್ತ ಸಾಗುತ್ತಿದೆ ಹಾಗೂ ಈ ಹಾದಿಯಲ್ಲಿ ನಾವು ನಾನಾ ವಿಧದ ಅಗ್ನಿ ಪರೀಕ್ಷೆಗೆ ಗುರಿಯಾಗಬೇಕಾದೀತೆಂದು ಅವರಿಗೆ ಚೆನ್ನಾಗಿ ಮನದಟ್ಟಾಗಿತ್ತು. ಆದರೆ ಖದೀಜಾ ಹೇಡಿಯಾಗಿರಲಿಲ್ಲ. ಅಲ್ಲಾಹ್ ಮತ್ತು ಪ್ರವಾದಿಗಾಗಿ ಯಾವ ತ್ಯಾಗವನ್ನೂ ಸಹಿಸಲು ಅವರು ಸಿದ್ಧರಾಗಿದ್ದರು.

## ಇಸ್ಲಾಮಿನ ಪ್ರಥಮ ಮಹಿಳೆ

ಇಸ್ಲಾಮ್ ಧರ್ಮವು ಅಲ್ಲಾಹನು ಮಾನವಕುಲಕ್ಕೆ ದಯಪಾಲಿಸಿರುವ ಅತಿದೊಡ್ಡ ಅನುಗ್ರಹ. ಈ ಸಮುದಾಯದಲ್ಲಿ ಎಲ್ಲರಿಗಿಂತ ಮುಂಚೆ ಖದೀಜಾರು(ರ) ಈ ಅನುಗ್ರಹಕ್ಕೆ ಪಾತ್ರರಾಗಿದ್ದರು. ಇಸ್ಲಾಮ್ ಮತ್ತು ಪ್ರವಾದಿವರ್ಯರಲ್ಲಿ ವಿಶ್ವಾಸವಿರಿಸುವ ಪ್ರಪ್ರಥಮ ಭಾಗ್ಯವು ಅವರಿಗೇ ದೊರೆಯಿತು. ಅಂದು ಭೂಮಿಯಲ್ಲಿ ಪ್ರವಾದಿಯವರನ್ನು(ಸ) ಬಿಟ್ಟರೆ ಹ. ಖದೀಜಾ(ರ) ಪ್ರಥಮ ಮುಸ್ಲಿಮ್ ಆಗಿದ್ದರು.

ಇಸ್ಲಾಮಿನ ನಾಂದಿ ಕಾಲ. ದೇಶವಿಡೀ ಪ್ರವಾದಿಯವರ(ಸ) ಬಗ್ಗೆ ಕುಪಿತಗೊಂಡಿದೆ. ಎಲ್ಲರೂ ವೈರಿಗಳು. ಪ್ರವಾದಿಯವರನ್ನು(ಸ) ವಧಿಸುವ ಸಂಚು ನಡೆಯುತ್ತಿದೆ. ಯಾವ ಕ್ಷಣದಲ್ಲಿ ಏನಾದೀತೆಂದು ಹೇಳುವಂತಿಲ್ಲ. ಇಂತಹ ಸಂದಿಗ್ಧ ಘಟ್ಟದಲ್ಲಿ ಸಾಮಾನ್ಯ ಸ್ತ್ರೀಯರ ಮನೋಭಾವ ಹೇಗಿರಬಹುದೆಂದು ವಿವರಿಸಬೇಕಾಗಿಲ್ಲ. ಆಪತ್ಕಾಲದಲ್ಲಿ

ಪತಿಯರನ್ನೇ ವಂಚಿಸಿ ವೈರಿಪಕ್ಷ ಸೇರುವ ಕುಟಿಲ ಸ್ತ್ರೀಯರಿದ್ದಾರೆ. ಪ್ರವಾದಿ ನೂಹ್(ಅ) ಮತ್ತು ಲೂತ್‌ರ(ಅ) ಪತ್ನಿಯರ ಇತಿಹಾಸವು ಅದನ್ನೇ ಸಾರುತ್ತಿದೆ. "ನಮಗೆ ಚಿಕ್ಕ ಮಕ್ಕಳಿದ್ದಾರೆ. ಎಲ್ಲರೂ ಅಬಲೆಯರಾದ ಹೆಣ್ಣು ಮಕ್ಕಳು. ಅವರ ಭವಿಷ್ಯ ಕರಾಳ ವಾದೀತು. ಊರವರೊಡನೆ ವೈರ ಕಟ್ಟಿಕೊಂಡರೆ ನಮ್ಮ ಹೆಣ್ಣು ಮಕ್ಕಳನ್ನು ಯಾರೂ ಕೈ ಹಿಡಿಯಲಾರರು" ಎಂದು ಮುಂತಾಗಿ ಖದೀಜಾ(ರ) ಗೋಣಗಲಿಲ್ಲ. ಅವರು ದೇವಭಕ್ತೆ, ಪ್ರವಾದಿನಿಷ್ಠೆ ಮತ್ತು ಪತಿನಿಷ್ಠಳಾಗಿದ್ದರು. ಅವರು ಎಲ್ಲ ವಿಷಮ ಪರಿಸ್ಥಿತಿಗಳಲ್ಲಿಯೂ ಪ್ರವಾದಿಯವರೊಡನೆ(ಸ) ದೃಢವಾಗಿ ನಿಂತರು. ಪ್ರವಾದಿಯವರಿಗೆ(ಸ) ಮನಃಶಾಂತಿ ಮತ್ತು ಸ್ಫೂರ್ತಿಯನ್ನು ನೀಡಿದರು.

## ಮೂವರು

ಇಸ್ಲಾಮಿನ ಪ್ರಾರಂಭ ಕಾಲದಲ್ಲಿ ಪ್ರವಾದಿ(ಸ) ಮತ್ತು ಖದೀಜಾರ ಶೋಚನೀಯಾವಸ್ಥೆಯನ್ನು ಅಫೀಫ್ ಕಿನ್ದೀಯವರ ವಿವರಣೆಯಿಂದ ತಿಳಿಯಬಹುದು. ಅವರು ಹೇಳುತ್ತಾರೆ; ನಾನು ಜಾಹಿಲಿಯ್ಯಾ (ಅಜ್ಞಾನ) ಕಾಲದಲ್ಲಿ ನನ್ನ ಪತ್ನಿಗೆ ಸುಗಂಧ ದ್ರವ್ಯ ಮತ್ತು ಬಟ್ಟೆಬರೆಗಳನ್ನು ಖರೀದಿಸಲಿಕ್ಕಾಗಿ ಮಕ್ಕಾಕ್ಕೆ ಹೋಗಿದ್ದೆ. ಮಕ್ಕಾದಲ್ಲಿ ನಾನು ಅಬ್ಬಾಸ್‌ರ ಮನೆಯಲ್ಲಿ ಉಳಕೊಳ್ಳುತ್ತಿದ್ದೆ. ಅದೊಂದು ದಿನ ಬೆಳಿಗ್ಗೆ ನಾನು ಅಂಗಳದಲ್ಲಿ ಕುಳಿತು ಆಲೋಚನಾ ಮಗ್ನನಾಗಿದ್ದೆ. ಅಲ್ಲಿಂದ ನೋಡಿದರೆ ಕಅಬಾ ಕಾಣಿಸುತ್ತಿತ್ತು. ಸಮೀಪದಲ್ಲಿಯೇ ಅಬ್ಬಾಸ್ ಕುಳಿತಿದ್ದರು. ಥಕ್ಕನೆ ಓರ್ವ ಯುವಕ ಕಅಬಾದ ಸಮೀಪ ಗೋಚರಿಸಿದ. ಆತ ಆಕಾಶದತ್ತ ನೋಡಿದ. ಆ ಬಳಿಕ ಕಅಬಾಕ್ಕೆ ಮುಖಮಾಡಿ ನಿಂತುಕೊಂಡ. ಸ್ವಲ್ಪ ಸಮಯದ ಬಳಿಕ ಇನ್ನೋರ್ವ ಬಾಲಕ ಅಲ್ಲಿಗೆ ಬಂದ. ಆತ ಯುವಕನ ಬಲಗಡೆಯಲ್ಲಿ ಹೋಗಿ ನಿಂತುಕೊಂಡ. ಆ ಬಳಿಕ ಆಗಮಿಸಿದ ಮಹಿಳೆಯೋರ್ವರು ಅವರಿಬ್ಬರ ಹಿಂದೆ ಹೋಗಿ ನಿಂತುಕೊಂಡರು. ಕಅಬಾದ ಮುಂದೆ ನಿಂತು ಅವರು ಮೂವರೂ ಕೆಲವು ಕ್ರಿಯೆಗಳನ್ನು ಮಾಡಿ ಅಲ್ಲಿಂದ ನಿರ್ಗಮಿಸಿದರು. ಇದನ್ನು ನೋಡಿದ ನನಗೆ ತುಂಬಾ ಅಚ್ಚರಿಯಾಯಿತು.

ನಾನು: ಅಬ್ಬಾಸ್, ಏನೋ ದೊಡ್ಡ ಘಟನೆ ನಡೆಯುವಂತಿದೆ. ಇದು ಅದರ ನಾಂದಿಯೆಂಬಂತೆ ಭಾಸವಾಗುತ್ತಿದೆ.

ಅಬ್ಬಾಸ್: ಹೌದು, ನಿಮಗೆ ಆ ಯುವಕ, ಮಹಿಳೆ ಮತ್ತು ಬಾಲಕ ಯಾರೆಂದು ತಿಳಿದಿದೆಯೇ?

ನಾನು: ಇಲ್ಲ.

ಅಬ್ಬಾಸ್: ಆ ಯುವಕ ನನ್ನ ಸಹೋದರ ಅಬ್ದುಲ್ಲಾನ ಮಗ ಮುಹಮ್ಮದ್. ಅಬೂ ತಾಲಿಬ್‌ರ ಪುತ್ರ ಅಲಿಯೇ ಆ ಬಾಲಕ. ಮಹಿಳೆಯು ಮುಹಮ್ಮದ್‌ನ ಪತ್ನಿ ಮತ್ತು ಖುವೈಲಿದ್‌ನ ಮಗಳಾಗಿರುವ ಖದೀಜಾ.

ನಾನು: ಅವರು ಅಲ್ಲಿ ಮಾಡಿದ್ದೇನು?

ಅಬ್ಬಾಸ್: ಅವರು ನಮಾಝ್ ಮಾಡಿದರು. ನನ್ನ ಸಹೋದರ ಪುತ್ರ ಮುಹಮ್ಮದ್‌ನ ಅಭಿಪ್ರಾಯದಂತೆ ಆತನ ಧರ್ಮವು ದೇವಧರ್ಮವಾಗಿದೆ. ಆತನಿಗೆ ಅಲ್ಲಾಹನಿಂದ ದಿವ್ಯವಾಣಿ ಬರುತ್ತಿದೆಯಂತೆ, ನನಗೆ ತಿಳಿದಿರುವ ಮಟ್ಟಿಗೆ ಈ ಭೂಮಿಯಲ್ಲಿ ಈ ಮೂರು ಮಂದಿಯ ಹೊರತು ಇನ್ನಾರೂ ಈ ಧರ್ಮವನ್ನು ಅನುಸರಿಸುತ್ತಿಲ್ಲ.

"ಈ ಮಾತುಗಳನ್ನು ಕೇಳಿದಾಗ ನಾನು ನಾಲ್ಕನೆಯವನಾದರೆ ಉತ್ತಮವಿತ್ತೆಂದು ಆಶಿಸಿದೆ."

## ಬೆಟ್ಟದ ಕಣಿವೆಯಲ್ಲಿ

ಪ್ರವಾದಿಯವರ(ಸ) ಮನೆತನವಾಗಿದ್ದ ಬನೂ ಹಾಶಿಮ್ ಮತ್ತು ಬನೂ ಮುತ್ತಲಿಬ್‌ಗಳಿಗೆ ಕುರೈಶರು ಸಾಮಾಜಿಕ ಬಹಿಷ್ಕಾರ ಘೋಷಿಸಿದರು. ಕೌಟುಂಬಿಕ ಒಲವಿನಿಂದಾಗಿ ಅವರು ಪ್ರವಾದಿಯವರಿಗೆ(ಸ) ನೆರವಾಗುತ್ತಿದ್ದರು. ಬನೂ ಹಾಶಿಮ್ ಮತ್ತು ಮುತ್ತಲಿಬ್ ಕುಟುಂಬಕ್ಕೆ ಸೇರಿದವರೊಡನೆ ವಿವಾಹ ಸಂಬಂಧ ಮಾಡಬಾರದು. ಅವರಿಗೆ ಸಹಾಯ ಮಾಡಬಾರದು. ಆಹಾರ ಪಾನೀಯಗಳನ್ನು ನೀಡಬಾರದು. ಈ ರೀತಿ ಬಹಿಷ್ಕಾರ ಪತ್ರವನ್ನು ಬರೆದು ಕುರೈಶಿ ನಾಯಕರು ಸಹಿ ಹಾಕಿ ಕಅಬಾದಲ್ಲಿ ತೂಗು ಹಾಕಿದರು. ಕುರೈಶರ ಅಕ್ರಮ ಬಹಿಷ್ಕಾರ ಘೋಷಣೆಯ ಬಳಿಕ ಅಬೂತಾಲಿಬ್‌ರು ಪ್ರವಾದಿ(ಸ) ಮತ್ತು ಸಂಬಂಧಿಕರನ್ನು ಕರೆದುಕೊಂಡು 'ಶಿಅಬ್ ಅಬೀತಾಲಿಬ್' ಎಂಬ ಕಣಿವೆಗೆ ಹೋಗಿ ಆಶ್ರಯ ಪಡೆದರು. ಆ ಕೂಟದಲ್ಲಿ ಖದೀಜರೂ(ರ) ಇದ್ದರು. ಮೂರು ವರ್ಷಗಳ ಕಾಲ ಅವರು ಆ ಕಣಿವೆಯಲ್ಲಿ ಹಸಿವು ಬಾಯಾರಿಕೆಗಳಿಂದ ಬಳಲಿದರು. ಹಸಿವೆಯ ತೀಕ್ಷ್ಣತೆಯಿಂದ ಹಸಿರೆಲೆಗಳನ್ನೂ ತಿನ್ನಬೇಕಾಯಿತು. ಹಸಿವಿನಿಂದ ಬಾಡಿದ ಮುಗ್ಧ ಮಕ್ಕಳ ಆಕ್ರಂದನವು ಹೃದಯ ಭೇದಕವಾಗಿತ್ತು. ಆದರೆ ಕಠೋರ ಹೃದಯದ ಕುರೈಶರು ಅವರ ಸಂಕಷ್ಟವನ್ನು ನೋಡಿ ನಗುತ್ತಿದ್ದರು. ಖದೀಜಾರ(ರ) ನಿಕಟ ಸಂಬಂಧಿಕ ಹಕೀಮ್ ಬಿನ್ ಹಿಶಾಮ್‌ರು ಕೆಲವೊಮ್ಮೆ ಆಹಾರ ಪದಾರ್ಥಗಳನ್ನು ಅವರಿಗೆ ತಲಪಿಸಲು ಪ್ರಯತ್ನಿಸುತ್ತಿದ್ದರು. ಆದರೆ ಕುರೈಶರು ಅದಕ್ಕೆ ಒಪ್ಪಿಗೆ ನೀಡುತ್ತಿರಲಿಲ್ಲ. ಕೊನೆಗೆ ಕೆಲವು ಕುರೈಶಿ ಯುವಕರೇ ಮುಂದೆ ಬಂದು ಬಹಿಷ್ಕಾರದ ಘೋಷಣೆಗಳನ್ನು ಹಿಂತೆಗೆದುಕೊಳ್ಳಲು ನಾಯಕರನ್ನು ಒತ್ತಾಯಿಸತೊಡಗಿದರು. ಅಷ್ಟರಲ್ಲೇ ಒಪ್ಪಂದ ಪತ್ರಕ್ಕೆ ಗೆದ್ದಲು ಹಿಡಿದಿತ್ತು.

ಕಣಿವೆಯಲ್ಲಿ ವಾಸವಾಗಿದ್ದ ಕಾಲದಲ್ಲಿ ಪ್ರವಾದಿ(ಸ) ಖದೀಜಾ(ರ) ಮತ್ತು ಅವರ ಪುತ್ರಿಯರು ಅನುಭವಿಸಿದ ಯಾತನೆಗಳು ವರ್ಣನಾತೀತವಾಗಿವೆ.

ಖದೀಜಾರು(ರ) ಇಸ್ಲಾಮ್ ಮತ್ತು ಪ್ರವಾದಿವರ್ಯರಿಗಾಗಿ ಮಾಡಿದ ಮಹಾ ತ್ಯಾಗ ಮತ್ತು ಸೇವೆಗಳ ಫಲ ಸ್ವರೂಪವಾಗಿ ಅಲ್ಲಾಹನು ಅವರಿಗೆ ಸ್ವರ್ಗದಲ್ಲಿ ಉನ್ನತ ಪದವಿಯ ವಾಗ್ದಾನ ನೀಡಿದನು.

## ಶೋಕವರ್ಷ

ಕುರೈಶರು ಬಹಿಷ್ಕಾರ ನೀತಿಯನ್ನು ತೊರೆದು, ಶಿಅಬ್ ಅಬೀತಾಲಿಬ್ ಕಣಿವೆಯ ದುರಂತಮಯ ಜೀವನದಿಂದ ವಿಮೋಚನೆ ದೊರೆತ ಕೆಲವೇ ಸಮಯದಲ್ಲಿ ಸತ್ಯವಿಶ್ವಾಸಿಯರ ಮಾತೆ, ಪ್ರವಾದಿಯವರ(ಸ) ಪ್ರಿಯತಮೆ ಹ. ಖದೀಜಾ ಶಾಶ್ವತವಾಗಿ ಇಹಲೋಕಕ್ಕೆ ವಿದಾಯ ಕೋರಿದರು. ಅದು ಪ್ರವಾದಿತ್ವ ದೊರೆತ 10ನೇ ವರ್ಷದ ರಮಝಾನ್ ತಿಂಗಳಾಗಿತ್ತು. ಮರಣ ವೇಳೆ ಅವರಿಗೆ 65 ವರ್ಷ ವಯಸ್ಸಾಗಿತ್ತು. 25 ವರ್ಷಗಳ ಕಾಲ ಅವರು ಪ್ರವಾದಿಯ ಪತ್ನಿಯಾಗಿ ಬಾಳಿದರು. ಇಷ್ಟು ಸುದೀರ್ಘ ಕಾಲ ಪ್ರವಾದಿಯೊಂದಿಗೆ ಬಾಳುವ ಭಾಗ್ಯ ಪ್ರವಾದಿ ಪತ್ನಿಯರಲ್ಲಿ ಇನ್ನಾರಿಗೂ ದೊರೆತಿಲ್ಲ.

ಖದೀಜಾರ(ರ) ನಿಧನವು ಪ್ರವಾದಿವರ್ಯರನ್ನು(ಸ) ಅತ್ಯಂತ ದುಃಖಕ್ಕೀಡುಮಾಡಿತು. ಖದೀಜಾರು(ರ) ಅವರ ಆಧಾರ ಮತ್ತು ನೆರಳಾಗಿದ್ದರು. ಅತ್ಯಂತ ಸಂದಿಗ್ಧ ಘಟ್ಟದಲ್ಲಿ ಆ ಆಸರೆ ತಪ್ಪಿತು. ಖದೀಜಾ(ರ) ಮತ್ತು ಅಬೂತಾಲಿಬ್‌ರು ಕೆಲವಾರು ದಿನಗಳ ಅಂತರದಲ್ಲಿ ನಿಧನರಾದರು. ತನ್ಮಧ್ಯೆ ಶತ್ರುಗಳ ಕಿರುಕುಳವು ಹಿಂದಿಗಿಂತ ಹೆಚ್ಚಿತು. ಒಮ್ಮೆ ಓರ್ವ ದುಷ್ಟನು ಪ್ರವಾದಿಯವರ(ಸ) ತಲೆಗೆ ಕೆಸರೆರಚಿ ಅಪಮಾನಿಸಿದನು. ಪ್ರವಾದಿ(ಸ) ಮನೆಗೆ ತಲಪಿದಾಗ ಪುತ್ರಿಯೋರ್ವಳು ಅವರನ್ನು ಇದಿರುಗೊಂಡಳು. ಆಗ ಕಂಡ ದೃಶ್ಯವು ವೇದನಾಜನಕವಾಗಿತ್ತು. ಪ್ರೀತಿಯ ತಂದೆಯ ಶಿರವು ಕೆಸರಿನಿಂದ ತುಂಬಿದೆ! ತಾಯಿಯ ಅಗಲಿಕೆಯ ದುಃಖವೇ ಮಾಯವಾಗಿರಲಿಲ್ಲ. ಈ ಶೋಚನೀಯ ದೃಶ್ಯವನ್ನು ಕಂಡಾಗ ಆ ಪ್ರಿಯ ಪುತ್ರಿಯು ಬಿಕ್ಕಿ ಬಿಕ್ಕಿ ಅತ್ತಳು. ಮುದ್ದು ಮಗಳನ್ನು ಸಾಂತ್ವನಗೊಳಿಸುತ್ತಾ, ಪ್ರವಾದಿಯವರು(ಸ) "ಪ್ರಿಯ ಮಗಳೇ! ಅಳಬೇಡ, ಅಲ್ಲಾಹನು ನಿನ್ನ ತಂದೆಯನ್ನು ಕಾಪಾಡುವನು" ಎಂದರು.

ಖದೀಜಾ(ರ) ಮತ್ತು ಅಬೂ ತಾಲಿಬ್‌ರು ಮರಣ ಹೊಂದಿದ ವರ್ಷವನ್ನು ಪ್ರವಾದಿ(ಸ) 'ಶೋಕ ವರ್ಷ'ವೆಂದು ಕರೆದಿದ್ದರು.

□□□

# ಹಝ್ರತ್ ಸೌದಃ(ರ)

ಅತಿ ವಿಶಾಲವಾದ ಅರಬ್ ಮರುಭೂಮಿಯ ಮೂಲಕ ಒಂದು ಖಾಫಿಲ(ವಣಿಕ ತಂಡ)ವು ವೇಗವಾಗಿ ಸಾಗುತ್ತಿದೆ. ದೂರದ ಅಬಿಸೀನಿಯಾದೆಡೆಗೆ ಸಂಚರಿಸುತ್ತಿರುವ ಆ ತಂಡದಲ್ಲಿ ಸ್ತ್ರೀಯರೂ ಪುರುಷರೂ ಇದ್ದಾರೆ. ಅವರ ಮುಖ ಕಮಲಗಳಲ್ಲಿ ಭಯ ಮತ್ತು ದುಃಖದ ಛಾಯೆಯು ವ್ಯಾಪಿಸಿತ್ತು. ಅದು ಇಸ್ಲಾಮ್‌ನಲ್ಲಿ ವಿಶ್ವಾಸವಿರಿಸಿದರೆಂಬ ಕಾರಣಕ್ಕಾಗಿ ಶತ್ರುಗಳ ಕ್ರೂರ ಹಿಂಸೆಗಳಿಗೆ ಬಲಿಯಾದ ಕೆಲವಾರು ಮುಸ್ಲಿಮರ ಪುಟ್ಟ ತಂಡವಾಗಿತ್ತು. ಅವರು ಅಲ್ಲಾಹನ ಮಾರ್ಗದಲ್ಲಿ ಮನೆ ಮತ್ತು ದೇಶವನ್ನು ತೊರೆದು ದೂರದ ಪರದೇಶಕ್ಕೆ ವಲಸೆ ಹೋಗುತ್ತಿದ್ದಾರೆ. ಹ. ಸೌದಃ(ರ) ಮತ್ತು ಅವರ ಪತಿ ಸಕ್ರಾನ್ ಬಿನ್ ಅಮ್ರ್(ರ) ಆ ತಂಡದಲ್ಲಿದ್ದಾರೆ.

## ಇಸ್ಲಾಮಿಗೆ

ಉನ್ನತ ಕುಟುಂಬವೊಂದರಲ್ಲಿ ಸೌದಃ(ರ) ಹುಟ್ಟಿದರು. ಅವರ ತಂದೆ ಸಮ್‌ಅ ಬಿನ್ ಖೈಸ್‌ರು ಪ್ರಖ್ಯಾತ ನಾಯಕರಾಗಿದ್ದರು. ಅವರ ಔದಾರ್ಯ ಮತ್ತು ಶೌರ್ಯವು ಎಲ್ಲರ ಪ್ರಶಂಸೆಗೆ ಪಾತ್ರವಾಗಿತ್ತು. ಅವರ ತಾಯಿಯ ಹೆಸರು ಶಮೂಸ್. ಮೂಢನಂಬಿಕೆ ಮತ್ತು ಕಂದಾಚಾರಗಳ ವಾತಾವರಣದಲ್ಲಿ ಸೌದಃ(ರ) ಬೆಳೆದಿದ್ದರೂ ಅವು ಅವರ ಮೇಲೆ ಪ್ರಭಾವ ಬೀರಿರಲಿಲ್ಲ. ಅಂತ್ಯ ಪ್ರವಾದಿ ಮುಹಮ್ಮದ್(ಸ) ಇಸ್ಲಾಮಿನ ದಾಯಭಾರದೊಂದಿಗೆ ರಂಗಕ್ಕಿಳಿದಾಗ ಅರಬರು ಅವರನ್ನು ಸಾಮೂಹಿಕವಾಗಿ ವಿರೋಧಿಸಿದರು. ಕೆಲವಾರು ಮಂದಿಯಷ್ಟೇ ಪ್ರವಾದಿಯವರಲ್ಲಿ(ಸ) ವಿಶ್ವಾಸವಿರಿಸಿದ್ದರು. ವಿಶ್ವಾಸವಿರಿಸಿದವರನ್ನು ವೈರಿಗಳೂ ಕ್ರೂರವಾಗಿ ಮರ್ದಿಸಿದರು. ಈ ಹಿನ್ನೆಲೆಯಲ್ಲಿ ಪ್ರವಾದಿಯವರ(ಸ) ಬಳಿ ತಲಪಿದ ಹ.ಸೌದಃರು(ರ) ಇಸ್ಲಾಮ್ ಧರ್ಮ ಸ್ವೀಕರಿಸಿದರು. ವಿರೋಧದ ಬಿರುಗಾಳಿಯು ತೀವ್ರವಾಗಿದ್ದ ಕಾಲ. ಅರಬರ ಪರಂಪರಾಗತ ವಿಶ್ವಾಸಾಚಾರಗಳನ್ನು ಮೆಟ್ಟಿನಿಂತು ಇಸ್ಲಾಮ್ ಸ್ವೀಕರಿಸುವುದೆಂದರೆ ಮಹಾ ಸಾಹಸವೇ ಆಗಿತ್ತು. ಧೀರ ಮಹಿಳೆ ಸೌದಃ(ರ) ಆ ಸಾಹಸಕ್ಕೆ ಮುಂದಾದರು.

ಇಸ್ಲಾಮ್ ಸ್ವೀಕರಿಸಿದ್ದಕ್ಕಾಗಿ ಹ. ಸೌದಃ(ರ) ತೀವ್ರ ಯಾತನೆಗಳನ್ನು ಅನುಭವಿಸಬೇಕಾಯಿತು. ಸ್ವಕುಟುಂಬ ಮತ್ತು ಸಮಾಜವು ಶತ್ರುವಾಯಿತು. ಅವರನ್ನು ಇಸ್ಲಾಮಿನಿಂದ

ಮರಳಿಸಲು ವೈರಿಗಳು ಪ್ರಯತ್ನಿಸಿದರು. ಬೆದರಿಸಿ ನೋಡಿದರು. ಹಿಂಸಿಸಿದರು. ಆದರೆ ಅದರಿಂದ ಸೌದಃ ವಿಚಲಿತರಾಗಲಿಲ್ಲ. ಅವರು ಬೆಟ್ಟದಂತೆ ಅಚಲರಾಗಿ ನಿಂತರು.

## ಅಬಿಸೀನಿಯಾಕ್ಕೆ

ವೈರಿಗಳ ಉಪದ್ರವವು ಅಸಹನೀಯವಾದಾಗ ಪ್ರವಾದಿ(ಸ) ಹಿಜ್ರಾಕ್ಕೆ ಅನುಮತಿ ನೀಡಿದರು. ವೈರಿಗಳ ಕಣ್ಣು ತಪ್ಪಿಸಿ ಮುಸ್ಲಿಮರು ಸಣ್ಣ ಸಣ್ಣ ತಂಡಗಳಾಗಿ ಅಬಿಸೀನಿಯಾಕ್ಕೆ ನೆಲ ಮತ್ತು ಜಲಮಾರ್ಗಗಳಿಂದ ವಲಸೆ ಹೋದರು.

ಅಬಿಸೀನಿಯಾದಲ್ಲಿ ಆಶ್ರಯ ಪಡೆದ ಮುಸ್ಲಿಮರನ್ನು ಮಕ್ಕಾಕ್ಕೆ ಮರಳಿಸಲಿಕ್ಕಾಗಿ ಕುರೈಶರು ಒಂದು ನಿಯೋಗವನ್ನು ಕಳುಹಿಸಿದರು. ನಜ್ಜಾಶೀ ರಾಜನನ್ನು ಒಲಿಸಿಕೊಳ್ಳಲಿಕ್ಕಾಗಿ ಅಮೂಲ್ಯ ಉಡುಗೊರೆಗಳನ್ನು ಕಳುಹಿಸಿಕೊಟ್ಟರು. ಆದರೆ ರಾಜನು ಮುಸ್ಲಿಮರನ್ನು ಮರಳಿ ಕಳುಹಿಸಲು ಒಪ್ಪಲಿಲ್ಲ. ವೈರಿಗಳೇ ಪೆಚ್ಚಾಗಿ ಮರಳಬೇಕಾಯಿತು. ಕ್ರಮೇಣ ನಜ್ಜಾಶೀ ರಾಜನೂ ಇಸ್ಲಾಮ್ ಧರ್ಮ ಸ್ವೀಕರಿಸಿದರು.

ದಿನಗಳೂ ತಿಂಗಳುಗಳೂ ಉರುಳಿದುವು. ಅದೊಂದು ದಿನ ಕುರೈಶರು ಸಾಮೂಹಿಕವಾಗಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿರುವರೆಂಬ ವದಂತಿಯು ಅಬಿಸೀನಿಯಾ ದಲ್ಲಿ ಹಬ್ಬಿತು. ತನ್ನಿಮಿತ್ತ ಅಬಿಸೀನಿಯಾದಲ್ಲಿದ್ದ ಅನೇಕ ಮುಸ್ಲಿಮ್ ಆಶ್ರಿತರು ಮಕ್ಕಾಕ್ಕೆ ಮರಳಿದರು. ಹಾಗೆ ಮರಳಿದವರಲ್ಲಿ ಹ. ಸೌದಃರ ಪತಿ ಸಕ್ರಾನ್‌ರೂ ಇದ್ದರು. ಕುರೈಶರು ಇಸ್ಲಾಮ್ ಸ್ವೀಕರಿಸಿರುವರೆಂಬ ಸುದ್ದಿಯು ಕಟ್ಟುಕತೆಯೆಂದು ಅವರು ಮಕ್ಕಾಕ್ಕೆ ಮರಳಿದ ಬಳಿಕವಷ್ಟೇ ಮನವರಿಕೆಯಾಯಿತು. ಹೆಚ್ಚಿನವರು ಮರಳಿ ಅಬಿಸೀನಿಯಾಕ್ಕೆ ಹೋದರು. ಸೌದಃರ(ರ) ಪತಿ ಹಾಗೂ ಇನ್ನು ಕೆಲವರು ಉಳಿದುಕೊಂಡರು. ಕೆಲವೇ ದಿನಗಳಲ್ಲಿ ಸೌದಃರ(ರ) ಪತಿಯು ರೋಗಪೀಡಿತರಾಗಿ ಮರಣ ಹೊಂದಿದರು. ಸಕ್ರಾನ್‌ರಿಗೆ ಸೌದಃ ರಲ್ಲಿ(ರ) ಅಬ್ದುರ್ರಹ್ಮಾನ್ ಎಂಬ ಒಂದು ಮಗು ಜನಿಸಿತ್ತು.

## ಸತ್ಯವಿಶ್ವಾಸಿಗಳ ಮಾತೆ

ಪತಿಯ ಅನಿರೀಕ್ಷಿತ ನಿಧನದಿಂದ ಸೌದಃ(ರ) ದುಃಖಕ್ಕೀಡಾದರು. ವೈರಿಗಳ ಹಿಂಸೆಯು ತೀಕ್ಷ್ಣವಾಗಿದ್ದಂತಹ ಸಂದರ್ಭದಲ್ಲಿ ತನ್ನ ಏಕಾವಲಂಬವಾಗಿದ್ದ ಪತಿಯು ಅವರನ್ನು ಶಾಶ್ವತವಾಗಿ ಬಿಟ್ಟಗಲಿದರು. ಒಮ್ಮೆ ಹ. ಖೌಲರು(ರ) ಪ್ರವಾದಿಯವರ(ಸ) ಬಳಿ ಹೋಗಿ ಸೌದಃರನ್ನು(ರ) ವಿವಾಹವಾಗಬೇಕೆಂದು ವಿನಂತಿಸಿದರು. ಖದೀಜಾರ ಅಗಲಿಕೆಯಿಂದ ಪ್ರವಾದಿಯವರು(ಸ) ದುಃಖಿತರಾಗಿದ್ದರು. ಅಲ್ಲಾಹನ ಮಾರ್ಗದಲ್ಲಿ ಅನೇಕ ತ್ಯಾಗಗಳನ್ನು ಮಾಡಿರುವ ಹಾಗೂ ಪತಿಯ ವಿರಹದಿಂದ ನಿರಾವಲಂಬರಾಗಿರುವ ಆ ಮಹಿಳಾ ರತ್ನವನ್ನು ಪತ್ನಿಯಾಗಿ ಸ್ವೀಕರಿಸಲು ಪ್ರವಾದಿ(ಸ) ಒಪ್ಪಿದರು. ಸೌದಃರ(ರ)

ತಂದೆಗೂ ಸಂತೋಷವಾಯಿತು. ಶೀಘ್ರದಲ್ಲಿಯೇ ವಧುಗೃಹದಲ್ಲಿ ವಿವಾಹ ಕರ್ಮವು ಜರಗಿತು. ಹ. ಸೌದಃರು(ರ) 'ಉಮ್ಮುಲ್ ಮುಅ್‌ಮಿನೀನ್' (ಸತ್ಯವಿಶ್ವಾಸಿಗಳ ಮಾತೆ) ಆದರು. ನಾನ್ನೂರು ದಿರ್ಹಮ್ ಮಹ್ರ್ (ವಧು ಧನ) ನಿಗದಿಪಡಿಸಲಾಗಿತ್ತು.

ಹ. ಸೌದಃ(ರ) ಮತ್ತು ಆಯಿಶಾರ(ರ) ವಿವಾಹವು ಸಾಮಾನ್ಯವಾಗಿ ಒಂದೇ ಕಾಲದಲ್ಲಿ ನಡೆದಿತ್ತು. ಆದ್ದರಿಂದ ಯಾರ ವಿವಾಹ ಮೊದಲು ನಡೆಯಿತೆಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಖದೀಜರ(ರ) ಮರಣಾನಂತರ ಪ್ರವಾದಿ(ಸ) ಮೊದಲು ಆಯಿಶಾರನ್ನು(ರ) ವಿವಾಹವಾದರೆಂದು ತಬ್ರಾನಿ ಹೇಳುತ್ತಾರೆ. ಮೊದಲು ಆಯಿಶಾರನ್ನು ವಿವಾಹವಾಗಿದ್ದರೂ 'ಸಮ್ಮಿಲನ ಕರ್ಮ'ವು ಸೌದಃರೊಂದಿಗೆ ಮೊದಲು ಜರಗಿದೆಯೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇಬ್ನು ಇಸ್ಹಾಕ್‌ರ ವರದಿಯಂತೆ ಪ್ರವಾದಿವರ್ಯರು(ಸ) ಖದೀಜಾರ ಬಳಿಕ ಪ್ರಥಮವಾಗಿ ಸೌದಃರನ್ನು(ರ) ವಿವಾಹವಾಗಿದ್ದರು. ಬಹುವಂಶ ಹದೀಸ್ ಸಂಗ್ರಹಕಾರರ (ಮುಹದ್ದಿಸ್) ಅಭಿಪ್ರಾಯವೂ ಇದುವೇ ಆಗಿದೆ.

## ಮದೀನಾಕ್ಕೆ

ಪ್ರವಾದಿ(ಸ) ಮದೀನಾಕ್ಕೆ ವಲಸೆ ಹೋದಾಗ ಕುಟುಂಬದ ಸದಸ್ಯರನ್ನು ಕರೆದೊಯ್ದಿರಲಿಲ್ಲ. ಮದೀನಾಕ್ಕೆ ತಲಪಿ ಅಲ್ಲಿ ಸುಪ್ರಸಿದ್ಧವಾದ ಮಸ್ಜಿದುನ್ನಬವಿಯನ್ನೂ ಅದರ ಪಕ್ಕದಲ್ಲೇ ಮನೆಯನ್ನೂ ಕಟ್ಟಿಸಿದ ಬಳಿಕ ಸೌದಃ(ರ) ಹಾಗೂ ಕುಟುಂಬದ ಇತರ ಮಂದಿಯನ್ನು ಕರೆತರಲಿಕ್ಕಾಗಿ ಝೈದ್(ರ) ಮತ್ತು ಅಬೂರಾಫಿಇರನ್ನು(ರ) ಮಕ್ಕಾಕ್ಕೆ ಕಳುಹಿಸಿದರು. ಎರಡು ಒಂಟೆ ಮತ್ತು ದಾರಿ ವೆಚ್ಚಕ್ಕಾಗಿ 500 ದಿರ್ಹಮನ್ನೂ ಅವರಿಗೆ ನೀಡಿದ್ದರು. ಸೌದಃ(ರ), ಉಮ್ಮು ಕುಲ್ಸೂಮ್(ರ) ಮತ್ತು ಫಾತಿಮರನ್ನು(ರ) ಅವರು ಕರೆ ತಂದರು. ಪ್ರವಾದಿಯವರು(ಸ) ಸೌದಃರನ್ನು(ರ) ಅವರಿಗಾಗಿ ನಿರ್ಮಿಸಿದ ಮನೆಯಲ್ಲಿ ವಾಸಗೊಳಿಸಿದರು.

ಇದು ಹ. ಸೌದಃರ(ರ) ಎರಡನೇ ಹಿಜ್‌ರ. ಅಲ್ಲಾಹನ ಮಾರ್ಗದಲ್ಲಿ ಎರಡು ಬಾರಿ ಹಿಜ್ರತ್ ಮಾಡುವ ಭಾಗ್ಯ ಸಿದ್ಧಿಸಿದ ಕೆಲವೇ ಮಂದಿಯಲ್ಲಿ ಸೌದಃ(ರ) ಒಬ್ಬರು. ಮದೀನಾ ತಲಪುವುದರೊಂದಿಗೆ ಆ ತ್ಯಾಗಮಯ ಜೀವನದ ಅತ್ಯಂತ ದುರಂತ ಘಟ್ಟವೊಂದು ಮುಗಿಯಿತು. ಮದೀನಾದ ಜೀವನವು ಸರ್ವಸಾಮಾನ್ಯವಾಗಿ ನೆಮ್ಮದಿ ಮತ್ತು ಸಂತೃಪ್ತಿಯಿಂದ ಕೂಡಿತ್ತು.

## ಗುಣಮಹಿಮೆ

ಹ. ಸೌದಃರು(ರ) ಪರಿಪಕ್ವ ಬುದ್ಧಿಯವರು ಮತ್ತು ವಿವೇಕಮತಿಯಾಗಿದ್ದರು. ಅವರು ವ್ಯವಹಾರಗಳನ್ನು ಬಹಳ ಗಂಭೀರವಾಗಿ ನೋಡಿಕೊಳ್ಳುತ್ತಿದ್ದರು. ಬಾಲ್ಯದಲ್ಲಿಯೇ

ಘನತೆ ಮತ್ತು ಗಾಂಭೀರ್ಯವು ಅವರಲ್ಲಿ ಎದ್ದು ತೋರುತ್ತಿತ್ತು. ಕೆಲವೊಮ್ಮೆ ಹಾಸ್ಯ ಪ್ರಜ್ಞೆಯೂ ವ್ಯಕ್ತವಾಗುತ್ತಿತ್ತು. ಅವರ ಕೆಲವು ಹಾಸ್ಯ ಚಟಾಕಿಗಳು ಪ್ರವಾದಿರನ್ನು(ಸ) ನಗಿಸುವಂತಿದ್ದುವು. ಒಮ್ಮೆ ಪ್ರವಾದಿಯವರೊಡನೆ(ಸ) ಹೇಳಿದರು:

"ನಾನು ಕಳೆದ ರಾತ್ರಿ ನಿಮ್ಮ ಹಿಂದೆ ನಮಾಝ್ ಮಾಡಿದೆ. ತುಂಬಾ ಹೊತ್ತು ಸುಜೂದ್(ಸಾಷ್ಟಾಂಗ)ನಲ್ಲಿಯೇ ಕಳೆಯುತ್ತಿರುವಾಗ ನನ್ನ ಮೂಗು ಒಡೆದು ರಕ್ತ ಸುರಿಯುವುದೋ ಎಂದು ಹೆದರಿದೆ. ಆ ಬಳಿಕದ ಸಮಯವೆಲ್ಲವನ್ನೂ ಮೂಗು ಹಿಡಿದುಕೊಂಡೇ ಕಳೆದೆ." ಈ ಮಾತುಗಳನ್ನು ಕೇಳಿ ಪ್ರವಾದಿ(ಸ) ನಕ್ಕುಬಿಟ್ಟರು.

ದಾನಧರ್ಮಗಳಲ್ಲಿ ಸೌದಃರಿಗೆ(ರ) ತುಂಬಾ ಒಲವಿತ್ತು. ಒಮ್ಮೆ ಹ. ಉಮರ್‌ರು(ರ) ಚೀಲದಲ್ಲಿ ದಿರ್ಹಮ್‌ಗಳನ್ನು ತುಂಬಿಸಿ ಕಳುಹಿಸಿ ಕೊಟ್ಟರು. ಚೀಲದಲ್ಲಿ ಒಣ ಖರ್ಜೂರವನ್ನು ಇರಿಸಬೇಕೇ ವಿನಾ ದಿರ್ಹಮ್‌ಗಳನ್ನು ತುಂಬಿಡಬಾರದೆಂದು ಅವರು ಅವೆಲ್ಲವನ್ನೂ ಬಡಬಗ್ಗರಿಗೆ ದಾನ ಮಾಡಿದರು.

ಸೌದಃ(ರ) ಮತ್ತು ಆಯಿಶಾರ(ರ) ಸವತಿ ಸಂಬಂಧವು ಆದರ್ಶಪ್ರಾಯವಾಗಿತ್ತು. ಗೃಹಕೃತ್ಯಗಳಲ್ಲಿ ಸೌದಃರು(ರ) ಆಯಿಶಾರಿಗೆ(ರ) ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಪ್ರವಾದಿಯವರ(ಸ) ಇತರ ಪತ್ನಿಯರೊಂದಿಗೆ ಹೋಲಿಸಿದಾಗ ಸೌದಃ(ರ) ಮತ್ತು ಆಯಿಶ(ರ) ಹೆಚ್ಚು ಕಾಲ ಸವತಿಗಳಾಗಿ ಬಾಳಿದ್ದಾರೆ. ಆದರೂ ಅವರ ಪರಸ್ಪರ ವರ್ತನೆಗಳಲ್ಲಿ ಯಾವ ಅಹಿತಕರ ಘಟನೆಯೂ ನಡೆಯಲಿಲ್ಲ. ಸೌದಃರ(ರ) ಗುಣಮಹಿಮೆಯನ್ನು ಹೊಗಳುತ್ತಾ ಆಯಿಶಾ(ರ) ಹೇಳುತ್ತಾರೆ: "ನಾನು ನೋಡಿರುವ ಮಟ್ಟಿಗೆ ಅಸೂಯೆಯ ಗಂಧಗಾಳಿ ಸೋಂಕದ ಸ್ತ್ರೀ ಸೌದಃ(ರ) ಮಾತ್ರವಾಗಿದ್ದಾರೆ."

ಹಝ್ರತ್ ಸೌದಃರಿಂದ(ರ) ಒಟ್ಟು ಐದು ಹದೀಸ್‌ಗಳು ನಿವೇದಿಸಲ್ಪಟ್ಟಿವೆ. ಅವುಗಳಲ್ಲೊಂದನ್ನು ಇಮಾಮ್ ಬುಖಾರಿ ಉಲ್ಲೇಖಿಸಿದ್ದಾರೆ.

ಪ್ರವಾದಿಯವರ(ಸ) ಮರಣಾನಂತರ ಹ. ಸೌದಃರು(ರ) ಸುಮಾರು 13 ವರ್ಷ ಕಾಲ ಬದುಕಿದ್ದರು. ಹ. ಉಮರ್‌ರು(ರ) ಆಡಳಿತದ ಕೊನೆಯ ಕಾಲದಲ್ಲಿ ಹ.ಸೌದಃ(ರ) ನಿಧನರಾದರು. ಪ್ರವಾದಿಯವರಿಗೆ(ಸ) ಸೌದಃರಲ್ಲಿ(ರ) ಸಂತಾನವಾಗಿರಲಿಲ್ಲ.

□□□

# ಹಝ್ರತ್ ಆಯಿಶಾ(ರ)

ಹ. ಆಯಿಶಾ(ರ), ಅವರ್ಣನೀಯ ಗುಣ ವೈಶಿಷ್ಟ್ಯಗಳ ಅನಶ್ವರ ಹೆಸರು. ಪ್ರವಾದಿವರ್ಯರ(ಸ) ಪತ್ನಿಯರ ಪೈಕಿ ವಿದ್ವತ್ತು, ಬುದ್ಧಿಶಕ್ತಿ ಮತ್ತು ಸೌಂದರ್ಯಗಳಲ್ಲಿ ಆಯಿಶಾರನ್ನು(ರ) ಮೀರಿಸುವವರು ಯಾರೂ ಇರಲಿಲ್ಲ. ಆದ್ದರಿಂದಲೇ ಅವರು ಪ್ರವಾದಿಯ ಪತ್ನಿಯರಲ್ಲಿ ಅಗ್ರಗಣ್ಯರಾದರು. ಪ್ರವಾದಿವರ್ಯರೊಡನೆ(ಸ) ನಿಕಟವಾಗಿ ಬೆರೆತು ಅವರ ಜೀವನ ರೀತಿಯನ್ನು ಕೂಲಂಕಷವಾಗಿ ಕಲಿಯಲು ಆಯಿಶಾರಂತೆ(ರ) ಇನ್ನಾರಿಗೂ ಸಾಧ್ಯವಾಗಲಿಲ್ಲ.

ಪ್ರವಾದಿತ್ವ(ನುಬುವ್ವತ್)ದ ನಾಲ್ಕನೇ ವರ್ಷದಲ್ಲಿ ಆಯಿಶಾ(ರ) ಜನಿಸಿದರು. ಆಯಿಶಾರ(ರ) ಬುದ್ಧಿವಂತಿಕೆ ಮತ್ತು ಪ್ರತಿಭೆಗಳು ಬಾಲ್ಯದಲ್ಲಿಯೇ ಗೋಚರಿಸಿದ್ದುವು. ಚಿಕ್ಕಂದಿನ ಘಟನೆಗಳೆಲ್ಲವೂ ಅವರಿಗೆ ಚೆನ್ನಾಗಿ ನೆನಪಿತ್ತು. ಗೊಂಬೆ ಮತ್ತು ಜೋಕಾಲಿಯು ಅವರ ಅಚ್ಚುಮೆಚ್ಚಿನ ಆಟವಾಗಿತ್ತು.

## ವಿವಾಹ

ಮುಹಮ್ಮದ್‌ರು(ಸ) ಪ್ರವಾದಿತ್ವದ ಹತ್ತನೇ ವರ್ಷದಲ್ಲಿ ಆಯಿಶಾ(ರ)ರನ್ನು ವಿವಾಹವಾದರು. ವಿವಾಹ ಧನ (ಮಹ್ರ್) 500 ದಿರ್ಹಮ್ ನೀಡಲಾಗಿತ್ತು. ವಿವಾಹವು ಶವ್ವಾಲ್ ತಿಂಗಳಲ್ಲಿ ಜರಗಿತ್ತು. ಮೊದಲು ಝುಬೈರ್ ಬಿನ್ ಮುತ್‌ಯಿಮ್‌ರ ಮಗನನ್ನು ವರನಾಗಿ ನಿರ್ಣಯಿಸಲಾಗಿತ್ತು. ಅವರ ಕುಟುಂಬವು ಇಸ್ಲಾಮ್ ಸ್ವೀಕರಿಸಲಿಲ್ಲ. ಅಬೂಬಕರ್‌ರ ಮಗಳನ್ನು ವಿವಾಹವಾದರೆ ನಮ್ಮ ಮನೆಗೂ ಇಸ್ಲಾಮ್ ಪ್ರವೇಶಿಸುವುದೆಂಬ ಭೀತಿಯಿಂದ ಅವರು ಸಂಬಂಧವನ್ನು ತಿರಸ್ಕರಿಸಿದರು. ಅದನ್ನು ಆಯಿಶಾರ(ರ) ಸೌಭಾಗ್ಯವೆಂದೇ ಹೇಳಬಹುದು.

## ಹಿಜ್ರತ್

ಪ್ರವಾದಿ(ಸ) ಮತ್ತು ಅಬೂಬಕರ್(ರ) ಹಿಜ್ರತ್ ಹೋದ ಬಳಿಕ ಆಯಿಶಾರು(ರ), ತಾಯಿ ಉಮ್ಮು ರೂಮಾನ್, ಸಹೋದರ ಅಬ್ದುಲ್ಲಾ ಮತ್ತು ಸಹೋದರಿ ಅಸ್ಮಾರೊಂದಿಗೆ

ಮದೀನಕ್ಕೆ ತೆರಳಿದರು. ಮದೀನಾದ ಹವಾಮಾನವು ಆಯಿಶಾರಿಗೆ(ರ) ಹಿಡಿಸಲಿಲ್ಲ. ಅಲ್ಲಿ ಅವರಿಗೆ ಜ್ವರ ಬಂತು. ಜ್ವರದ ತೀವ್ರತೆಯಿಂದ ಅವರ ತಲೆಗೂದಲುಗಳು ಉದುರಿದುವು.

## ಮಧುಚಂದ್ರ

ಜ್ವರದಿಂದ ಗುಣಮುಖಗೊಂಡ ಕೆಲವು ದಿನಗಳ ಬಳಿಕ ಮನೆಯಲ್ಲಿ ಸಮ್ಮಿಲನ ಕರ್ಮ ಜರಗಿತು. ಅಂದು ಆಯಿಶಾರಿಗೆ(ರ) 9 ವರ್ಷ ವಯಸ್ಸು. ಆದೊಂದು ದಿನ ಬೆಳಿಗ್ಗೆ ಆಯಿಶಾರು(ರ) ತನ್ನ ಗೆಳತಿಯರೊಡನೆ ಉಯ್ಯಾಲೆಯಾಡುತ್ತಿದ್ದರು. ಉಮ್ಮು ರೂಮಾನ್ ಬಂದು ಅವರನ್ನು ಕರೆದುಕೊಂಡು ಹೋದರು. ಮುಖ ತೊಳೆದರು. ಮನೆಯಲ್ಲಿ ಕೆಲವು ಅನ್ಸಾರೀ ಮಹಿಳೆಯರಿದ್ದರು. ಅವರು ಆಯಿಶಾರ ತಲೆಬಾಚಿ ಕಟ್ಟಿದರು. 'ಸೌಭಾಗ್ಯವತಿ' ಯಾಗೆಂದು ಹರಸಿದರು. ಪ್ರವಾದಿ(ಸ) ಮನೆಗೆ ಬಂದಾಗಲಷ್ಟೇ ಆಯಿಶಾರಿಗೆ(ರ) ವಿಷಯ ಅರ್ಥವಾಯಿತು. ಅದು ಶವ್ವಾಲ್ ತಿಂಗಳಲ್ಲಿ ಜರಗಿತು. ಆ ತಿಂಗಳಲ್ಲಿ ವಿವಾಹ ಮಾಡಬಾರದೆಂದು ಅರಬರು ನಂಬಿದ್ದರು. ಒಂದಾನೊಂದು ಶವ್ವಾಲ್ ತಿಂಗಳಲ್ಲಿ ಕೊಲೆರಾ ಹಬ್ಬಿದ್ದುದೇ ಈ ಮೂಢನಂಬಿಕೆಗೆ ಕಾರಣವಾಗಿದ್ದಿತು. ಶವ್ವಾಲ್ ತಿಂಗಳಲ್ಲಿ ವಿವಾಹವಾದರೆ ಪತಿ-ಪತ್ನಿಯರಲ್ಲಿ ಪ್ರೀತಿ-ಸೌಹಾರ್ದವಿಲ್ಲದೆ ಮನೆಯಲ್ಲಿ ಸದಾ ಕಲಹವಾಗುವುದೆಂದು ಅರಬ್ ಹೆಂಗಸರು ನಂಬಿದ್ದರು. ಅದನ್ನು ಟೀಕಿಸುತ್ತಾ ಆಯಿಶಾರು(ರ) ಹೀಗೆನ್ನುತ್ತಿದ್ದರು:

"ನನ್ನ ವಿವಾಹ ಮತ್ತು ಸಮ್ಮಿಲನ ಕರ್ಮವು ಶವ್ವಾಲ್ ತಿಂಗಳಲ್ಲೇ ನಡೆದಿದೆ. ಪತಿಯ ಪ್ರೀತಿಯನ್ನು ನನಗಿಂತ ಹೆಚ್ಚು ಯಾರಿಂದಲೂ ಗಳಿಸಲಾಗಿಲ್ಲ."

## ಉಹುದ್ ಯುದ್ಧ

ಹಿಜ್ರಾ ಮೂರನೇ ವರ್ಷ ಉಹುದ್ ಯುದ್ಧ ನಡೆಯಿತು. ವೈರಿಗಳ ಆಕಸ್ಮಿಕ ಆಕ್ರಮಣದಿಂದ ಮುಸ್ಲಿಮರಿಗೆ ಭಾರೀ ನಾಶ ನಷ್ಟವುಂಟಾಯಿತು. ಸುಮಾರು 70 ಸಹಾಬಿಗಳು ಹುತಾತ್ಮರಾದರು. ಪ್ರವಾದಿವರ್ಯರಿಗೆ(ಸ) ಗಂಭೀರ ಗಾಯಗಳಾದುವು. ಆ ಸಂದರ್ಭದಲ್ಲಿ ಆಯಿಶಾ(ರ), ಉಮ್ಮು ಸುಲೈಮ್, ಫಾತಿಮ(ರ), ಉಮ್ಮು ಅಮ್ಮಾರ(ರ) ಮುಂತಾದ ಮಹಿಳಾ ರತ್ನಗಳು ಅಪ್ರತಿಮ ಧೈರ್ಯ ಸಾಹಸವನ್ನು ತೋರಿದ್ದರು. ಆಯಿಶಾರು(ರ) ಬಳಲಿದ ಗಾಯಾಳುಗಳಿಗೆ ನೀರು ಸರಬರಾಜು ಮಾಡುತ್ತಿದ್ದರು. ಅವರು ಯುದ್ಧರಂಗದಲ್ಲಿ ನೀರು ತುಂಬಿದ ಚರ್ಮದ ಚೀಲವನ್ನು ಹೊತ್ತು ಅತ್ತಿತ್ತ ಓಡಾಡುವ ದೃಶ್ಯ ಸ್ಫೂರ್ತಿದಾಯಕವಾಗಿತ್ತು.

## ಅಪವಾದ

ಆಯಿಶಾರನ್ನು(ರ) ತೀವ್ರ ದುಃಖಕ್ಕೀಡು ಮಾಡಿದ ಘಟನೆಯೊಂದು ನಡೆಯಿತು. ಅದರ ಹಿಂದೆ ಕಪಟವಿಶ್ವಾಸಿಗಳ ಕರಾಳ ಕೈವಾಡವಿದ್ದಿತು. ಬನೂ ಮುಸ್ತಲಿಕ್ ಯುದ್ಧ

ಮುಗಿದು ಮರಳುವಾಗ ನಡೆದ ಆಕಸ್ಮಿಕ ಘಟನೆಯೊಂದನ್ನು ದುರುಪಯೋಗಿಸಿ ಸಚ್ಚರಿತೆ ಮತ್ತು ಪತಿವ್ರತೆಯಾಗಿದ್ದ ಆ ಮಹಿಳಾರತ್ನವನ್ನು ಕಳಂಕಿತಗೊಳಿಸಲು ಮುನಾಫಿಕರು ವಿಫಲ ಯತ್ನ ನಡೆಸಿದರು. ಆ ಮನೋವೇದಕ ಘಟನೆಯನ್ನು ಆಯಿಶಾ(ರ) ಹೀಗೆ ವಿವರಿಸುತ್ತಾರೆ:

"ಪ್ರವಾದಿವರ್ಯರು(ಸ) ಯಾತ್ರೆ ಹೋಗುವಾಗ ಪತ್ನಿಯರಲ್ಲಿ ಯಾರಾದರೊಬ್ಬರನ್ನು ಸಂಗಡ ಕರೆದೊಯ್ಯುತ್ತಿದ್ದರು. ಯಾರನ್ನು ಕರೆದೊಯ್ಯಬೇಕೆಂಬುದನ್ನು ಭಾಗ್ಯಚೀಟಿ ಎತ್ತಿ ನಿರ್ಧರಿಸಲಾಗುತ್ತಿತ್ತು. ವಾಡಿಕೆಯಂತೆ ಅದೊಂದು ಯಾತ್ರೆಗೆ ಚೀಟಿ ಹಾಕಿದಾಗ ನನ್ನ ಹೆಸರು ಬಂತು. ನಾನು ಪ್ರವಾದಿವರ್ಯರ(ಸ) ಸಂಗಡ ಹೊರಟೆ. ಅಂದು ಪರ್ದಾ(ಹಿಜಾಬ್) ಕಡ್ಡಾಯಗೊಳಿಸುವ ಆಯತ್‌ಗಳು ಅವತೀರ್ಣಗೊಂಡಿದ್ದುವು. ಆದ್ದರಿಂದಲೇ ನಾನು ಪಲ್ಲಕ್ಕಿಯಲ್ಲಿ ಕುಳಿತು ಯಾತ್ರೆ ಮಾಡುತ್ತಿದ್ದೆ."

"ಯುದ್ಧ ಮುಗಿಯಿತು. ನಾವೆಲ್ಲರೂ ಮದೀನಾಕ್ಕೆ ಮರಳಿದೆವು. ದಾರಿಯಲ್ಲಿ ಒಂದೆಡೆ ನಾವು ಸ್ವಲ್ಪ ಹೊತ್ತು ತಂಗಿದೆವು. ಪುನಃ ರಾತ್ರಿಯ ವೇಳೆ ಅಲ್ಲಿಂದ ಪ್ರಯಾಣ ಆರಂಭವಾಯಿತು. ಹೊರಡುವ ಸಮಯವಾಯಿತೆಂದು ಡಂಗುರ ಸಾರಿದಾಗ, ನಾನು ಬೇಗನೆ ಮರಳಬಹುದೆಂದು ಭಾವಿಸಿ ಮಲ ವಿಸರ್ಜನೆಗಾಗಿ ಸ್ವಲ್ಪ ದೂರ ಹೋದೆ. ಅಲ್ಲಿಂದ ಮರಳುವಾಗ ಕುತ್ತಿಗೆಯ ಸರ ಕಾಣೆಯಾಗಿತ್ತು. ಓಡಿಹೋಗಿ ಸರವನ್ನು ಹುಡುಕಲಾರಂಭಿಸಿದೆ.. ಅಷ್ಟರಲ್ಲಿ ವಾಹಕರು ಪಲ್ಲಕ್ಕಿಯನ್ನು ಎತ್ತಿ ಒಂಟೆಯ ಮೇಲಿರಿಸಿದರು. ನಾನು ಅದರೊಳಗಿರುವೆನೆಂದು ಅವರು ಭಾವಿಸಿದ್ದರು. ಅಂದು ಸ್ತ್ರೀಯರು ವಿಶೇಷವಾಗಿ ತಿನ್ನುತ್ತಿರಲಿಲ್ಲ. ಆದ್ದರಿಂದಲೇ ಸಾಮಾನ್ಯವಾಗಿ ಅವರು ಹೆಚ್ಚು ತೋರ ಅಥವಾ ಭಾರವಿರುತ್ತಿರಲಿಲ್ಲ. ನಾನಾದರೋ ಸಣ್ಣ ಪ್ರಾಯದ ಹುಡುಗಿ. ಆದುದರಿಂದ ವಾಹಕರು ಪಲ್ಲಕ್ಕಿಯ ಭಾರ ಕಡಿಮೆಯಾಗಿರುವುದನ್ನು ಗಮನಿಸಲಿಲ್ಲ. ಅವರು ಒಂಟೆಗಳನ್ನು ನಡೆಸಿ ಮುಂದೆ ಸಾಗಿದರು."

"ಸರ ಸಿಕ್ಕಿತು. ಹಿಂದಿರುಗಿ ಬಂದಾಗ ಎಲ್ಲರೂ ಹೊರಟು ಹೋಗಿದ್ದರು. ಯಾರಾದರೂ ನನ್ನನ್ನು ಹುಡುಕುತ್ತಾ ಮರಳಿ ಬರಬಹುದೆಂದು ಭಾವಿಸಿ ಅಲ್ಲಿಯೇ ಕುಳಿತೆ. ಸ್ವಲ್ಪ ಹೊತ್ತಿನಲ್ಲಿ ನನಗೆ ನಿದ್ದೆ ಬಂದು ಬಿಟ್ಟಿತು. ಬೀಡು ಬಿಟ್ಟ ಸ್ಥಳಗಳಲ್ಲಿ ಹೊರಡುವ ಗಡಿಬಿಡಿಯಲ್ಲಿ ಉಳಿದಿರಬಹುದಾದ ವಸ್ತುಗಳನ್ನು ನೋಡಲಿಕ್ಕಾಗಿ ಸಫ್ವಾನ್ ಬಿನ್ ಮುಅತ್ತಲ್(ರ) ಸದಾ ಸೇನೆಯ ಹಿಂದಿನಿಂದ ಸಂಚರಿಸುತ್ತಿದ್ದರು. ಅವರು ಬಳಿ ಬಂದಾಗ ನನ್ನನ್ನು ಗುರುತಿಸಿದರು. ಅವರು ಗಟ್ಟಿಯಾಗಿ 'ಇನ್ನಾಲಿಲ್ಲಾಹ್' ಎಂದು ಹೇಳುತ್ತಿರುವುದನ್ನು ಕೇಳಿ ನನಗೆ ಎಚ್ಚರವಾಯಿತು. ಥಕ್ಕನೆ ವಸ್ತ್ರದಿಂದ ಮುಖ ಮುಚ್ಚಿಕೊಂಡೆ. ನಾವು ಪರಸ್ಪರ ಒಂದು ಅಕ್ಷರವನ್ನೂ ನುಡಿಯಲಿಲ್ಲ. 'ಇನ್ನಾಲಿಲ್ಲಾಹ್" ಎಂದು ಹೇಳಿರುವುದರ ವಿನಾ ಅವರು ನನ್ನೊಡನೆ ಏನೂ ವಿಚಾರಿಸಲಿಲ್ಲ. ಅವರು ನನ್ನ ಮುಂದೆ ಒಂಟೆಯನ್ನು

ಮೊಣ ಕಾಲೂರಿಸಿದಾಗ ನಾನು ಅದರ ಬೆನ್ನೇರಿ ಕುಳಿತೆ. ಅವರು ಅದರ ಕಡಿವಾಣ ಹಿಡಿದು ಮುಂದೆ ನಡೆದರು. ಮಧ್ಯಾಹ್ನದ ವೇಳೆ ನಾವು ಸೇನೆಯು ಬೀಡುಬಿಟ್ಟಿದ್ದ ಸ್ಥಳಕ್ಕೆ ತಲಪಿದೆವು."

ಮದೀನಾಕ್ಕೆ ತಲಪಿದಾಗ ನಾನು ರೋಗಪೀಡಿತಳಾದೆ. ಒಂದು ತಿಂಗಳ ತನಕ ನನ್ನ ಆರೋಗ್ಯ ಸರಿಯಿರಲಿಲ್ಲ. ಜನರು ಏನೆಲ್ಲಾ ಹೇಳಿ ಪ್ರಚಾರ ಮಾಡುತ್ತಿದ್ದರು. ಅಬ್ದುಲ್ಲಾಹ್ ಬಿನ್ ಉಬೈ ಅದರ ಸೂತ್ರಧಾರನಾಗಿದ್ದ. ನನಗೆ ಮಾತ್ರ ಏನೂ ತಿಳಿದಿರಲಿಲ್ಲ. ನನಗೆ ಅಸೌಖ್ಯವಾದರೆ ಪ್ರವಾದಿವರ್ಯರು(ಸ) ಸಾಮಾನ್ಯವಾಗಿ ಬಹಳ ಅನುಕಂಪ ತೋರಿಸು ತ್ತಿದ್ದರು. ಆದರೆ ಈ ಬಾರಿ ಆ ಸ್ನೇಹಾನುಕಂಪ ಕಂಡು ಬರಲಿಲ್ಲ. ಮನೆಗೆ ಬಂದರೆ ಸಲಾಮ್ ಹೇಳಿ "ಅವಳು ಸೌಖ್ಯವಾಗಿದ್ದಾಳೆಯೇ?" ಎಂದು ವಿಚಾರಿಸಿ ಹೊರಟು ಹೋಗುತ್ತಿದ್ದರು. ಅವರ ಈ ವಿಚಿತ್ರ ವರ್ತನೆ ನನ್ನನ್ನು ಸಂದೇಹಗ್ರಸ್ತಗೊಳಿಸಿತು. ಆದರೆ ಅಪವಾದದ ಕಥೆಯನ್ನು ನಾನು ಅರಿತಿರಲಿಲ್ಲ.

ಸ್ವಲ್ಪ ಸೌಖ್ಯವಾಯಿತು. ಅದೊಂದು ರಾತ್ರಿ ಉಮ್ಮು ಮಿಸ್ತಹ್‌ರೊಡನೆ ನಾನು ಮಲ ವಿಸರ್ಜನೆಗಾಗಿ ಹೊರಗೆ ಹೋಗಿದ್ದೆ. ನಡೆಯುವಾಗ ವಸ್ತ್ರ ತೊಡರಿ ಅವರು ಬೀಳುವಂತಾದರು. ಅವರು "ಮಿಸ್ತಹ್ ನಾಶವಾಗಲಿ" ಎಂದು ಹಿಡಿಶಾಪ ಹಾಕಿದರು. ಆಗ ನಾನು ಪ್ರಶ್ನಿಸಿದೆ: "ಬದ್ರ್ ಯುದ್ಧದಲ್ಲಿ ಭಾಗವಹಿಸಿದ ಆ ವ್ಯಕ್ತಿಯನ್ನು ನೀವು ಬಯ್ಯುವುದೇ?" ಉಮ್ಮು ಮಿಸ್ತಹ್ ಹೇಳಿದರು: "ಅವನ ಕುಪ್ರಚಾರ ನಿನಗೆ ತಿಳಿದಿಲ್ಲವೇ?" ನಾನು ಆತನ ಕುಪ್ರಚಾರದ ಬಗ್ಗೆ ವಿಚಾರಿಸಿದಾಗ, ಅವರು ಅಪವಾದದ ಕಥೆಯನ್ನು ನನಗೆ ವಿವರಿಸಿದರು.

ಈ ಸುದ್ದಿ ತಿಳಿದ ಬಳಿಕ ನನ್ನ ರೋಗ ಉಲ್ಬಣಿಸಿತು. ನನಗೆ ತೌರು ಮನೆಗೆ ಹೋಗಲು ಅನುಮತಿ ನೀಡಬೇಕೆಂದು ಪ್ರವಾದಿಯನ್ನು(ಸ) ವಿನಂತಿಸಿದೆ. ಅವರು ಒಪ್ಪಿಗೆ ಕೊಟ್ಟರು. ನಾನು ತಾಯಿಯೊಡನೆ ವಿಷಯ ಚರ್ಚಿಸಿದೆ. ಅವರು ನನ್ನನ್ನು ಸಮಾಧಾನ ಪಡಿಸುತ್ತಾ ಹೀಗೆಂದರು: ಹಲವು ಪತ್ನಿಯರಿರುವ ವ್ಯಕ್ತಿಗೆ ಒಬ್ಬಾಕೆಯಲ್ಲಿ ಹೆಚ್ಚು ಪ್ರೀತಿಯಿದ್ದರೆ ಇತರರು ಅಪಪ್ರಚಾರ ಮಾಡುವುದು ಸ್ವಾಭಾವಿಕ. ಆದ್ದರಿಂದ ನೀನು ಅದಕ್ಕಾಗಿ ದುಃಖಿಸಬೇಡ.

"ಸುಬ್‌ಹಾನಲ್ಲಾ, ಅಯ್ಯೋ ಜನರು ಹೀಗೆಯೂ ಹೇಳಲಾರಂಭಿಸಿದರೇ!" ನಾನು ಅಚ್ಚರಿಪಟ್ಟೆ. ರಾತ್ರಿಯಿಡೀ ಅತ್ತೆ. ನಿದ್ದೆ ಬರಲೇ ಇಲ್ಲ. ಬೆಳಗಾದರೂ ಕಣ್ಣೀರು ನಿಲ್ಲಲಿಲ್ಲ.

ವಹ್ಯ್ ಬರುವುದು ತಡವಾದಾಗ ಪ್ರವಾದಿಯವರು(ಸ) ಅಲೀ ಮತ್ತು ಉಸಾಮ(ರ) ರನ್ನು ಕರೆದು, ನನ್ನ ವಿವಾಹ ವಿಚ್ಛೇದನ ಮಾಡುವ ಕುರಿತು ಅವರೊಡನೆ ಚರ್ಚಿಸಿದರು. ಉಸಾಮ ನನ್ನ ಪರವಾಗಿ ಮಾತನಾಡಿದರು. ನಿಮ್ಮ ಪತ್ನಿಯ ಕುರಿತು ಶುಭಕರವಲ್ಲದ

ಯಾವ ವಿಷಯವನ್ನೂ ಅರಿತಿಲ್ಲವೆಂದು ಅವರು ಹೇಳಿದರು. ಅಲಿಯೊಡನೆ ಪ್ರಶ್ನಿಸಿದಾಗ ಅವರು ಹೀಗೆಂದರು: "ಅಲ್ಲಾಹನು ನಿಮಗೆ ಯಾವೊಂದು ಕಷ್ಟವನ್ನೂ ನೀಡಿಲ್ಲ. ನಾಡಿನಲ್ಲಿ ಬೇರೆಯೂ ಸ್ತ್ರೀಯರಿದ್ದಾರೆ. ಬರೀರಾಳೊಡನೆ(ರ) ವಿಚಾರಿಸಿರಿ. ಆಕೆಯು ನಿಜ ಸಂಗತಿಯನ್ನು ಹೇಳುತ್ತಾಳೆ." ಪ್ರವಾದಿ(ಸ) ಬರೀರಾರನ್ನು ವಿಚಾರಿಸಿದರು. "ನೀನು ಆಕೆಯಲ್ಲಿ ಸಂದೇಹಾಸ್ಪದವಾದುದನ್ನೇನಾದರೂ ಕಂಡಿರುವೆಯಾ?" ಬರೀರಾ ಹೇಳಿದರು: "ಅವರು ತುಂಬಾ ಚಿಕ್ಕವರು. ಕೆಲವೊಮ್ಮೆ ರೊಟ್ಟಿ ತಯಾರಿಸಲಿಕ್ಕಾಗಿ ಗೋಧಿ ಹಿಟ್ಟು ಕಲಸಿ ನಿದ್ದೆ ಹೋಗಿ ಬಿಡುತ್ತಾರೆ. ಆಗ ಆಡು ಬಂದು ಅದನ್ನು ತಿನ್ನುತ್ತದೆ. ಇದರ ಹೊರತು ಆರೋಪಿಸಬಹುದಾದಂಥ ಬೇರೇನನ್ನೂ ನಾನು ಕಂಡಿಲ್ಲ."

ಅಂದು ಪ್ರವಾದಿ(ಸ) ವೇದಿಕೆ ಹತ್ತಿ ಹೇಳಿದರು: "ಮುಸ್ಲಿಮರೇ, ನನ್ನ ಪತ್ನಿಯ ಹೆಸರಿನಲ್ಲಿ ಅಪವಾದ ಹಬ್ಬಿಸಿ ನನ್ನನ್ನು ದ್ರೋಹಿಸುತ್ತಿರುವವನನ್ನು ಹದ್ದುಬಸ್ತಿನಲ್ಲಿಡಲು ಯಾರೂ ಇಲ್ಲವೇ? ನನ್ನ ಪತ್ನಿ ಸಾಧ್ವಿಯಾಗಿದ್ದಾಳೆ. ಆರೋಪಿತ ವ್ಯಕ್ತಿಯೂ ಸಭ್ಯನು. ನಾನಿಲ್ಲದಾಗ ಆತ ಒಮ್ಮೆಯೂ ಮನೆಗೆ ಕಾಲಿಟ್ಟಿಲ್ಲ." ಸಅದ್ ಬಿನ್ ಮುಆದ್ ಹೇಳಿದರು: "ಅವನಿಗೆ ನಾನು ಬುದ್ಧಿ ಕಲಿಸುತ್ತೇನೆ. ಆತ ಔಸ್ ಗೋತ್ರಜನಾಗಿದ್ದರೆ ನಾನು ಆತನ ಕೊರಳು ಕೊಯ್ಯುತ್ತೇನೆ. ಖಝ್ರಜ್ ಗೋತ್ರಜನಾಗಿದ್ದರೆ ನೀವು ಅಪ್ಪಣೆ ನೀಡಿದರೆ ಸಾಕು. ಅದನ್ನು ಈಡೇರಿಸುತ್ತೇನೆ." ಖಝ್ರಜ್ ಗೋತ್ರಜನಾದ ಸಅದ್ ಬಿನ್ ಉಬಾದಃರ ದುರಭಿಮಾನ ಕೆರಳಿತು. ಅವರು ಹೇಳಿದರು: "ನಿಮ್ಮಿಂದ ಕೊಲ್ಲಲು ಸಾಧ್ಯವಿಲ್ಲ. ನಿಮ್ಮ ಗೋತ್ರದವನಾಗಿದ್ದರೆ ನೀವು ಅವನನ್ನು ಕೊಲ್ಲಲು ಇಚ್ಛಿಸಲಾರಿರಿ." ಉಸೈದ್ ಬಿನ್ ಹುಝೈರ್ ಕೂಗಿ ಹೇಳಿದರು: "ನಾವು ಆತನನ್ನು ಕೊಲ್ಲುತ್ತೇವೆ. ಮುನಾಫಿಕರಿಗಾಗಿ ವಾದಿಸುವ ನೀವೂ ಮುನಾಫಿಕರು." ಎಲ್ಲೆಡೆ ಗದ್ದಲ, ಔಸ್ ಮತ್ತು ಖಝ್ರಜ್‌ರೊಳಗೆ ಮಾತಿನ ಚಕಮಕಿಯಾಯಿತು. ಪ್ರವಾದಿ(ಸ) ಮಧ್ಯ ಪ್ರವೇಶಿಸಿ ಅವರನ್ನು ಶಾಂತಗೊಳಿಸಿದರು.

ನಾನು ಆ ದಿನವನ್ನೂ ಅಳುತ್ತಲೇ ಕಳೆದೆ. ನನ್ನ ಕಣ್ಣ ರೆಪ್ಪೆಗಳಿಗೆ ನಿದ್ರೆ ಒಲಿಯಲಿಲ್ಲ. ಮಾತಾಪಿತರು ಹತ್ತಿರವೇ ಕುಳಿತಿದ್ದರು. ಎರಡು ರಾತ್ರಿ ಮತ್ತು ಒಂದು ಹಗಲು ಕಳೆದು ಹೋಯಿತು. ಅತ್ತು ಅತ್ತು ಹೃದಯ ಒಡೆಯುವುದೋ ಎಂಬ ಭೀತಿಯಾಯಿತು. ತನ್ಮಧ್ಯೆ ಓರ್ವಳು ಅನ್ಸಾರಿ ಮಹಿಳೆ ನನ್ನ ಬಳಿ ಕುಳಿತು ಅಳಲಾರಂಭಿಸಿದರು.

ಪ್ರವಾದಿ(ಸ) ಸಲಾಮ್ ಹೇಳಿ ನನ್ನ ಬಳಿ ಬಂದು ಕುಳಿತರು. ಪ್ರಸ್ತುತ ಘಟನೆಯ ಬಳಿಕ ಅವರು ನನ್ನ ಬಳಿ ಕುಳಿತದ್ದು ಅದೇ ಮೊದಲ ಬಾರಿಯಾಗಿತ್ತು. ಅವರು ಹೇಳಿದರು: "ಆಯಿಶಾ! ನೀನು ತಪ್ಪುಗಾರಳಲ್ಲದಿದ್ದರೆ ಅಲ್ಲಾಹನು ನಿನ್ನ ನಿರಪರಾಧಿತ್ವವನ್ನು ಸಾಬೀತುಪಡಿಸುವನು. ಒಂದು ವೇಳೆ ತಪ್ಪು ಮಾಡಿದ್ದರೆ ಅಲ್ಲಾಹನೊಡನೆ ಕ್ಷಮೆ

ಯಾಚಿಸು. ಪಶ್ಚಾತ್ತಾಪಪಡುವವರನ್ನು ಆತ ಕ್ಷಮಿಸುತ್ತಾನೆ." ಪ್ರವಾದಿಯವರು(ಸ) ಈ ಮಾತು ಹೇಳಿ ಮುಗಿಸಿದಾಗ ನನ್ನ ಕಣ್ಣೀರು ಸಂಪೂರ್ಣ ಆರಿ ಹೋಯಿತು. ಆ ಬಳಿಕ ಒಂದು ಹನಿ ಉದುರಲಿಲ್ಲ. ಪ್ರವಾದಿಯವರಿಗೆ(ಸ) ಸಮಾಧಾನ ಹೇಳಲು ನಾನು ತಂದೆಯನ್ನು ವಿನಂತಿಸಿದೆ. ಅವರು ಏನು ಹೇಳಬೇಕೆಂದೇ ತೋಚುವುದಿಲ್ಲವೆಂದು ಹೇಳಿದರು. ತಾಯಿಯನ್ನು ವಿನಂತಿಸಿದೆ. ಅವರು ಅದೇ ಉತ್ತರ ಹೇಳಿದರು. ಕೊನೆಗೆ ನಾನೇ ಹೇಳಿದೆ: "ನಾನು ಚಿಕ್ಕವಳು. ನನಗೆ ಕುರ್‌ಆನಿನ ವಿಶೇಷ ಜ್ಞಾನವಿಲ್ಲ. ನನ್ನ ಬಗ್ಗೆ ಅಪವಾದ ಕೇಳಿದಾಗಲೇ ನೀವು ಅದನ್ನು ನಂಬಿದ್ದೀರಿ. ನಾನು ತಪ್ಪುಗಾರಳಲ್ಲವೆಂದು ಹೇಳಿದರೆ ನೀವು ನಂಬಲಾರಿರಿ. ನಾನು ತಪ್ಪು ಮಾಡಿರುವೆನೆಂದು ಹೇಳಿದರೆ- ನಾನು ತಪ್ಪು ಮಾಡಿಲ್ಲವೆಂದು ಅಲ್ಲಾಹನಿಗೆ ತಿಳಿದಿದೆ. ನೀವು ನಂಬುತ್ತೀರಿ. ಆದ್ದರಿಂದ ಯೂಸುಫರ ತಂದೆ ಹೇಳಿದ ಮಾತುಗಳನ್ನಷ್ಟೇ ನನಗೆ ನಿಮ್ಮೊಡನೆ ಹೇಳಲಿಕ್ಕಿರುವುದು. "ತಾಳ್ಮೆಯೇ ನನಗೆ ಭೂಷಣ. ನಿಮ್ಮ ಅಪವಾದದ ವಿರುದ್ಧ ನಾನು ಅಲ್ಲಾಹನ ಸಹಾಯ ಯಾಚಿಸುತ್ತೇನೆ." (ಯೂಸುಫ್-18)

ಇಷ್ಟು ಹೇಳಿ ನಾನು ಹಾಸಿಗೆಯಲ್ಲಿ ಮುಖಮುಚ್ಚಿ ಮಲಗಿದೆ. ಸರ್ವಜ್ಞನಾದ ಅಲ್ಲಾಹನು ನನ್ನ ನಿರಪರಾಧಿತ್ವವನ್ನು ಸಾಬೀತುಪಡಿಸುವನೆಂದು ನಾನು ಆಶೆಪಟ್ಟೆ. ಪ್ರವಾದಿ(ಸ) ಕುಳಿತಲ್ಲಿಂದ ಮಿಸುಕಾಡಲಿಲ್ಲ. ಆಗಲೇ ವಹ್ಯ್ ಅವತೀರ್ಣಗೊಂಡಿತು. ಪ್ರವಾದಿಯವರ(ಸ) ದೇಹದಿಂದ ಹೊಳೆಯುವ ಮುತ್ತುಗಳಂತೆ ಬೆವರ ಹನಿಗಳು ಜಾರಿದುವು. ಮುಗುಳ್ನಗುತ್ತಾ ಪ್ರವಾದಿ(ಸ) ಹೇಳಿದರು: "ಆಯಿಶಾ, ಅಲ್ಲಾಹನು ನಿನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿರುವನು."

ಸೂರಃ ನೂರ್‌ನಲ್ಲಿ ಅಲ್ಲಾಹನು ಅಪವಾದ ಹಬ್ಬಿಸಿದವರಿಗೆ ಎಚ್ಚರಿಕೆ ನೀಡಿದನು: **"ಈ ಸುಳ್ಳಾರೋಪವನ್ನು ರಚಿಸಿ ತಂದವರು ನಿಮ್ಮೊಳಗೇ ಇರುವ ಒಂದು ಕೂಟವಾಗಿದ್ದಾರೆ. ಈ ಘಟನೆಯನ್ನು ನಿಮ್ಮ ಪಾಲಿಗೆ ಕೆಟ್ಟದೆಂದು ಭಾವಿಸಬೇಡಿ. ನಿಜವಾಗಿ ಇದು ನಿಮಗೆ ಹಿತಕರವಾಗಿಯೇ ಇದೆ. ಅದರಲ್ಲಿ ಯಾರು ಎಷ್ಟು ಭಾಗವಹಿಸಿದನೋ ಅಷ್ಟೇ ಪಾಪವನ್ನು ಶೇಖರಿಸಿಕೊಂಡನು. ಈ ಹೊಣೆಗಾರಿಕೆಯ ಪ್ರಮುಖ ಪಾಲು ವಹಿಸಿಕೊಂಡವನಿಗಂತೂ ಮಹಾಯಾತನೆ ಇದೆ. ನೀವೆಲ್ಲರೂ ಅದನ್ನು ಕೇಳಿದಾಗ ಸತ್ಯವಿಶ್ವಾಸಿ ಸ್ತ್ರೀ-ಪುರುಷರು ತಮ್ಮ ಬಗ್ಗೆ ಸದ್ಭಾವನೆಯನ್ನೇಕೆ ತಾಳಲಿಲ್ಲ ಮತ್ತು ಇದು ಅಪ್ಪಟ ಸುಳ್ಳಾರೋಪವೆಂದೇಕೆ ಹೇಳಲಿಲ್ಲ. ಅವರು (ತಮ್ಮ ಆರೋಪಕ್ಕೆ ಆಧಾರವಾಗಿ) ನಾಲ್ಕು ಸಾಕ್ಷಿದಾರರನ್ನೇಕೆ ತರಲಿಲ್ಲ? ಅವರೀಗ ಸಾಕ್ಷಿಗಳನ್ನು ತಾರದಿರುವುದರಿಂದ ಅಲ್ಲಾಹನ ಬಳಿ ಅವರೇ ಸುಳ್ಳುಗಾರರಾಗಿರುತ್ತಾರೆ. ನಿಮ್ಮ ಮೇಲೆ ಇಹಲೋಕದಲ್ಲೂ ಪರಲೋಕದಲ್ಲೂ ಅಲ್ಲಾಹನ ಅನುಗ್ರಹವೂ ಕೃಪೆಯೂ ಇಲ್ಲದಿರುತ್ತಿದ್ದರೆ, ನೀವು ಸಿಲುಕಿದಂತಹ ವಿಷಯಗಳ ಫಲವಾಗಿ ಅತಿ ದೊಡ್ಡ ಯಾತನೆ ನಿಮ್ಮ ಮೇಲೆ ಎರಗುತ್ತಿತ್ತು. ನಿಮ್ಮ ಒಂದು ನಾಲಿಗೆಯು ಇನ್ನೊಂದು ನಾಲಿಗೆಯಿಂದ ಈ ಸುಳ್ಳನ್ನೆತ್ತಿಕೊಂಡು ಹೋಗುತ್ತಿರುವಾಗ ಮತ್ತು ನಿಮಗೇನೂ ತಿಳಿಯದಂತಹ ವಿಷಯವನ್ನು**

ನಿಮ್ಮ ಬಾಯಿಯಿಂದ ಹೇಳುತ್ತ ಸಾಗುತ್ತಿದ್ದಾಗ (ನೀವೆಷ್ಟು ದೊಡ್ಡ ತಪ್ಪು ಮಾಡುತ್ತಿದ್ದೀರೆಂದು ಯೋಚಿಸಿರಿ). ನೀವು ಅದನ್ನು ಒಂದು ಸಣ್ಣ ವಿಷಯವೆಂದು ಭಾವಿಸುತ್ತಿದ್ದಿರಿ. ವಸ್ತುತಃ ಅಲ್ಲಾಹನ ಬಳಿ ಇದು ಅತ್ಯಂತ ಗಂಭೀರ ವಿಷಯವಾಗಿತ್ತು. ನೀವು ಅದನ್ನು ಕೇಳಿದೊಡನೆಯೇ "ಇಂತಹ ಮಾತನ್ನುಚ್ಚರಿಸುವುದು ನಮಗೆ ಭೂಷಣವಲ್ಲ. ಅಲ್ಲಾಹನು ಪರಮಪಾವನನು. ಇದಂತೂ ಒಂದು ಮಹಾ ಸುಳ್ಳಾರೋಪವಾಗಿದೆ" ಎಂದೇಕೆ ಹೇಳಲಿಲ್ಲ? ನೀವು ಸತ್ಯವಿಶ್ವಾಸಿಗಳಾಗಿದ್ದರೆ ಮುಂದೆಂದೂ ಇಂತಹ ಕೃತ್ಯವೆಸಗಬಾರದೆಂದು ಅಲ್ಲಾಹನು ನಿಮಗೆ ಉಪದೇಶ ಮಾಡುತ್ತಾನೆ." (ಪವಿತ್ರ ಕುರ್‌ಆನ್, 24:11-17)

### ಶಪಥ

ಪ್ರವಾದಿವರ್ಯರ(ಸ) ಜೀವನ ಅತ್ಯಂತ ಸರಳವಾಗಿತ್ತು. ಅವರೆಂದೂ ಹೊಟ್ಟೆ ತುಂಬಾ ಆಹಾರ ಸೇವಿಸಿರಲಿಲ್ಲ. ಮನೆಯಲ್ಲಿ ಹೊಗೆಯಾಡದೆ ತಿಂಗಳುಗಳೇ ಕಳೆದು ಹೋಗಿವೆ. ಸ್ವಲ್ಪ ಒಣ ಖರ್ಜೂರ ಮತ್ತು ನೀರು ಅವರ ಆಹಾರವಾಗಿದ್ದು ಅವರು ಸರಳ ಜೀವನ ಸಾಗಿಸಲು ಉಪದೇಶಿಸುತ್ತಿದ್ದರು. ಸ್ವಜೀವನದಲ್ಲಿ ಅದರ ಮಾದರಿ ತೋರಿಸಿದರು.

ಪ್ರವಾದಿವರ್ಯರ(ಸ) ಪತ್ನಿಯರು ಉನ್ನತ ಕುಟುಂಬಗಳಲ್ಲಿ ಹುಟ್ಟಿ ಬೆಳೆದವರು ಮತ್ತು ತಾಪತ್ರಯವಿಲ್ಲದೆ ಸುಖ ಜೀವನ ನಡೆಸಿದವರಾಗಿದ್ದರು. ಪ್ರವಾದಿಯವರ(ಸ) ಪತ್ನೀ ಪಟ್ಟವನ್ನು ಅಲಂಕರಿಸಿದ ಬಳಿಕ ಅವರ ಜೀವನದಲ್ಲಿಯೂ ತುಂಬಾ ಬದಲಾವಣೆ ಯಾಯಿತು. ಸುಖಾಡಂಬರಗಳ ವ್ಯಾಮೋಹ ಕಡಿಮೆಯಾಯಿತು. ಫಲವೊಮ್ಮೆ ಹಸಿವಿನಿಂದಲೇ ದಿನರಾತ್ರೆ ಗಳನ್ನು ಅವರು ಕಳೆಯುತ್ತಿದ್ದರು. ತುಂಬಾ ಸಮಯದಿಂದ ಕಠಿಣ ರೀತಿಯ ಜೀವನ ಸಾಗಿಸುತ್ತಿರುವಾಗ ಹೇಗಾದರೂ ಈ ಪರಿಸ್ಥಿತಿ ಬದಲಾಗಿ ಒಂದು ಉತ್ತಮ ಜೀವನಾವಕಾಶ ದೊರೆಯಬೇಕೆಂಬ ಬಯಕೆಯುಂಟಾಗುವುದು ಸ್ವಾಭಾವಿಕ. ಪ್ರವಾದಿ ವರ್ಯರ(ಸ) ಪತ್ನಿಯರು ತಮಗೆ ದೊರೆಯುತ್ತಿರುವ ಆಹಾರ ಪಡಿತರ ಸಾಕಾಗುವುದಿಲ್ಲ. ಅದನ್ನು ಹೆಚ್ಚಿಸಬೇಕೆಂದು ಸಾಮೂಹಿಕ ಬೇಡಿಕೆ ಮುಂದಿಟ್ಟರು. ಆದರೆ ಅವರ ಬೇಡಿಕೆ ಗಳನ್ನು ಈಡೇರಿಸಲು ಪ್ರವಾದಿಯವರ(ಸ) ಬಳಿ ಏನೂ ಇರಲಿಲ್ಲ. ಹ. ಅಬೂಬಕರ್(ರ) ಮತ್ತು ಹ. ಉಮರ್‌ರು(ರ) ಈ ವಿಷಯದಲ್ಲಿ ಮಧ್ಯ ಪ್ರವೇಶಿಸಿ ತಮ್ಮ ಪುತ್ರಿಯರಾದ ಆಯಿಶಾ ಮತ್ತು ಹಫ್ಸರನ್ನು ಗದರಿಸಿದರು. ಮುನಾಫಿಕರು ಇಂತಹ ಸಂದರ್ಭಗಳನ್ನು ಬಳಸಿ ಪ್ರವಾದಿವರ್ಯರ(ಸ) ಕುಟುಂಬದ ಕ್ಷುಲ್ಲಕ ವಿರಸಗಳನ್ನು ಉಬ್ಬಿಸುವ ಪ್ರಯತ್ನ ನಡೆಸುತ್ತಿದ್ದರು.

ಪ್ರವಾದಿ ಪತ್ನಿಯರ ಮನೆಗಳು ಅಕ್ಕಪಕ್ಕದಲ್ಲಿದ್ದವು. ಸಂಜೆ ನಮಾಝ್ ಬಳಿಕ ಪ್ರವಾದಿವರ್ಯರು(ಸ) ಎಲ್ಲ ಮನೆಗಳಿಗೂ ಹೋಗಿ ಪತ್ನಿಯರ ಕುಶಲ ವಿಚಾರಿಸುತ್ತಿದ್ದರು. ಅದೊಂದು ದಿನ ಪ್ರವಾದಿವರ್ಯರು(ಸ) ಹ. ಝೈನಬ್‌ರ ಮನೆಯಲ್ಲಿ ವಾಡಿಕೆಗಿಂತ ಹೆಚ್ಚು ವೇಳೆ ಕಳೆದರು. ಝೈನಬ್‌ರಿಗೆ(ರ) ಯಾರೋ ಸ್ವಲ್ಪ ಜೇನು ನೀಡಿದ್ದರು. ಪ್ರವಾದಿವರ್ಯರಿಗೆ(ಸ)

ಜೇನು ಪ್ರಿಯವಾಗಿದ್ದಿತು. ಝೈನಬರು(ರ) ಅದನ್ನು ಪ್ರವಾದಿಯವರಿಗೆ(ಸ) ನೀಡಿದರು. ಇದುವೇ ವಿಳಂಬಕ್ಕೆ ಕಾರಣವಾಗಿತ್ತು. ಈ ವಿಷಯವನ್ನರಿತ ಆಯಿಶಾ(ರ) ಮತ್ತು ಹ. ಹಫ್ಸ(ರ) ಪ್ರವಾದಿರನ್ನು(ಸ) ಸ್ವಲ್ಪ ತಮಾಷೆ ಮಾಡಬೇಕೆಂದು ನಿರ್ಧರಿಸಿದರು. ಪ್ರವಾದಿ ಯವರು(ಸ) ಮನೆಗೆ ಬರುವಾಗ ಏನೋ ದುರ್ವಾಸನೆ ಬರುತ್ತಿದೆಯೆಂದು ಹೇಳಲು ತೀರ್ಮಾನಿಸಿದರು. ಪ್ರವಾದಿವರ್ಯರು(ಸ) ಹಫ್ಸಾರ ಮನೆಗೆ ಮೊದಲು ಬಂದರು. ಹಿಂದೆ ತೀರ್ಮಾನಿಸಿದಂತೆ ಹಫ್ಸಾ ಹೇಳಿದರು: ಏನೋ ದುರ್ಗಂಧ ಬರುತ್ತಿದೆ. ನೀವು ಮಗಾಫೀರ್ (ಒಂದು ಜಾತಿಯ ಹೂ) ತಿಂದಿದ್ದೀರಾ? ಕಿಂಚಿತ್ ದುರ್ಗಂಧವೂ ಪ್ರವಾದಿಯವರಿಗೆ(ಸ) ಅಸಹ್ಯವಾಗಿದ್ದಿತು. ಅವರು ಹೇಳಿದರು: ನಾನು ಝೈನಬರ ಮನೆಯಲ್ಲಿ ಸ್ವಲ್ಪ ಜೇನು ಸೇವಿಸಿದ್ದೆ. ದುರ್ಗಂಧವಿದೆಯೆಂದಾದರೆ ನಾನು ಇನ್ನೆಂದೂ ಅದನ್ನು ಬಳಸುವುದಿಲ್ಲ.

ಈ ಘಟನೆ ಹಾಗೂ ಪತ್ನಿಯರ ಸಾಮೂಹಿಕ ಪಡಿತರ ಬೇಡಿಕೆಗಳೂ ಪ್ರವಾದಿ ವರ್ಯರನ್ನು(ಸ) ಸ್ವಲ್ಪ ಕುಪಿತಗೊಳಿಸಿತು. ಅವರು ಪತ್ನಿಯರನ್ನು ಒಂದು ತಿಂಗಳು ಸಮೀಪಿಸುವುದಿಲ್ಲವೆಂದು ಶಪಥ ಹಾಕಿದರು. ಅಂದು ಕುದುರೆಯಿಂದ ಬಿದ್ದು ಕಾಲಿಗೆ ಸ್ವಲ್ಪ ಏಟು ತಗಲಿದ್ದ ಸಂದರ್ಭವಾಗಿದ್ದಿತು. ಹೀಗೆ ಪ್ರವಾದಿಯವರು(ಸ) ಮಾಳಿಗೆ ಕೋಣೆಯಲ್ಲಿ ಏಕಾಂಗಿಯಾಗಿ ಉಳಿದುಕೊಂಡರು. ತನ್ನಿಮಿತ್ತ ಪ್ರವಾದಿ(ಸ), ಪತ್ನಿಯರಿಗೆ ತಲಾಕ್ ಹೇಳಿರುವರೆಂಬ ವದಂತಿ ಹಬ್ಬಿತು. ಈ ಘಟನೆಯನ್ನು ವಿಶ್ಲೇಷಿಸಿ ಹ. ಉಮರ್(ರ) ಹೀಗೆ ಹೇಳಿದ್ದಾರೆ:

ಕುರೈಶರಾದ ನಾವು ಸ್ತ್ರೀಯರ ಮೇಲೆ ಆಧಿಪತ್ಯ ಹೊಂದಿದವರಾಗಿದ್ದೆವು. ಮದೀನಾಕ್ಕೆ ಬಂದಾಗ ಸ್ತ್ರೀಯರು ಪುರುಷರ ಮೇಲೆ ಆಧಿಪತ್ಯ ಹೊಂದಿರುವುದನ್ನು ಕಂಡೆ. ಅವರಿಂದ ನಮ್ಮ ಸ್ತ್ರೀಯರೂ ಕಲಿತು ಕೊಂಡರು. ಒಂದು ದಿನ ಏನೋ ಕಾರಣಕ್ಕಾಗಿ ನಾನು ಪತ್ನಿಯನ್ನು ಗದರಿಸಿದೆ. ಆಕೆ ನನ್ನ ಮೇಲೆ ರೇಗಿ ಬಿದ್ದಳು. ನಾನು ಅದನ್ನು ನಿರ್ಲಕ್ಷಿಸಿದೆ. ಆಗ ಆಕೆ ಹೇಳಿದಳು: "ನಾನು ಏನಾದರೂ ಹೇಳಿದರೆ ಕುಪಿತರಾಗುತ್ತೀರಿ. ಪ್ರವಾದಿ ವರ್ಯರ(ಸ) ಪತ್ನಿಯರೂ ಅವರ ಮೇಲೆ ರೇಗಾಡುತ್ತಾರಲ್ಲವೇ? ಕೆಲವೊಮ್ಮೆ ಅವರು ದಿನವಿಡೀ ಪ್ರವಾದಿಯೊಂದಿಗೆ ಕಲಹ ಮಾಡುತ್ತಾರೆ."

ನಾನು ತಕ್ಷಣವೇ ಹಫ್ಸಾಳ ಮನೆಗೆ ಹೋದೆ. "ನೀನು ಪ್ರವಾದಿಯೊಂದಿಗೆ ರೇಗಾಡುತ್ತಲೂ ದಿನವಿಡೀ ಕಲಹ ಮಾಡುತ್ತಲೂ ಇರುತ್ತೀಯಾ?" ಎಂದು ಪ್ರಶ್ನಿಸಿದೆ: 'ಹೌದೆಂದು' ಹಫ್ಸಾ ಒಪ್ಪಿಕೊಂಡರು. ನಾನು ಆಕೆಗೆ ಎಚ್ಚರಿಕೆ ನೀಡಿದೆ. ಪ್ರವಾದಿ(ಸ) ಕೋಪಿಸಿದರೆ ಅಲ್ಲಾಹನು ಕೋಪಿಸುವನೆಂದು ನಿನಗೆ ತಿಳಿಯದೇ? ಅಲ್ಲಾಹನ ಕೋಪಕ್ಕೆ ಪಾತ್ರಳಾದವಳು ನಾಶವಾದಂತೆಯೇ ಸೈ. ಇನ್ನು ಮುಂದೆ ಪ್ರವಾದಿವರ್ಯರೊಡನೆ(ಸ) ರೇಗಾಡಬೇಡ. ಏನೂ ಕೇಳಬೇಡ. ಏನಾದರೂ ಬೇಕಿದ್ದರೆ ನನ್ನಲ್ಲಿ ಕೇಳಿ ಪಡೆಯಿರಿ. ನಿನ್ನ

ಗೆಳತಿ ಆಯಿಶಾಳನ್ನು(ರ) ನೋಡಿ ನೀನು ಮೋಸ ಹೋಗಬೇಡ. ಆಕೆ ನಿನಗಿಂತ ಸುಂದರಿ ಮತ್ತು ಪ್ರವಾದಿಗೆ ಪ್ರಿಯವಾಗಿದ್ದಾಳೆ.

ನನಗೋರ್ವ ಅನ್ಸಾರೀ ನೆರೆಯವರಿದ್ದರು. ನಾವೀರ್ವರೂ ಸರದಿಯಂತೆ ಎರಡು ದಿನಗಳಿಗೊಮ್ಮೆ ಪ್ರವಾದಿಯ ಬಳಿಗೆ ಹೋಗುತ್ತಿದ್ದೆವು. ಅವರು ಹೋದರೆ ಅಂದಿನ ವರ್ತಮಾನವನ್ನು ನನಗೆ ತಿಳಿಸುತ್ತಿದ್ದರು. ನಾನು ಹೋದರೆ ಅವರಿಗೆ ತಿಳಿಸುತ್ತಿದ್ದೆ. ಅಂದು ನಾವು ಗಸ್ಸಾನ್‌ನವರು ಯುದ್ಧ ಸನ್ನಾಹ ಮಾಡುತ್ತಿರುವ ಕುರಿತು ಚರ್ಚಿಸಿದ್ದೆವು. ಒಂದು ದಿನ ಅನ್ಸಾರೀ ಸ್ನೇಹಿತರು ರಾತ್ರಿ ವೇಳೆ ಬಾಗಿಲು ತಟ್ಟಿದರು. ನಾನು ಬಾಗಿಲು ತೆರೆದೆ. "ಒಂದು ಘಟನೆ ನಡೆದಿದೆ" ಎಂದು ಅವರು ಹೇಳಿದರು. "ಏನು ಗಸ್ಸಾನ್‌ನವರು ಬಂದರೇ?" ಎಂದು ನಾನು ಪ್ರಶ್ನಿಸಿದೆ. "ಅದಕ್ಕಿಂತ ದೊಡ್ಡ ಘಟನೆ. ಪ್ರವಾದಿವರ್ಯರು(ಸ) ಪತ್ನಿಯರಿಗೆ ತಲಾಕ್ ಹೇಳಿದ್ದಾರೆ" ಅವರು ಹೇಳಿದರು. "ಹಫ್ಸಾ ನಾಶವಾದಳು. ಭೀತಿಪಟ್ಟಂತೆಯೇ ಆಯಿತು" ನಾನು ಸ್ವಯಂ ಹೇಳಿಕೊಂಡೆ.

ಪ್ರಭಾತ ನಮಾಝ್ ಬಳಿಕ ನಾನು ಹಫ್ಸಾಳ ಬಳಿಗೆ ಹೋದೆ. ಆಕೆ ಅಳುತ್ತಿದ್ದಳು. "ಪ್ರವಾದಿ(ಸ) ನಿಮಗೆ ತಲಾಕ್ ಹೇಳಿರುವರೇ?" ನಾನು ಪ್ರಶ್ನಿಸಿದೆ. ಆಕೆ ಹೇಳಿದಳು: "ನನಗೇನೂ ತಿಳಿಯದು. ಅವರು ಅದೋ ಮಹಡಿಯ ಕೋಣೆಯಲ್ಲಿದ್ದಾರೆ." ನಾನು ಅಲ್ಲಿಗೆ ಹೋದೆ. ಆದರೆ ಒಳಗೆ ಹೋಗಲು ಒಪ್ಪಿಗೆ ದೊರೆಯಲಿಲ್ಲ. ವೇದಿಕೆಯ ಬಳಿ ಹೋದಾಗ ಅಲ್ಲಿ ತುಂಬಾ ಮಂದಿ ಕುಳಿತಿದ್ದರು. ಕೆಲವರು ಅಳುತ್ತಿದ್ದರು. ನಾನು ಪುನಃ ಪ್ರವಾದಿಯ ಪರಿಚಾರಕನ ಬಳಿ ಹೋಗಿ ಅನುಮತಿ ಕೇಳಿದೆ. ಈ ಬಾರಿಯೂ ನನಗೆ ಅನುಮತಿ ಸಿಗಲಿಲ್ಲ. ಅಲ್ಲಿಂದ ಹಿಂತಿರುಗುವಾಗ ಪರಿಚಾರಕ ನನ್ನನ್ನು ಕರೆದ. ಅನುಮತಿ ನೀಡಿರುವರೆಂದು ತಿಳಿಸಿದ. ನಾನು ಒಳಗೆ ಹೋದೆ.

ಪ್ರವಾದಿ(ಸ) ಒಂದು ಚಾಪೆಯಲ್ಲಿ ಕುಳಿತಿದ್ದರು. ಅವರ ಶರೀರದ ಮೇಲೆ ಅದರ ಅಚ್ಚು ಬಿದ್ದಿತ್ತು. ನಾನು ಪ್ರಶ್ನಿಸಿದೆ: "ಪ್ರವಾದಿಯೇ, ನೀವು ಪತ್ನಿಯರಿಗೆ ತಲಾಕ್ ಹೇಳಿದ್ದೀರಾ?" ಅವರು ತಲೆಯೆತ್ತಿ ನನ್ನನ್ನು ನೋಡುತ್ತಾ ಹೀಗೆಂದರು: 'ಇಲ್ಲ'. ನಾನು ಹೇಳಿದೆ: "ಪ್ರವಾದಿಯವರೇ! ಕುರೈಶರಾದ ನಾವು ಸ್ತ್ರೀಯರ ಮೇಲೆ ಅಧಿಕಾರ ನಡೆಸಿದ್ದೆವು. ಮದೀನಾಕ್ಕೆ ಬಂದಾಗ ಸ್ತ್ರೀಯರು ಪುರುಷರ ಮೇಲೆ ಅಧಿಕಾರ ಚಲಾಯಿಸುವುದನ್ನು ಕಂಡೆವು. ನಮ್ಮ ಸ್ತ್ರೀಯರೂ ಅವರನ್ನು ಅನುಕರಿಸಿದರು. ಒಮ್ಮೆ ನಾನು ನನ್ನ ಪತ್ನಿಯನ್ನು ಗದರಿಸಿ ಮಾತನಾಡಿದಾಗ ಆಕೆಯೂ ರೇಗಾಡಿದಳು. ಪ್ರವಾದಿಯವರ(ಸ) ಪತ್ನಿಯರೂ ಅವರೊಡನೆ ರೇಗಾಡುತ್ತಾರೆ. ಹಗಲಿಡೀ ಜಗಳಾಡುತ್ತಾರೆಂದೂ ಆಕೆ ಹೇಳಿದಳು. ನಾನು ಹಫ್ಸಾಳ ಬಳಿ ಹೋಗಿ ಆಕೆಗೆ ಬುದ್ಧಿ ಹೇಳಿದೆ. ನಿನ್ನ ಗೆಳತಿಯು ಸುಂದರಿ ಹಾಗೂ ಪ್ರವಾದಿಗೆ ಪ್ರಿಯಳಾಗಿರುವಳೆಂದೂ ನೀನು ಆಕೆಯನ್ನು ನೋಡಿ ಮೋಸ ಹೋಗಬೇಡವೆಂದೂ

ತಿಳಿಸಿದ್ದೆ." ನನ್ನ ಮಾತುಗಳನ್ನು ಕೇಳಿ ಪ್ರವಾದಿ(ಸ) ಮುಗುಳ್ನಕ್ಕರು. ನಾನು ಪ್ರವಾದಿಯವರ(ಸ) ಕೋಣೆಯನ್ನೊಮ್ಮೆ ದಿಟ್ಟಿಸಿದೆ. ಒಂದೆರಡು ತೊಗಲುಗಳ ವಿನಾ ಅಲ್ಲಿ ಬೇರೇನೂ ಇರಲಿಲ್ಲ. ನಾನು ಹೇಳಿದೆ: ನೀವು ನಿಮ್ಮ ಸಮುದಾಯವನ್ನು ಶ್ರೀಮಂತ ಗೊಳಿಸಲು ಅಲ್ಲಾಹನೊಡನೆ ಪ್ರಾರ್ಥಿಸಿರಿ. ಅಲ್ಲಾಹನಿಗೆ ಅವಿಧೇಯರಾಗಿರುವ ಪರ್ಶಿಯನ್ ಮತ್ತು ರೋಮನರೂ ಶ್ರೀಮಂತರಾಗಿರುವರಲ್ಲವೇ? ಆಗ ಪ್ರವಾದಿ(ಸ) ಹೇಳಿದರು: "ಉಮರ್! ಅವರ ಸುಖಭೋಗ ವಸ್ತುಗಳು ಅವರಿಗೆ ಇಹಲೋಕದಲ್ಲಿಯೇ ಸಿಕ್ಕಿತು. ಪರಲೋಕದಲ್ಲಿ ಅವರಿಗೆ ಏನೂ ಇಲ್ಲ."

ತರುವಾಯ ಪ್ರವಾದಿ(ಸ), ಅಲ್ಲಿಂದ ಹೊರಟರು. ಅಲ್ಲಿಗೆ ಒಂದು ತಿಂಗಳು ಪೂರ್ಣವಾಗಿತ್ತು. ಪ್ರವಾದಿ(ಸ), ಮೊದಲು ಆಯಿಶಾರ(ರ) ಮನೆಗೆ ತೆರಳಿದರು. ಆಯಿಶಾ(ರ) ಪ್ರಶ್ನಿಸಿದರು: "ನೀವು ಒಂದು ತಿಂಗಳು ನಮ್ಮ ಬಳಿ ಬರುವುದಿಲ್ಲವೆಂದು ಶಪಥ ಮಾಡಿದ್ದೀರಲ್ಲವೇ? ನಾನು ಎಣಿಸುತ್ತಲಿದ್ದೆ. ಈಗ ಇಪ್ಪತ್ತೊಂಬತ್ತು ದಿನಗಳಷ್ಟೇ ಆಗಿವೆ." "ಈ ತಿಂಗಳಲ್ಲಿ ಇಪ್ಪತ್ತೊಂಬತ್ತೇ ದಿನವಿರುವುದು" ಪ್ರವಾದಿ(ಸ) ಹೇಳಿದರು. "ಆಯಿಶಾ, ನಾನು ಒಂದು ವಿಷಯವನ್ನು ಹೇಳಬಯಸಿದ್ದೇನೆ. ಅವಸರ ಮಾಡಬೇಡ. ಮಾತಾಪಿತ ರೊಡನೆ ಸಮಾಲೋಚಿಸಿ ಉತ್ತರ ಹೇಳಿದರೆ ಸಾಕು." ತರುವಾಯ ಪ್ರವಾದಿ(ಸ) ಸೂರಃ ಅಹ್ಝಾಬ್‌ನ ಸೂಕ್ತಗಳನ್ನು ಓದಿ ಹೇಳಿದರು: ಅದರ ಸಾರಾಂಶ ಹೀಗಿದೆ: "ಓ ಪ್ರವಾದಿಗಳೇ! ನಿಮ್ಮ ಪತ್ನಿಯರೊಡನೆ ಹೇಳಿರಿ. ನೀವು ಐಹಿಕ ಜೀವನ ಮತ್ತು ಅದರ ಅಲಂಕಾರ ಆಡಂಬರಗಳನ್ನು ಬಯಸುವುದಿದ್ದರೆ ಬನ್ನಿ. ಸುಖಭೋಗ ವಸ್ತುಗಳನ್ನು ನೀಡಿ ನಾನು ನಿಮ್ಮನ್ನು ಅತ್ಯುತ್ತಮ ರೀತಿಯಲ್ಲಿ ವಿಮೋಚನೆಗೊಳಿಸುತ್ತೇನೆ. ನೀವು ಅಲ್ಲಾಹನನ್ನು, ಆತನ ಪ್ರವಾದಿಯನ್ನು, ಪರಲೋಕವನ್ನು ಬಯಸುವುದಿದ್ದರೆ ಸತ್ಕರ್ಮಿಗಳಾದ ಸ್ತ್ರೀಯರಿಗೆ ಅಲ್ಲಾಹನು ಶ್ರೇಷ್ಠವಾದ ಪ್ರತಿಫಲವನ್ನು ಸಜ್ಜುಗೊಳಿಸಿದ್ದಾನೆ." ಈ ಆಯತ್ ಓದಿ ಮುಗಿದಾಗ ಆಯಿಶಾ(ರ) ಹೇಳಿದರು: "ಈ ಬಗ್ಗೆ ತಾಯಿ ತಂದೆಯವರೊಡನೆ ಸಮಾಲೋಚಿಸುವ ಅಗತ್ಯವಿಲ್ಲ. ನಿಮ್ಮನ್ನು ತೊರೆಯಲು ಅವರು ಎಂದಿಗೂ ಒಪ್ಪಿಗೆ ನೀಡಲಾರರು. ನಾನು ಅಲ್ಲಾಹನನ್ನೂ ಪ್ರವಾದಿಯನ್ನೂ ಪರಲೋಕವನ್ನೂ ಆರಿಸಿಕೊಂಡಿದ್ದೇನೆ. ನಾನು ನಿಮ್ಮನ್ನು ಆರಿಸಿದ್ದೇನೆಂದು ಬೇರೆ ಪತ್ನಿಯರೊಡನೆ ಹೇಳಬೇಡಿ." ಪ್ರವಾದಿ(ಸ) ಹೇಳಿದರು: "ಅವರು ಕೇಳಿದರೆ ನಾನು ಹೇಳುತ್ತೇನೆ. ಅಲ್ಲಾಹನು ಆತನ ಆಜ್ಞೆಗಳನ್ನು ತಲಪಿಸಲಿಕ್ಕಾಗಿ ನನ್ನನ್ನು ಕಳುಹಿಸಿದ್ದಾನೆ. ಜನರನ್ನು ತೊಂದರೆಗೆ ಸಿಲುಕಿಸಲಿಕ್ಕಾಗಿಯಲ್ಲ." ಇದರಿಂದ ಪ್ರವಾದಿ ಮತ್ತು ಪತ್ನಿಯರ ನಡುವಿನ ಕ್ಷುಲ್ಲಕ ವಿರಸವು ಕೊನೆಗೊಂಡು, ಪ್ರವಾದಿವರ್ಯರನ್ನು(ಸ) ತೊಂದರೆಪಡಿಸಿದುದಕ್ಕಾಗಿ ಅವರು ಪಶ್ಚಾತ್ತಾಪಪಟ್ಟರು.

## ವಿಧವಾ ಜೀವನ

ಪ್ರವಾದಿಯವರ(ಸ) ನಿಧನವು ಆಯಿಶಾರ(ರ) ಜೀವನವನ್ನು ಸಂಪೂರ್ಣವಾಗಿ ನಡುಗಿಸಿದ ದುಃಖದಾಯಕ ಘಟನೆಯಾಗಿದೆ. ಪ್ರವಾದಿ(ಸ) ರೋಗಶಯ್ಯೆಯಲ್ಲಿದ್ದಾಗ ಆಯಿಶಾ(ರ) ಶುಶ್ರೂಷೆ ನಡೆಸಿದ್ದರು. ತನ್ನ ಮಡಿಲಲ್ಲಿ ತಲೆಯಿರಿಸಿ ಆ ಪ್ರಿಯ ಪ್ರವಾದಿಯು ಮರಣ ಹೊಂದುವುದನ್ನು ಸಂಪೂರ್ಣ ತಾಳ್ಮೆಯಿಂದ ಅವರು ನೋಡಿದ್ದರು. ಪ್ರವಾದಿ ವರ್ಯರ(ಸ) ಪುಣ್ಯ ಪಾರ್ಥಿವ ಶರೀರವನ್ನು ಆಯಿಶಾರ(ರ) ಕೋಣೆಯ ಒಂದು ಪಾರ್ಶ್ವದಲ್ಲಿ ದಫನ ಮಾಡಲಾಯಿತು.

ಪ್ರವಾದಿವರ್ಯರ(ಸ) ನಿಧನದ ವೇಳೆ ಆಯಿಶಾರಿಗೆ(ರ) ಹದಿನೆಂಟು ವರ್ಷ ವಯಸ್ಸಾಗಿತ್ತು. ದೀರ್ಘವಾದ 48 ವರ್ಷಗಳ ತನಕ ಅವರು ವಿಧವಾ ಜೀವನವನ್ನು ನಡೆಸಿದರು. ಪ್ರವಾದಿಯವರ(ಸ) ಪತ್ನಿಯರನ್ನು ಇನ್ನಾರೂ ವಿವಾಹವಾಗಬಾರದೆಂಬ ಆದೇಶವಿತ್ತು. ಸುದೀರ್ಘವಾದ ಈ ಜೀವನಾವಧಿಯಲ್ಲಿ ಅವರು ನಾಲ್ವರು ಖಲೀಫರ ಆಡಳಿತವನ್ನು ನೋಡಿದರು. ಅನೇಕ ದುರಂತ ಘಟನೆಗಳ ಸಾಕ್ಷ್ಯ ವಹಿಸಿದರು.

ಪ್ರವಾದಿ(ಸ), ನಿಧನರಾಗಿ ಎರಡು ವರ್ಷ ಕಳೆದಾಗ ವಾತ್ಸಲ್ಯಮಯಿಯಾದ ತಂದೆ ಅಬೂಬಕರ್‌ರೂ(ರ) ಇಹಲೋಕವಾಸ ಮುಗಿಸಿದರು. ಇದು ಆಯಿಶಾರ(ರ) ಜೀವನದ ದ್ವಿತೀಯ ದುಃಖದ ಘಟನೆಯಾಗಿದ್ದಿತು. ಪ್ರವಾದಿವರ್ಯರ ನಿಧನಾನಂತರ ಅಬೂಬಕರ್(ರ), ಆಯಿಶಾರ(ರ) ಸರ್ವಾವಲಂಬವಾಗಿದ್ದರು. ಅದೂ ಹೆಚ್ಚು ಕಾಲ ಉಳಿಯಲಿಲ್ಲ.

## ಜಮಲ್ ಯುದ್ಧ

ಹ. ಉಸ್ಮಾನ್‌ರು(ರ) ಅಕ್ರಮಿಗಳ ಹಸ್ತದಿಂದ ವಧಿಸಲ್ಪಟ್ಟ ಬಳಿಕ ಹ. ಅಲೀ(ರ) ಖಲೀಫರಾಗಿ ಆಯ್ಕೆಯಾದರು. ಆದರೂ ಒಂದು ಗಣ್ಯ ವಿಭಾಗವು ಅಲಿಯವರಿಗೆ(ರ) ನಿಷ್ಠೆ(ಬೈಅತ್) ಘೋಷಿಸಲು ಒಪ್ಪಲಿಲ್ಲ. ಆ ಪೈಕಿ ಮುಆವಿಯಾ(ರ), ತಲ್‌ಹಾ(ರ), ಝುಬೈರ್(ರ) ಮುಂತಾದ ಪ್ರಮುಖ ಸಹಾಬಿಗಳೂ ಇದ್ದರು. ಉಸ್ಮಾನ್‌ರ(ರ) ಹಂತಕರನ್ನು ದಂಡಿಸಿದರೆ ಮಾತ್ರ ತಾವು ಬೈಅತ್ ಮಾಡುವೆವೆಂಬುದು ಅವರ ನಿಲುಮೆಯಾಗಿತ್ತು. ಸರ್ವಾಂಗೀಕೃತನಾದ ಓರ್ವ ಖಲೀಫನು ಅಧಿಕಾರ ವಹಿಸಿಕೊಂಡು ಪರಿಸ್ಥಿತಿ ಸಾಮಾನ್ಯ ರೂಪಕ್ಕೆ ಬಾರದೆ ಅಪರಾಧಿಗಳನ್ನು ದಂಡಿಸಲು ಸಾಧ್ಯವಿಲ್ಲವೆಂದು ಅಲಿಯವರ(ರ) ನಿಲುಮೆಯಾಗಿತ್ತು.

ಹ. ಉಸ್ಮಾನ್(ರ) ವಧಿಸಲ್ಪಟ್ಟಾಗ ಆಯಿಶಾ(ರ) ಮದೀನದಲ್ಲಿರಲಿಲ್ಲ. ಮಕ್ಕಾ ದಲ್ಲಿದ್ದರು. ಉಸ್ಮಾನ್‌ರ(ರ) ವಧೆಯ ವಾರ್ತೆಯನ್ನು ಕೇಳಿ ಅವರು ಬೆಚ್ಚಿ ಬಿದ್ದರು. ಅಪರಾಧಿಗಳನ್ನು ತಕ್ಷಣವೇ ದಂಡಿಸಬೇಕೆಂಬ ಅಭಿಪ್ರಾಯವಿರುವವರು ಆಯಿಶಾರ(ರ)

ನಾಯಕತ್ವದಲ್ಲಿ ಬಸರಾಕ್ಕೆ ಹೋದರು. ಗಲಭೆಗಳನ್ನು ಕೊನೆಗೊಳಿಸಿ ಶಾಂತಿ ಸ್ಥಾಪಿಸುವುದೇ ಆಯಿಶಾರ(ರ) ಉದ್ದೇಶವಾಗಿದ್ದಿತು. ಆಯಿಶಾರು(ರ) ಯುದ್ಧ ಸಿದ್ಧತೆ ಮಾಡಿದ್ದಾರೆಂಬ ತಪ್ಪು ತಿಳುವಳಿಕೆಯಿಂದ ಹ. ಅಲಿಯವರು(ರ) ಒಂದು ಸೇನೆಯೊಂದಿಗೆ ಅತ್ತ ಹೊರಟರು. ಸಂಧಾನ ಮಾತುಕತೆಗಳು ನಡೆಯುತ್ತಿರುವಾಗಲೇ ಆಕಸ್ಮಿಕವಾಗಿ ಯುದ್ಧ ಸ್ಫೋಟಗೊಂಡಿತು. ಅನಿರೀಕ್ಷಿತವಾದ ಯುದ್ಧ ಆರಂಭಗೊಳ್ಳಲು ಅಲಿಯವರ(ರ) ಪಕ್ಷದವರು ಕಾರಣವೆಂದು ಆಯಿಶಾರವರೂ(ರ) ಆಯಿಶಾರ(ರ) ಪಕ್ಷದವರು ಕಾರಣವೆಂದು ಅಲಿಯವರೂ(ರ) ತಪ್ಪು ತಿಳಿದುಕೊಂಡರು. ಆದರೆ ವಾಸ್ತವದಲ್ಲಿ ಮುಸ್ಲಿಮರ ಸೋಗು ಹಾಕಿದ ಕೆಲವು ಕಪಟಿ ವಿಶ್ವಾಸಿಗಳೇ ಅದಕ್ಕೆ ಕಾರಣರಾಗಿದ್ದರು.

ಘೋರ ಯುದ್ಧ ನಡೆಯಿತು. ಉಭಯ ಕಡೆಗಳಲ್ಲಿಯೂ ಅಸಂಖ್ಯಾತ ಜನರು ಮಡಿದರು. ಆಯಿಶಾರು(ರ) ಒಂಟೆಯ ಮೇಲೆ ಕುಳಿತು ಯುದ್ಧವನ್ನು ನಿಯಂತ್ರಿಸು ತ್ತಿದ್ದರು. ಯುದ್ಧಾನಂತರ ಹ. ಅಲೀ(ರ), ಆಯಿಶಾರನ್ನು(ರ) ಗೌರವಾದರದಿಂದ ಸ್ವೀಕರಿಸಿ ಪರಿವಾರ ಸಮೇತ ಮದೀನಾಕ್ಕೆ ಕಳುಹಿಸಿಕೊಟ್ಟರು. ಆಯಿಶಾರು(ರ) ಒಂಟೆಯ ಮೇಲೇರಿ ಕುಳಿತಿದ್ದುದರಿಂದ ಈ ಯುದ್ಧಕ್ಕೆ ಜಮಲ್ ಯುದ್ಧವೆಂಬ ಹೆಸರು ಬಂತು. ಈ ದುರಂತ ಘಟನೆ ಬಗ್ಗೆ ಆಯಿಶಾರು(ರ) ಆ ಬಳಿಕ ಖೇದ ವ್ಯಕ್ತಪಡಿಸಿದ್ದರು. ಒಮ್ಮೆ ಪ್ರವಾದಿ ಯವರು(ಸ) ತಮ್ಮ ಶ್ರೇಷ್ಠ ಪತ್ನಿಯರೊಡನೆ ಈ ರೀತಿ ಹೇಳಿದ್ದರು: "ನಿಮ್ಮಲ್ಲೋರ್ವಳು ಒಂಟೆಯ ಮೇಲೆ ಏರುವಳು. ಹೌಅಬಿನ ನಾಯಿಗಳು ಆಕೆಯನ್ನು ನೋಡಿ ಬೊಗಳುವುವು. ಅವಳ ಸುತ್ತಲೂ ಧಾರಾಳ ಜನರು ಕೊಲ್ಲಲ್ಪಡುವರು. ತಕ್ಷಣ ಅವಳು ಪಶ್ಚಾತ್ತಾಪ ಪಡುವಳು. ಅಲ್ಲಾಹನು ಆಕೆಗೆ ಕ್ಷಮೆ ನೀಡುವನು." ಈ ಭವಿಷ್ಯವಾಣಿಯ ಸಾಕ್ಷಾತ್ಕಾರವೇ ಜಮಲ್ ಯುದ್ಧ.

### ವಸ್ತ್ರಧಾರಣೆ

ಚಿಕ್ಕಂದಿನಲ್ಲಿ ಕೃಶಕಾಯರಾಗಿದ್ದ ಆಯಿಶಾರು(ರ) ಹದಿಮೂರು ಹದಿನಾಲ್ಕನೇ ವಯಸ್ಸಿನಲ್ಲಿ ಸ್ವಲ್ಪ ದಪ್ಪಗಾದರು. ಕೆಂಪು ಮಿಶ್ರಿತ ಬಿಳಿ ಮೈಬಣ್ಣ. ಅವರು ರಂಗುರಂಗಿನ ವಸ್ತ್ರಗಳನ್ನು ಧರಿಸುತ್ತಿದ್ದರು. ಆದರೆ ಏಕಕಾಲದಲ್ಲಿ ಅವರಿಗೆ ಒಂದು ಜತೆಗಿಂತ ಹೆಚ್ಚು ವಸ್ತ್ರಗಳಿರಲಿಲ್ಲ. ಅವರು ಒಂದು ಚಿನ್ನದುಂಗುರವನ್ನು ಧರಿಸುತ್ತಿದ್ದರು. ವಸ್ತ್ರಧಾರಣೆ ಯಲ್ಲಿ ಧರ್ಮದ ನಿಯಮ(ಶರೀಅತ್)ವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ತೆಳು ವಸ್ತ್ರಗಳನ್ನು ಧರಿಸುವುದನ್ನು ಆಯಿಶಾ(ರ) ಮೆಚ್ಚುತ್ತಿರಲಿಲ್ಲ. ಒಮ್ಮೆ ಆಯಿಶಾರನ್ನು(ರ) ನೋಡಲು ಅವರ ಸಹೋದರ ಪುತ್ರಿ ಹಫ್ಸಾ ಬಂದರು. ಹಫ್ಸಾ ತೆಳು ದುಪ್ಪಟವನ್ನು ಧರಿಸಿದ್ದರು. ಆಯಿಶಾರಿಗೆ(ರ) ಕೋಪ ಬಂತು. ಸೂರಃ ನೂರ್‌ನಲ್ಲಿ ಅಲ್ಲಾಹನು ಏನು ಆಜ್ಞಾಪಿಸಿರುವನೆಂದು ನಿನಗೆ ತಿಳಿದಿಲ್ಲವೇ ಎಂದು ಹೇಳುತ್ತಾ ಅದನ್ನು ಹರಿದು ಹಾಕಿದರು. ಹಫ್ಸಾರಿಗೆ ಬೇರೆ ದಪ್ಪದ ದುಪ್ಪಟ ನೀಡಿದರು.

## ಗುಣ ವೈಶಿಷ್ಟ್ಯ

ಪ್ರವಾದಿಯ ಅನುಸರಣೆ ಮತ್ತು ಅವರ ಪ್ರೀತಿ ಸಂಪಾದನೆಯಲ್ಲಿ ಆಯಿಶಾರು(ರ) ಯಾವ ಕೊರತೆಯನ್ನೂ ಮಾಡಲಿಲ್ಲ. ಅವರು ಅತಿಥಿ ಸತ್ಕಾರ ಮತ್ತು ನಿರ್ಗತಿಕರ ಸಂರಕ್ಷಣೆಯ ಬಗ್ಗೆ ತೀವ್ರ ಆಸಕ್ತಿ ತೋರುತ್ತಿದ್ದರು. ಸ್ವಯಂ ಹಸಿದಿದ್ದು ದೀನ ದಲಿತರಿಗೆ ಆಹಾರ ನೀಡುತ್ತಿದ್ದರು. ಒಮ್ಮೆ ಅಬ್ದುಲ್ಲಾ ಬಿನ್ ಝುಬೈರ್‌ರು(ರ) ಆಯಿಶಾರಿಗೆ(ರ) ಒಂದು ಲಕ್ಷ ದಿರ್ಹಮ್ ಕಳುಹಿಸಿಕೊಟ್ಟರು. ಅದೆಲ್ಲವನ್ನೂ ಅವರು ಬಡ ಕುಟುಂಬಗಳಿಗೆ ದಾನ ಮಾಡಿಬಿಟ್ಟರು. ಅದೊಂದು ರಮಝಾನ್ ಕಾಲವಾಗಿದ್ದಿತು. ಸಂಜೆಯ ವೇಳೆ ಉಪವಾಸ ತೊರೆಯುವುದಕ್ಕಾಗಿಯೂ ಅವರು ಅದರಿಂದ ಒಂದು ದಿರ್ಹಮನ್ನೂ ಇರಿಸಿಕೊಳ್ಳಲಿಲ್ಲ. ಇನ್ನೊಮ್ಮೆ ಆಯಿಶಾರಿಗೆ(ರ) ಎಪ್ಪತ್ತು ಸಾವಿರ ದಿರ್ಹಮ್‌ಗಳನ್ನು ಯಾರೋ ಕಳುಹಿಸಿಕೊಟ್ಟರು. ಅದನ್ನು ಸಂಪೂರ್ಣವಾಗಿ ಬಡಬಗ್ಗರಿಗೆ ದಾನ ಮಾಡಿದರು. ಚಿಂದಿಯಾದ ಬಟ್ಟೆಗಳನ್ನು ಬದಲಿಸಿ ಬೇರೆ ಜತೆ ವಸ್ತ್ರಗಳನ್ನು ಖರೀದಿಸುವುದಕ್ಕಾಗಿಯೂ ಅವರು ಅದರಿಂದ ಹಣ ತೆಗೆಯಲಿಲ್ಲ. ಆಯಿಶಾರ(ರ) ಔದಾರ್ಯಕ್ಕೆ ಇನ್ನೂ ಅನೇಕ ಉದಾಹರಣೆಗಳಿವೆ.

ಆಯಿಶಾರು(ರ) ಸರಳ ಜೀವನ ನಡೆಸಿದರು. ದುಂದುಗಾರಿಕೆ ಆಡಂಬರಗಳನ್ನು ಅವರು ಮೆಚ್ಚುತ್ತಿರಲಿಲ್ಲ. ಮಿತವಾಗಿ ವೆಚ್ಚ ಮಾಡುತ್ತಿದ್ದರು. ಹೊಟ್ಟೆ ತುಂಬಾ ಉಣ್ಣುತ್ತಿರಲಿಲ್ಲ.

## ಭಯಭಕ್ತಿ

ಆಯಿಶಾರ(ರ) ಹೃದಯದಲ್ಲಿ ಅಲ್ಲಾಹನ ಭಯಭಕ್ತಿ ಸದಾ ಜೀವಂತವಾಗಿತ್ತು. ಅವರು ಆರಾಧನಾ ಕರ್ಮಗಳಲ್ಲಿ ತುಂಬಾ ನಿಷ್ಠೆ ಪಾಲಿಸುತ್ತಿದ್ದರು. ಝುಹಾ ನಮಾಝ್ ತಪ್ಪದೆ ನಿರ್ವಹಿಸುತ್ತಿದ್ದರು. ಪ್ರವಾದಿವರ್ಯರು(ಸ) ಸುದೀರ್ಘವಾದ ಅಧ್ಯಾಯಗಳನ್ನು ಓದಿ 'ತಹಜ್ಜುದ್' ನಮಾಝ್ ಮಾಡುವಾಗ ಆಯಿಶಾರು(ರ) ಅವರ ಹಿಂದೆ ನಿಂತು ನಮಾಝ್ ನಿರ್ವಹಿಸುತ್ತಿದ್ದರು. ಅವರು ಪ್ರವಾದಿಯ ನಿಧನಾನಂತರ ಹೆಚ್ಚಿನ ವೇಳೆಯನ್ನು ಆರಾಧನೆಗಳಲ್ಲಿಯೇ ಕಳೆಯುತ್ತಿದ್ದರು.

ಅವರ ಸಂಪೂರ್ಣ ಜೀವನ ತಕ್ವಾ(ದೇವಭಕ್ತಿ)ಮಯವಾಗಿತ್ತು. ಹೊಗಳಿಕೆ ಮತ್ತು ಸನ್ಮಾನಗಳನ್ನು ಅವರು ಮೆಚ್ಚುತ್ತಿರಲಿಲ್ಲ. ಅವರು ಪ್ರಶಂಸೆಯ ಭೀತಿಯಿಂದ ಅನೇಕ ಮಂದಿಗೆ ಸಂದರ್ಶನಕ್ಕೆ ಅನುಮತಿಯನ್ನೇ ನೀಡುತ್ತಿರಲಿಲ್ಲ. ಹಿಜಾಬ್(ಪರ್ದಾ) ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಆಯಿಶಾರು(ರ) ತಮ್ಮನ್ನು ಅನ್ಯ ಪುರುಷರು ನೋಡದಂತೆ ಅಥವಾ ತಾನು ಅನ್ಯ ಪುರುಷರನ್ನು ಕಾಣದಂತೆ ಎಚ್ಚರಿಕೆ ವಹಿಸುತ್ತಿದ್ದರು. ಒಮ್ಮೆ ಇಬ್ನ್ ಇಸ್ಹಾಕ್ ಎಂಬೋರ್ವ ಕುರುಡ ವ್ಯಕ್ತಿಯು ಆಯಿಶಾರ(ರ) ಸಂದರ್ಶನಕ್ಕಾಗಿ ನಿಂತರು. ಆಗ ಆ

ವ್ಯಕ್ತಿ ಪ್ರಶ್ನಿಸಿದರು: "ನಾನು ಕುರುಡನಲ್ಲವೇ? ನನ್ನಿಂದಲೂ ಮರೆಯಾಗಬೇಕೇ?" ಆಗ ಆಯಿಶಾರು(ರ), "ನಿಮಗೆ ನಾನು ಕಾಣಿಸುವುದಿಲ್ಲವೆಂದು ಭಾವಿಸಿ, ನಾನು ನಿಮ್ಮನ್ನು ನೋಡಲಾದೀತೇ?" ಎಂದು ಕೇಳಿದರು.

## ಪಾಂಡಿತ್ಯ

ಆಯಿಶಾರು(ರ) ಪಾಂಡಿತ್ಯದ ಅಕ್ಷಯ ಪಾತ್ರೆಯಾಗಿದ್ದರು. ಪಾಂಡಿತ್ಯದಲ್ಲಿ ಅವರಿಗೆ ಸರಿಸಾಟಿಯಾದ ಸಹಾಬಿಗಳು ತೀರಾ ವಿರಳ. ಅಬೂಬಕರ್(ರ), ಉಮರ್(ರ), ಉಸ್ಮಾನ್(ರ) ಮುಂತಾದ ಖಲೀಫರ ಕಾಲದಲ್ಲಿ ಆಯಿಶಾರು(ರ) ಫತ್ವ ನೀಡುತ್ತಿದ್ದರು. ಉನ್ನತ ಸಹಾಬಿಗಳೂ ವಾರೀಸು ಹಕ್ಕಿನ ಕಾನೂನುಗಳಂಥ ಕ್ಲಿಷ್ಟ ವಿಷಯಗಳ ಸಂದೇಹ ನಿವಾರಣೆಗಾಗಿ ಆಯಿಶಾರನ್ನು(ರ) ಸಮೀಪಿಸುತ್ತಿದ್ದರು. ಹದೀಸ್ ಮತ್ತು ಕುರ್‌ಆನ್‌ಗಳಲ್ಲಿ ಅವರ ಪಾಂಡಿತ್ಯವು ಅನುಪಮವಾಗಿತ್ತು. 2210 ಪ್ರವಾದಿ ವಚನಗಳು ಹ. ಆಯಿಶಾರಿಂದ(ರ) ವರದಿಯಾಗಿವೆ.

ಹ. ಆಯಿಶಾರು(ರ) ಇಸ್ಲಾಮಿನ ತಿರುಳನ್ನು ಗುರುತಿಸಿದಂಥ ಮಹಿಳೆ. ಅಂಧಾನುಕರಣೆಗಳನ್ನು ಅವರು ವಿರೋಧಿಸಿದ್ದರು. ಕುರ್‌ಆನ್ ಮತ್ತು ಪ್ರವಾದಿಚರ್ಯೆ(ಸುನ್ನತ್)ಗಳ ಆಧಾರದಲ್ಲಿ ಬುದ್ಧಿ ಮತ್ತು ಯುಕ್ತಿಗೆ ಅನುಗುಣವಾಗಿ ಸಮಸ್ಯೆಗಳನ್ನು ಬಗೆಹರಿಸುವುದೇ ಆಯಿಶಾರ(ರ) ವೈಶಿಷ್ಟ್ಯವೆಂದು ಹೇಳಬಹುದು. ಮರಣ ಹೊಂದಿದವರು ಆಲಿಸಬಹುದಾದರೂ ಅವರಿಗೆ ಉತ್ತರ ನೀಡಲು ಸಾಧ್ಯವಿಲ್ಲವೆಂಬ ಒಂದು ಹದೀಸ್ ಇದೆ. ಆದರೆ ಇದನ್ನು ಕೇಳಿದಾಕ್ಷಣ ಆಯಿಶಾರು(ರ) ಹೀಗೆಂದರು:

"ಪ್ರವಾದಿ(ಸ) ಹಾಗೆ ಹೇಳಿಲ್ಲ. ಯಾಕೆಂದರೆ ಕುರ್‌ಆನ್ ಹೇಳುತ್ತದೆ: ಮೃತ ದೇಹಗಳಿಗೂ ಕಬರ್‌ನಲ್ಲಿ ದಫನ ಮಾಡಲ್ಪಟ್ಟವರಿಗೂ ನಿನ್ನಿಂದ ಕೇಳಿಸಲು ಸಾಧ್ಯವಿಲ್ಲ."

'ಮಿಅ್‌ರಾಜ್' ಆತ್ಮೀಯವೋ ಅಥವಾ ದೈಹಿಕವೋ ಎಂಬುದು ಚರ್ಚಾ ವಿಷಯವಾಗಿದ್ದಿತು. ಆಯಿಶಾ(ರ) ಅದು ಆತ್ಮೀಯವೆಂದು ಅಭಿಪ್ರಾಯ ಪಟ್ಟಿದ್ದಾರೆ. ಪ್ರವಾದಿವರ್ಯರು(ಸ) ಮಿಅ್‌ರಾಜ್‌ನ ರಾತ್ರಿ ಅಲ್ಲಾಹನನ್ನು ನೋಡಿದರೆಂಬುದನ್ನು ಹಾಗೂ ಕುಟುಂಬಿಕರ ಪ್ರಲಾಪಕ್ಕಾಗಿ ಮೃತದೇಹಕ್ಕೆ ದಂಡನೆ ದೊರೆಯುವುದೆಂಬ ಅಭಿಪ್ರಾಯವನ್ನು ಆಯಿಶಾರು(ರ) ಕುರ್‌ಆನ್‌ನ ಆಧಾರದಲ್ಲಿ ಖಂಡಿಸಿದರು. ಆಯಿಶಾರು(ರ) ಸಾಹಿತ್ಯ ಮತ್ತು ವಂಶ ಚರಿತ್ರೆಯಲ್ಲಿಯೂ ಅಪಾರ ಪಾಂಡಿತ್ಯ ಹೊಂದಿದ್ದರು. ಸುದೀರ್ಘವಾದ ಅನೇಕ ಕವಿತೆಗಳನ್ನು ಅವರು ಕಂಠಪಾಠ ಮಾಡಿದ್ದರು. ಹುಟ್ಟು ಅಭಿರುಚಿ ಹಾಗೂ ಪ್ರವಾದಿ ವರ್ಯರ(ಸ) ನಿರಂತರ ಸಂಪರ್ಕವು ಆಯಿಶಾರ(ರ) ಪ್ರತಿಭೆಯನ್ನು ಉಜ್ವಲಗೊಳಿಸಿತು.

## ನಿಧನ

ವಿವಿಧ ಘಟನಾವಳಿಗಳಿಂದ ತುಂಬಿದ ಮಾದರಿ ಯೋಗ್ಯ ಜೀವನವನ್ನು ಸಾಗಿಸಿದ, ಆ ಸತ್ಯವಿಶ್ವಾಸಿಗಳ ಪರಿಶುದ್ಧ ಮಾತೆಯು, ಮುಸ್ಲಿಮ್ ಜನಕೋಟಿಯನ್ನು ದುಃಖ ಸಾಗರದಲ್ಲಿ ಮುಳುಗಿಸಿ ಹಿಜರಿ 58, ರಮಝಾನ್ 17 ಸೋಮವಾರ ರಾತ್ರಿ 66ನೇ ವಯಸ್ಸಿನಲ್ಲಿ ದಿವಂಗತರಾದರು. ಆಗ ಮುಆವಿಯಾ(ರ) ಆಡಳಿತ ನಡೆಸುತ್ತಿದ್ದರು. ಪ್ರಸಿದ್ಧ ಸಹಾಬಿ ಹಾಗೂ ಅಂದು ಮದೀನಾದ ಗವರ್ನರರಾಗಿದ್ದ ಹ. ಅಬೂಹುರೈರರು(ರ) ಜನಾಝ ನಮಾಝ್‌ನ ನೇತೃತ್ವ ವಹಿಸಿದ್ದರು. ಮರಣ ವಾಙ್ಮೂಲ(ವಸಿಯ್ಯತ್)ದಂತೆ ರಾತ್ರಿಯೇ 'ಜನ್ನತುಲ್ ಬಖೀಅ್' ದಫನ ಭೂಮಿಯಲ್ಲಿ ಪ್ರವಾದಿವರ್ಯರ(ಸ) ಇತರ ಪತ್ನಿಯರೊಡನೆ ಆ ಪುಣ್ಯ ದೇಹವು ದಫನ ಹೊಂದಿತು. ಪ್ರವಾದಿ(ಸ) ಮತ್ತು ಅಬೂಬಕರ್(ರ) ಅಂತ್ಯ ವಿಶ್ರಾಂತಿ ಹೊಂದಿರುವ ಸ್ಥಳದಲ್ಲಿಯೇ ತಾನೂ ದಫನ ಗೊಳ್ಳಬೇಕೆಂದು ಆಯಿಶಾ(ರ) ಆಶಿಸಿದ್ದರು. ಆದರೆ ಖಲೀಫ ಉಮರ್‌ರೂ(ರ) ತನಗಾಗಿ ಆ ಸ್ಥಳವನ್ನೇ ಆಗ್ರಹಿಸಿದ್ದರು. ಆದ್ದರಿಂದ ಉಮರ್‌ರ(ರ) ಅಭಿಲಾಷೆಯನ್ನು ಗಮನಿಸಿ ಆಯಿಶಾರು(ರ) ಅದಕ್ಕೆ ಅವಕಾಶ ಮಾಡಿಕೊಟ್ಟರು.

# ಹರ್ಫ್ರತ್ ಹಫ್ಸ(ರ)

ಹ. ಹಫ್ಸರು(ರ) ಉಮರ್ ಬಿನ್ ಖತ್ತಾಬ್‌ರ(ರ) ಪುತ್ರಿ. ಝೈನಬ್ ಬಿಂತು ಮಸ್‌ವೂದ್‌ರು ಅವರ ತಾಯಿ. ಮುಹಮ್ಮದ್‌ರಿಗೆ(ಸ) ಪ್ರವಾದಿತ್ವ ದೊರೆಯುವುದಕ್ಕಿಂತ ಐದು ವರ್ಷಗಳ ಹಿಂದೆ ಕುರೈಶರು ಕಅಬಾವನ್ನು ನವೀನವಾಗಿ ನಿರ್ಮಿಸುತ್ತಿದ್ದ ಕಾಲದಲ್ಲಿ ಹಫ್ಸ ಜನಿಸಿದರು. ಕುರೈಶ್ ಮುಖಂಡರಲ್ಲಿ ಅಗ್ರಗಣ್ಯರಾದ ಉಮರ್ ಬಿನ್ ಖತ್ತಾಬ್‌ರು ಆರಂಭದಲ್ಲಿ ಪ್ರವಾದಿ ಹಾಗೂ ಇಸ್ಲಾಮಿನ ಕಡು ವೈರಿಗಳಾಗಿದ್ದರು. ಉಮರ್(ರ) ಇಸ್ಲಾಮ್ ಸ್ವೀಕರಿಸಿದ ಬಳಿಕ ಹಫ್ಸ ಮತ್ತು ಕುಟುಂಬದ ಇತರ ಸದಸ್ಯರು ಮುಸ್ಲಿಮರಾದರು. ಇದು ನುಬುವ್ವತ್(ಪ್ರವಾದಿತ್ವದಲ್ಲಿ)ನ ಆರನೇ ವರ್ಷದಲ್ಲಿ ನಡೆಯಿತು. ಅಂದು ಹಫ್ಸರಿಗೆ(ರ) ಸುಮಾರು ಹನ್ನೊಂದು ವರ್ಷ ವಯಸ್ಸಾಗಿತ್ತು.

## ಪ್ರಥಮ ವಿವಾಹ

ಹ. ಹಫ್ಸರ(ರ) ಪ್ರಥಮ ವಿವಾಹವು ಖುನೈಸ್ ಬಿನ್ ಹುದಾಫರೊಂದಿಗೆ ನಡೆಯಿತು. ಕುರೈಶರ ಅಕ್ರಮ ಮರ್ದನಗಳು ಹೆಚ್ಚಾದಾಗ ಇತರ ಮುಸ್ಲಿಮರೊಡನೆ ಹಫ್ಸ(ರ) ಮತ್ತು ಅವರ ಪತಿಯೂ ಮದೀನಾಕ್ಕೆ ವಲಸೆ ಹೋದರು. ಮದೀನಾಕ್ಕೆ ತಲಪಿದ ಬಳಿಕ ಮುಸ್ಲಿಮರು ಮತ್ತು ಕುರೈಶರು ಬದ್ರ್ ಎಂಬ ಸ್ಥಳದಲ್ಲಿ ಪರಸ್ಪರ ಹೋರಾಡಿದರು. ಬದ್ರ್ ಯುದ್ಧದಲ್ಲಿ ಹಫ್ಸರ ಪತಿ ಖುನೈಸ್(ರ) ಕೂಡಾ ಭಾಗವಹಿಸಿದ್ದರು. ಯುದ್ಧದಲ್ಲಿ ತೀವ್ರ ಗಾಯಗೊಂಡ ಖುನೈಸ್‌ರು(ರ) ಮದೀನಾದಲ್ಲಿ ನಿಧನರಾದರು. ಖುನೈಸರಿಗೆ ಹಫ್ಸರಲ್ಲಿ ಮಕ್ಕಳಾಗಿರಲಿಲ್ಲ.

## ದ್ವಿತೀಯ ವಿವಾಹ

ಹಫ್ಸರ ಪತಿ ತೀರಿಕೊಂಡಾಗ ಉಮರ್‌ರು(ರ) ಅವರಿಗೆ ಎರಡನೇ ವಿವಾಹ ಮಾಡುವ ಬಗ್ಗೆ ಆಲೋಚಿಸಿದರು. ಉಸ್ಮಾನ್ ಬಿನ್ ಅಫ್ಫಾನ್‌ರ ಪತ್ನಿಯೂ, ಪ್ರವಾದಿ(ಸ) ವರ್ಯರ ಪುತ್ರಿಯೂ ಆಗಿದ್ದ ರುಕಿಯ್ಯಾರೂ ಅದೇ ಸಂದರ್ಭದಲ್ಲಿ ನಿಧನರಾಗಿದ್ದರು. ಉಮರ್‌ರು(ರ) ಉಸ್ಮಾನ್‌ರ(ರ) ಬಳಿ ಹೋಗಿ ಹಫ್ಸರನ್ನು ಮರು ವಿವಾಹವಾಗುವ ಬಗ್ಗೆ ವಿಚಾರಿಸಿದರು. ಆದರೆ ಉಸ್ಮಾನ್‌ರು(ರ), ನಾನು ಈಗ ವಿವಾಹವಾಗ ಬಯಸಿಲ್ಲವೆಂದು ಹೇಳಿ ಜಾರಿಕೊಂಡರು. ಉಮರ್‌ರು(ರ) ಈ ವಿಷಯವನ್ನು ಅಬೂಬಕರ್‌ರಿಗೆ(ರ) ತಿಳಿಸಿದರು.

ಆದರೆ ಅಬೂಬಕರ್‌ರು(ರ) ಅದಕ್ಕೆ ಯಾವ ಉತ್ತರವನ್ನೂ ನೀಡಲಿಲ್ಲ. ಉಮರ್‌ರಿಗೆ(ರ) ಭಾರೀ ದುಃಖವಾಯಿತು. ಅವರು ಪ್ರವಾದಿವರ್ಯರ(ಸ) ಬಳಿ ಹೋಗಿ ನಡೆದ ವಿಷಯವನ್ನು ತಿಳಿಸಿದರು. ಪ್ರವಾದಿ(ಸ) ಅವರನ್ನು ಸಾಂತ್ವನಗೊಳಿಸಿದರು. ಹಫ್ಸರಿಗೆ ಉಸ್ಮಾನ್‌ರಿಗಿಂತ ಶ್ರೇಷ್ಠರಾದ ಪತಿಯೂ ಉಸ್ಮಾನ್‌ರಿಗೆ ಹಫ್ಸರಿಗಿಂತ ಶ್ರೇಷ್ಠರಾದ ಪತ್ನಿಯೂ ದೊರೆಯಬಹುದೆಂದರು. ಇದು ಪ್ರವಾದಿವರ್ಯರನ್ನೂ(ಸ) ಉಸ್ಮಾನ್‌ರು(ರ) ಹ. ರುಖಿಯ್ಯಾರ ಸಹೋದರಿ ಉಮ್ಮು ಕುಲ್ಸೂಮ್‌ರನ್ನೂ ವಿವಾಹವಾಗುವರೆಂಬ ಸೂಚನೆಯಾಗಿದ್ದಿತು. ಹಾಗೆಯೇ ನಡೆಯಿತು. ಪ್ರವಾದಿ(ಸ) ಹಫ್ಸರನ್ನು ವಿವಾಹವಾದರು. ಮಗಳು ಉಮ್ಮು ಕುಲ್ಸೂಮ್‌ರನ್ನು ಉಸ್ಮಾನ್‌ರಿಗೆ(ರ) ವಿವಾಹ ಮಾಡಿ ಕೊಟ್ಟರು. ವಿವಾಹದ ಬಳಿಕ ಅಬೂಬಕರ್‌ರು(ರ) ಉಮರ್‌ರ(ರ) ಬಳಿ ಬಂದು ತಾನು ಈ ಹಿಂದೆ ಉತ್ತರ ನೀಡದೆ ಮೌನ ವಹಿಸಿದ ಕಾರಣವನ್ನು ವಿವರಿಸಿದರು. ಪ್ರವಾದಿವರ್ಯರು(ಸ) ಹಫ್ಸರನ್ನು ವಿವಾಹವಾಗುವ ಕುರಿತು ಪ್ರಸ್ತಾವಿಸಿರುವುದನ್ನು ಕೇಳಿರುವುದರಿಂದ ನಾನು ಮೌನ ವಹಿಸಿದೆನೆಂದು ಅವರು ಹೇಳಿದರು.

## ಹಫ್ಸ(ರ) ಮತ್ತು ಆಯಿಶಾ(ರ)

ಅಬೂಬಕರ್ ಸಿದ್ದೀಕ್ ಮತ್ತು ಉಮರ್ ಬಿನ್‌ಖತ್ತಾಬ್‌ರ(ರ) ಸ್ನೇಹ ಸಂಬಂಧ ಪ್ರಖ್ಯಾತವಾಗಿದೆ. ಅವರು ಪ್ರವಾದಿವರ್ಯರ(ಸ) ಅತೀ ನಿಕಟ ಅನುಯಾಯಿಗಳಾಗಿದ್ದರು. ತಂದೆಯಂದಿರ ಸ್ನೇಹ ಸಂಬಂಧವೇ ಆಯಿಶಾ(ರ) ಮತ್ತು ಹಫ್ಸರಲ್ಲಿದ್ದಿತು(ರ). ಪ್ರವಾದಿವರ್ಯರ(ಸ) ಪ್ರೇಮ ವಾತ್ಸಲ್ಯಗಳನ್ನು ಸಂಪಾದಿಸುವುದರಲ್ಲಿಯೂ ಅವರು ಇತರ ಪತ್ನಿಯರನ್ನು ಮೀರಿಸಿದ್ದರು. ಅಬೂಬಕರ್(ರ) ಮತ್ತು ಉಮರ್‌ರಿಗೆ(ರ) ಅನುಯಾಯಿಗಳಲ್ಲಿದ್ದ ಅಗ್ರಮಾನ್ಯತೆಯು ಪ್ರವಾದಿಯ(ಸ) ಪತ್ನಿಯರಲ್ಲಿ ಆಯಿಶಾ(ರ) ಮತ್ತು ಹಫ್ಸರಿಗಿದ್ದಿತು(ರ). ಹೆಚ್ಚಿನ ವಿಷಯಗಳಲ್ಲಿ ಅವರೀರ್ವರೂ ಜಂಟಿಯಾಗಿರುತ್ತಿದ್ದರು. ಕೌಟುಂಬಿಕ ಸಮಸ್ಯೆಗಳಲ್ಲಿ ಆಯಿಶಾ(ರ) ಮತ್ತು ಹಫ್ಸರು(ರ) ಇತರರ ಮುಂದಾಳ್ತನ ವಹಿಸುತ್ತಿದ್ದರು. ಪುನೀತ ಪತ್ನಿಯರು ಪ್ರವಾದಿಯೊಡನೆ(ಸ) ಮನೆಯ ಅಗತ್ಯಗಳಿಗಾಗಿ ಅಧಿಕ ಮೊತ್ತದ ಬೇಡಿಕೆಯನ್ನು ಮುಂದಿಟ್ಟಾಗ ಅದರ ನಾಯಕತ್ವವನ್ನು ಈ ಮಹಾ ತಾಯಿಯರೇ ವಹಿಸಿಕೊಂಡಿದ್ದರು.

ಒಮ್ಮೆ ಅಬೂಬಕರ್ ಸಿದ್ದೀಕ್ ಮತ್ತು ಉಮರ್ ಬಿನ್ ಖತ್ತಾಬ್‌ರು ಪ್ರವಾದಿಯವರ(ಸ) ಬಳಿ ಹೋದರು. ಪ್ರವಾದಿಯ ಸುತ್ತಲೂ ಪತ್ನಿಯರು ಕುಳಿತಿದ್ದರು. ಅವರು ಸಾಮೂಹಿಕವಾಗಿ ತಮ್ಮ ಬೇಡಿಕೆಯನ್ನು ಪ್ರವಾದಿಯವರ ಮುಂದಿರಿಸಿದ್ದರು. ಪ್ರವಾದಿವರ್ಯರು(ಸ) ಮಾತನಾಡದೆ ವಿಷಾದದಿಂದ ಕುಳಿತಿದ್ದಾರೆ. ಈ ಪರಿಸ್ಥಿತಿಯನ್ನು ಕಂಡಾಗ ಪ್ರವಾದಿವರ್ಯರನ್ನು(ಸ) ಸ್ವಲ್ಪ ಉಲ್ಲಸಿತಗೊಳಿಸೋಣವೆಂದು ಉಮರ್ ಭಾವಿಸಿದರು. ಅವರು ಚಟಾಕಿಯೆಂಬಂತೆ: ಪ್ರವಾದಿಯವರೇ! ಖಾರಿಜಃನ ಮಗಳು (ಪತ್ನಿಯ ಕುರಿತು)

ನನ್ನೊಡನೆ ಬೇಕಾಬಿಟ್ಟಿ ಅಪೇಕ್ಷಿಸಿದರೆ ನಾನು ಆಕೆಯ ಕತ್ತು ಹಿಸುಕಿ ಬಿಡುತ್ತೇನೆ? ಎಂದು ಹೇಳಿದರು. ಪ್ರವಾದಿ(ಸ) ನಗುತ್ತಾ ಹೇಳಿದರು: "ಇದೋ ನನ್ನ ಸುತ್ತಲೂ ಕುಳಿತಿರುವುದನ್ನು ನೋಡಲಿಲ್ಲವೇ? ಇವರು ನನ್ನೊಡನೆ ಹಲವು ವಿಷಯಗಳನ್ನು ಬೇಡುತ್ತಾರೆ." ಇದನ್ನು ಕೇಳಿದಾಗ ಅಬೂಬಕರ್(ರ) ಮತ್ತು ಉಮರ್‌ರು(ರ) "ನೀವು ಪ್ರವಾದಿಯ ಬಳಿ ಇಲ್ಲದವುಗಳನ್ನು ಯಾಚಿಸುತ್ತೀರಾ?" ಎಂದು ಪ್ರಶ್ನಿಸಿ ಆಯಿಶಾ(ರ) ಮತ್ತು ಹಫ್ಸರ(ರ) ಕತ್ತು ಹಿಸುಕಿ ಹೊಡೆಯಲು ಮುಂದಾದರು. ಇನ್ನು ಮುಂದೆ ನಾವು ಪ್ರವಾದಿ(ಸ) ಬಳಿ ಇಲ್ಲದವುಗಳನ್ನು ಕೇಳಿ ತೊಂದರೆಪಡಿಸುವುದಿಲ್ಲವೆಂದು ಅವರು ಒಪ್ಪಿದರು.

## ಜೇನು ಕುಡಿದ ಘಟನೆ

ಪ್ರವಾದಿವರ್ಯರು(ಸ) ಜೇನು ಕುಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ ಘಟನೆಗೆ ಹಫ್ಸ(ರ) ಮತ್ತು ಆಯಿಶಾರೇ(ರ) ಹೇತುವಾಗಿದ್ದರು. ಪ್ರವಾದಿವರ್ಯರಿಗೆ ಝೈನಬ್ ಜೇನು ಕುಡಿಸುವುದು ಅವರಿಗೆ ಮೆಚ್ಚುಗೆಯಾಗಲಿಲ್ಲ. ಈ ವಾಡಿಕೆಯನ್ನು ರದ್ದುಗೊಳಿಸಲಿಕ್ಕಾಗಿ ಈರ್ವರೂ ಮಂತ್ರಾಲೋಚನೆ ನಡೆಸಿ ನಿರ್ಧರಿಸಿದಂತೆ, ಪ್ರವಾದಿವರ್ಯರು ಕೋಣೆಯೊಳಗೆ ಪ್ರವೇಶಿಸಿದಾಗ ಹ. ಹಫ್ಸ(ರ) ಹೇಳಿದರು: "ನಿಮ್ಮ ಬಾಯಿಯಿಂದ ಏನೋ ದುರ್ಗಂಧ ಬರುತ್ತಿದೆ." "ನಾನು ಝೈನಬರ ಮನೆಯಲ್ಲಿ ಸ್ವಲ್ಪ ಜೇನು ಕುಡಿದಿದ್ದೆ, ಇನ್ನು ಮುಂದೆ ಅದನ್ನು ಕುಡಿಯುವುದಿಲ್ಲ" ಎಂದು ಪ್ರವಾದಿಯವರು(ಸ) ಹಫ್ಸರಿಗೆ ತಿಳಿಸಿದರು. ಝೈನಬರ ಮನ ನೋಯದಿರಲಿಕ್ಕಾಗಿ ಈ ವಿಷಯವನ್ನು ಯಾರಿಗೂ ತಿಳಿಸದೆ ಗುಪ್ತವಾಗಿರಿಸ ಬೇಕೆಂದೂ ಪ್ರವಾದಿ(ಸ) ಹಫ್ಸರಿಗೆ ಸೂಚಿಸಿದರು. ಆದರೆ ಹಫ್ಸರು(ರ) ಅದನ್ನು ಆಯಿಶಾರಿಗೆ(ರ) ತಿಳಿಸಿದರು. ಪ್ರವಾದಿಯ(ಸ) ವಿರುದ್ಧ ಮಂತ್ರಾಲೋಚನೆ ನಡೆಸಿ, ಪ್ರವಾದಿಯ ರಹಸ್ಯವನ್ನು ಬಹಿರಂಗಗೊಳಿಸಿದುದಕ್ಕಾಗಿ ಈರ್ವರು ಪತ್ನಿಯರಿಗೂ ಎಚ್ಚರಿಕೆ ನೀಡುವ ಕುರ್‌ಆನ್ ವಾಕ್ಯ ಅವತೀರ್ಣಗೊಂಡಿತು.

"ಸಂದೇಶವಾಹಕರೇ, ಅಲ್ಲಾಹನು ನಿಮಗೆ 'ಧರ್ಮಸಮ್ಮತ'ಗೊಳಿಸಿರುವ ವಸ್ತುವನ್ನು ನೀವೇಕೆ ನಿಷಿದ್ಧಗೊಳಿಸುತ್ತೀರಿ? ನೀವು ನಿಮ್ಮ ಪತ್ನಿಯರ ಮೆಚ್ಚುಗೆಯನ್ನು ಬಯಸುತ್ತೀರಿ (ಎಂಬ ಕಾರಣದಿಂದಲೇ?) ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ. ಅಲ್ಲಾಹನು ನಿಮಗೆ ನೀವು ಹಾಕಿದ ಆಣೆಗಳ ಪಾಲನೆಯಿಂದ ಮುಕ್ತರಾಗುವ ಕ್ರಮವನ್ನು ನಿಶ್ಚಯಿಸಿರುತ್ತಾನೆ. ಅಲ್ಲಾಹನು ನಿಮ್ಮ ಸಂರಕ್ಷಕನು ಮತ್ತು ಅವನೇ ಸರ್ವಜ್ಞನೂ ಯುಕ್ತಿ ಪೂರ್ಣನೂ ಆಗಿರುತ್ತಾನೆ. (ಮತ್ತು ಈ ವಿಷಯವೂ ಗಮನಾರ್ಹವಾಗಿದೆ) ಪ್ರವಾದಿಯು ತಮ್ಮ ಓರ್ವ ಪತ್ನಿಯೊಡನೆ ಒಂದು ಮಾತನ್ನು ರಹಸ್ಯವಾಗಿ ಹೇಳಿದ್ದರು. ತರುವಾಯ ಆ ಪತ್ನಿಯು (ಇನ್ನೊಬ್ಬರಿಗೆ) ಈ ರಹಸ್ಯವನ್ನು ಬಯಲುಗೊಳಿಸಿಬಿಟ್ಟಾಗ ಮತ್ತು ಅಲ್ಲಾಹನು ಪ್ರವಾದಿಗೆ ಈ (ರಹಸ್ಯವನ್ನು ಬಯಲುಗೊಳಿಸಿದ) ಸುದ್ದಿಯನ್ನು ತಿಳಿಸಿದಾಗ, ಅವರು ಅದರ

ಸ್ವಲ್ಪಾಂಶವನ್ನು (ಆ ಪತ್ನಿಗೆ) ತಿಳಿಸಿದರು ಮತ್ತು ಸ್ವಲ್ಪಾಂಶವನ್ನು ಕಡೆಗಣಿಸಿದರು. ತರುವಾಯ ಪ್ರವಾದಿಯವರು ಅವರಿಗೆ ಆ (ರಹಸ್ಯವನ್ನು ಬಯಲುಗೊಳಿಸಿದ) ಸುದ್ದಿಯನ್ನು ತಿಳಿಸಿದಾಗ ಅವರು, "ನಿಮಗೆ ಈ ಸುದ್ದಿ ಕೊಟ್ಟವರಾರು?" ಎಂದು ಕೇಳಿದರು. ಪ್ರವಾದಿಯವರು, "ನನಗೆ ಸರ್ವಜ್ಞನೂ ವಿವರಪೂರ್ಣನೂ ಆಗಿರುವವನು ಸುದ್ದಿ ತಿಳಿಸಿದನು" ಎಂದರು. ನೀವಿಬ್ಬರೂ ಅಲ್ಲಾಹನೊಡನೆ ಪಶ್ಚಾತ್ತಾಪಪಡುತ್ತೀರಾದರೆ (ಇದು ನಿಮ್ಮ ಪಾಲಿಗೆ ಉತ್ತಮ ವಾಗಿದೆ). ಏಕೆಂದರೆ, ನಿಮ್ಮ ಹೃದಯಗಳು ನೇರ ಮಾರ್ಗದಿಂದ ಸರಿದು ಹೋಗಿವೆ ಮತ್ತು ನೀವು ಪ್ರವಾದಿಯ ವಿರುದ್ಧ ಗುಂಪುಗಾರಿಕೆ ನಡೆಸಿದರೆ, ಅಲ್ಲಾಹನು ಅವರ ಸಂರಕ್ಷಕನಾಗಿದ್ದಾನೆ ಮತ್ತು ಅವನ ನಂತರ ಜಿಬ್ರೀಲರು, ಎಲ್ಲ ಸಜ್ಜನ ಸತ್ಯವಿಶ್ವಾಸಿಗಳು ಮತ್ತು ಎಲ್ಲ ದೇವಚರರು ಅವರ ಸಂಗಾತಿಗಳೂ ಸಹಾಯಕರೂ ಆಗಿರುವರೆಂಬುದು ನಿಮಗೆ ತಿಳಿದಿರಲಿ. ಪ್ರವಾದಿಯು ನಿಮಗೆಲ್ಲರಿಗೂ ತಲಾಕ್ ನೀಡಿದರೆ ಅಲ್ಲಾಹನು ಅವರಿಗೆ ನಿಮ್ಮ ಬದಲಿಗೆ ನಿಮಗಿಂತ ಉತ್ತಮರೂ ನೈಜ ಮುಸ್ಲಿಮರೂ ಸತ್ಯವಿಶ್ವಾಸವುಳ್ಳವರೂ ವಿಧೇಯರೂ ತೌಬಾ ಮಾಡುವವರೂ ಆರಾಧನಾಶೀಲೆಯರೂ ಉಪವಾಸ ವ್ರತ ಆಚರಿಸುವವರೂ ಆದ- ಹಿಂದೆ ವಿವಾಹವಾಗಿದ್ದ ಅಥವಾ ಕುಮಾರಿಯಾಗಿರುವ ಪತ್ನಿಯರನ್ನು ದಯಪಾಲಿಸಬಹುದು."

(ಪವಿತ್ರ ಕುರ್‌ಆನ್, 66:1-5)

ಪ್ರವಾದಿಯವರು(ಸ) ಪತ್ನಿಯರಿಂದ ರೋಸಿ ಒಂದು ತಿಂಗಳು ಅವರನ್ನು ಸಮೀಪಿಸು ವುದಿಲ್ಲವೆಂಬ ಶಪಥ ಹಾಕಿದರು. ಹಾಗೆಯೇ ಅವರು ಒಂದು ತಿಂಗಳ ಬಳಿಕ ಪತ್ನಿಯರ ಬಳಿ ಹೋಗಿ ಎರಡು ವಿಷಯಗಳನ್ನು ಅವರ ಮುಂದಿರಿಸಿದರು. ಅಲ್ಲಾಹ್, ಪ್ರವಾದಿ ಮತ್ತು ಪರಲೋಕವನ್ನು ಆಯ್ದು, ಪ್ರವಾದಿಯೊಂದಿಗೆ ಸರಳ ಜೀವನ ಸಾಗಿಸಲು ಸಿದ್ಧರಾಗ ಬೇಕು ಅಥವಾ ಐಹಿಕ ಜೀವನ ಹಾಗೂ ಅದರ ಸುಖಭೋಗಗಳನ್ನು ಆಯ್ದು ಕೊಂಡು ಪ್ರವಾದಿಯವರ(ಸ) ಸಂಬಂಧ ವಿಚ್ಛೇದನಕ್ಕೆ ಸಿದ್ಧರಾಗಬೇಕು. ಪ್ರವಾದಿಯವರು(ಸ) ಈ ವಿಷಯವನ್ನು ಪ್ರಥಮವಾಗಿ ಆಯಿಶಾ(ರ) ಮತ್ತು ಅನಂತರ ಹಫ್ಸ(ರ) ಮುಂದಿಟ್ಟರು. ಅವರೀರ್ವರೂ ಅಲ್ಲಾಹ್, ಪ್ರವಾದಿ ಮತ್ತು ಪರಲೋಕಕ್ಕೆ, ಐಹಿಕ ಸುಖ ಸವಲತ್ತುಗಳಿ ಗಿಂತ ಪ್ರಾಧಾನ್ಯತೆ ನೀಡಿದರು. ಅವರಂತೆಯೇ ಇತರ ಪತ್ನಿಯರೂ ವರ್ತಿಸಿದರು.

## ಬುದ್ಧಿ ಮತ್ತು ಪಾಂಡಿತ್ಯ

ಹಫ್ಸರು ವಿದ್ಯೆ ಬುದ್ಧಿಗಳಲ್ಲಿ ಪ್ರತಿಭಾವಂತರಾಗಿದ್ದರು. ಓದುಬರಹ ಬಲ್ಲವರಾಗಿ ದ್ದರು. ಇತರರಿಗೆ ಕಲಿಸುವ ಬಗ್ಗೆ ಉತ್ಸುಕರಾಗಿದ್ದರು. ಆದ್ದರಿಂದ ಹಫ್ಸರು ಸ್ತ್ರೀ-ಪುರುಷರ ನ್ನೊಳಗೊಂಡ ಶಿಷ್ಯ ಗಣವನ್ನು ಸಂಪಾದಿಸಿಕೊಂಡಿದ್ದರು. ಪವಿತ್ರ ಕುರ್‌ಆನನ್ನು ಚೆನ್ನಾಗಿ ಮನಗತ ಮಾಡಿದ್ದರು. ಕುರ್‌ಆನ್‌ನ ಪ್ರಥಮ ಕೈಬರಹ ಪ್ರತಿಯು ಹಫ್ಸರ ಬಳಿಯಿದ್ದಿತು. ಅಬೂಬಕರ್‌ರ(ರ) ಆಡಳಿತ ಕಾಲದಲ್ಲಿ ಕುರ್‌ಆನನ್ನು ಒಂದೇ ಸಂಪುಟದಲ್ಲಿ ಬರೆದು ಕ್ರೋಡೀಕರಿಸಲಾಗಿತ್ತು. ಎರಡನೇ ಖಲೀಫ ಉಮರ್‌ರ(ರ) ನಿಧನಾನಂತರ ಪ್ರಸ್ತುತ ಹಸ್ತ

ಪ್ರತಿಯು ಹಫ್ಸರ(ರ) ಕೈ ಸೇರಿತು. ಉಸ್ಮಾನ್ ಬಿನ್ ಅಫ್ಫಾನ್‌ರ(ರ) ಆಡಳಿತ ಕಾಲದಲ್ಲಿ ಪ್ರಸ್ತುತ ಪ್ರತಿಯನ್ನು ಹಫ್ಸರಿಂದ(ರ) ಅವರು ತರಿಸಿಕೊಂಡು ಅದರ ಹಲವಾರು ಪ್ರತಿಗಳನ್ನು ನಕಲು ಮಾಡಿದ ಬಳಿಕ ಮೂಲ ಪ್ರತಿಯನ್ನು ಹಿಂತಿರುಗಿಸಿದರು. ಮರ್ವಾನ್‌ರು ಮದೀನಾದ ಗವರ್ನರ್ ಆಗಿ ನೇಮಕಗೊಂಡಾಗ ಅವರು ಹಫ್ಸರೊಡನೆ ಆ ಹಸ್ತಪ್ರತಿಯನ್ನು ಕೇಳಿದರೂ ಅವರು ಕೊಡಲೊಪ್ಪಲಿಲ್ಲ. ಹ. ಹಫ್ಸರ(ರ) ನಿಧನದ ಬಳಿಕ ಮರ್ವಾನ್‌ರು ಆ ಹಸ್ತಪ್ರತಿಯನ್ನು ಹಫ್ಸರ(ರ) ಸಹೋದರ ಅಬ್ದುಲ್ಲಾ ಬಿನ್ ಉಮರ್‌ರಿಂದ ವಶಪಡಿಸಿಕೊಂಡರು. ತರುವಾಯ ಅದು ಕಳೆದು ಹೋಯಿತು.

ಹ. ಹಫ್ಸರು(ರ) 60 ಪ್ರವಾದಿ ವಚನಗಳನ್ನು ವರದಿ ಮಾಡಿದ್ದಾರೆ.

## ತಂದೆಯಂತೆ ಮಗಳು

ಹ. ಹಫ್ಸರಿಗೆ(ರ) ಅವರ ತಂದೆಯ ಗುಣನಡತೆಗಳೊಡನೆ ತುಂಬಾ ಸಾಮ್ಯತೆಯಿತ್ತು. ತಂದೆಯ ಕೆಚ್ಚು ಮತ್ತು ದೃಢಚಿತ್ತತೆ ಅವರಲ್ಲಿ ಅಭಿವ್ಯಕ್ತವಾಗುತ್ತಿತ್ತು. ಕೆಲವೊಮ್ಮೆ ಪ್ರವಾದಿಯೊಡನೆಯೂ ನಿರ್ದಾಕ್ಷಿಣ್ಯದಿಂದ ಮಾತನಾಡುತ್ತಿದ್ದರು. ಒಮ್ಮೆ ಈ ಬಗ್ಗೆ ತಿಳಿದಾಗ ಉಮರ್‌ರು(ರ) ಅವರಿಗೆ ಎಚ್ಚರಿಕೆ ನೀಡಿದ್ದರು. ಹಫ್ಸರ(ರ) ಕುರಿತು ಆಯಿಶಾರು(ರ), "ಹಫ್ಸ(ರ) ತನ್ನ ತಂದೆಯ ಮಗಳು" ಎಂದು ಹೇಳಿದರು. ಅರ್ಥಾತ್ ತಂದೆಯ ಗುಣನಡತೆಗಳೆಲ್ಲವೂ ಹಫ್ಸರಲ್ಲಿ(ರ) ಮೈಗೂಡಿದ್ದುವು. ಅವರಿಗೆ ಸವತಿಗಳೆಂಬ ಕೆಲವು ಹಿತವಿರಸವನ್ನು ಬಿಟ್ಟರೆ, ಪ್ರವಾದಿಯ ಇತರ ಪತ್ನಿಯರೊಡನೆ ಸಾಮಾನ್ಯ ಸಂತೃಪ್ತ ಸಂಬಂಧವಿದ್ದಿತು. ಅವರು ಆಯಿಶಾರೊಡನೆ(ರ) ಹೆಚ್ಚು ನಿಕಟವಾಗಿದ್ದರು.

ಹ. ಹಫ್ಸರು(ರ) ದೇವನಿಷ್ಠೆ ಹಾಗೂ ಭಯಭಕ್ತಿಯುಳ್ಳ ಮಹಿಳೆಯಾಗಿದ್ದರು. ತಹಜ್ಜುದ್ ನಮಾಝ್ ಮತ್ತು ಸುನ್ನತ್ ಉಪವಾಸ ನಿರ್ವಹಣೆಯಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದರು. ಪ್ರವಾದಿವರ್ಯರ(ಸ) ನಿಧನಾನಂತರ ಮನೆಯಿಂದ ಹೊರ ಹೋಗುತ್ತಿರಲಿಲ್ಲ.

## ನಿಧನ

ಹಿಜರಿ 45ರಲ್ಲಿ ಹ. ಮುಆವಿಯರ(ರ) ಆಡಳಿತ ಕಾಲದಲ್ಲಿ ಸತ್ಯವಿಶ್ವಾಸಿಗಳ ಮಾತೆ ಹ. ಹಫ್ಸರು(ರ) ಈ ಲೋಕಕ್ಕೆ ಶಾಶ್ವತ ವಿದಾಯ ಕೋರಿದರು. ನಿಧನ ವೇಳೆ ಅವರಿಗೆ ಸುಮಾರು 63 ವರ್ಷ ವಯಸ್ಸಾಗಿತ್ತು. ಮದೀನಾದ ಗವರ್ನರ್ ಆಗಿದ್ದ ಮರ್ವಾನ್ ಬಿನ್ ಹಕಮ್‌ರ ನಾಯಕತ್ವದಲ್ಲಿ ಜನಾಝ ನಮಾಝ್ ನೆರವೇರಿತು. ಮರ್ವಾನ್ ಮತ್ತು ಅಬೂಹುರೈರರು(ರ) ಅವರ ಶವ ಮಂಚಕ್ಕೆ ಹೆಗಲು ಕೊಟ್ಟಿದ್ದರು. ಮದೀನಾದ ಸಾರ್ವಜನಿಕ ದಫನ ಭೂಮಿಯಾಗಿರುವ 'ಜನ್ನತುಲ್ ಬಖೀಅ್'ನಲ್ಲಿ ಹಫ್ಸರ(ರ) ಪಾರ್ಥಿವ ಶರೀರವನ್ನು ಸಮಾಧಿ ಮಾಡಲಾಯಿತು.

□□□

## ಬಡವರ ಮಾತೆ

# ಹಝ್ರತ್ ಝೈನಬ್(ರ)

ಹ. ಝೈನಬ್ ಬಿಂತು ಖುಝೈಮರಿಗೆ(ರ) ಮರಣಕ್ಕಿಂತ ಕೇವಲ ಮೂರು ತಿಂಗಳ ಮುಂಚೆ ಸತ್ಯವಿಶ್ವಾಸಿಗಳ ಮಾತೆಯೆಂಬ ಉತ್ಕೃಷ್ಟ ಸ್ಥಾನ ಪಡೆಯುವ ಸೌಭಾಗ್ಯ ಲಭಿಸಿತು. ಅವರ ಪಾವನ ಜೀವನದ ಹೆಚ್ಚಿನ ಭಾಗವು ಇತಿಹಾಸದ ಕತ್ತಲಲ್ಲಿ ಮರೆಯಾಗಿದೆ. ಆದ್ದರಿಂದ ಅವರ ಜೀವನದ ಬಗ್ಗೆ ಹೆಚ್ಚಿನ ವಿವರಗಳು ನಮಗೆ ಲಭಿಸುವುದಿಲ್ಲ. ಪ್ರವಾದಿತ್ವ ಲಬ್ಧಿಗಿಂತ ಸುಮಾರು ಹದಿನಾಲ್ಕು ವರ್ಷಗಳ ಮೊದಲು ಬನೂ ಹಿಲಾಲ್ ಗೋತ್ರದಲ್ಲಿ ಝೈನಬ್(ರ) ಜನಿಸಿದರು. ಖುಝೈಮ ಬಿನ್ ಹಾರಿಸ್ ಮತ್ತು ಹಿಂದ್ ಬಿಂತು ಔಫ್‌ರು ಅವರ ತಂದೆ ತಾಯಿಗಳು.

### ವಿವಾಹ

ಪ್ರಥಮ ವಿವಾಹವು ಹ. ಅಬ್ದುಲ್ಲಾ ಬಿನ್ ಜಹಶ್‌ರೊಂದಿಗೆ(ರ) ಜರಗಿತು. ಅವರು ಉಹುದ್ ಯುದ್ಧದಲ್ಲಿ ಹುತಾತ್ಮರಾದರು. ವಿಧವೆಯಾಗಿದ್ದ ಝೈನಬ್‌ರಿಗೆ(ರ) ಯಾರೂ ಆಶ್ರಯದಾತರಿರಲಿಲ್ಲ. ಸಂಬಂಧಿಕರೆಲ್ಲರೂ ತೀರಾ ಬಡವರು. ಇಂತಹ ಶೋಚನೀಯ ಸ್ಥಿತಿಯಲ್ಲಿದ್ದ ಝೈನಬ್‌ರನ್ನು(ರ) ಪ್ರವಾದಿ ಮುಹಮ್ಮದರು(ಸ) ವಿವಾಹ ವಾದರು. ಉಹುದ್ ಯುದ್ಧದಲ್ಲಿ 70 ಸಹಾಬಿಗಳು ಹುತಾತ್ಮರಾಗಿದ್ದರು. ಆದ್ದರಿಂದ ಅನೇಕ ಮುಸ್ಲಿಮ್ ಮಹಿಳೆಯರು ವಿಧವೆಯರಾದರು. ನಿರಾವಲಂಬಿಗಳಾದ ಆ ವಿಧವೆಯರನ್ನು ವಿವಾಹವಾಗಿ ಸಂರಕ್ಷಿಸುವಂತೆ ಪ್ರವಾದಿ ಮುಹಮ್ಮದರು(ಸ) ತಮ್ಮ ವಿವಾಹದ ಮೂಲಕ ಮುಸ್ಲಿಮರಿಗೆ ಮಾರ್ಗದರ್ಶನ ನೀಡಿದರು. ಪ್ರವಾದಿಯವರ(ಸ) ಮಾದರಿಯನ್ನು ಸಹಾಬಿಗಳೂ ಅನುಸರಿಸಿದರು. ಇದರಿಂದಾಗಿ ವಿರಹವನ್ನು ನಿವಾರಿಸಿ ಹೊಸ ಪತಿಯರ ಆಶ್ರಯದಲ್ಲಿ ಅವರಿಗೆ ಗೌರವಾರ್ಹ ಬದುಕು ಲಭ್ಯವಾಯಿತು. ಹಿಜರೀ ಮೂರನೇ ವರ್ಷದ ರಮಝಾನ್ ತಿಂಗಳ ಆದಿಯಲ್ಲಿ ಪ್ರವಾದಿಯವರೊಂದಿಗೆ(ಸ) ಝೈನಬ್‌ರ(ರ) ವಿವಾಹ ಜರಗಿತು. ಇವರು ಪ್ರವಾದಿವರ್ಯರು(ಸ) ವಿವಾಹವಾದ ಪ್ರಥಮ ಕುರೈಶಿ ಮಹಿಳೆ.

ಅಬ್ದುಲ್ಲಾ ಬಿನ್ ಜಹಶ್‌ರೊಡನೆ ವಿವಾಹವಾಗುವುದಕ್ಕಿಂತ ಮುಂಚೆ ಝೈನಬ್ ಬಿಂತು ಖುಝೈಮರಿಗೆ(ರ) ಎರಡು ಬಾರಿ ವಿವಾಹವಾಗಿತ್ತೆಂದು ಕೆಲವು ಇತಿಹಾಸಗಾರರು ಹೇಳುತ್ತಾರೆ. ಮೊದಲ ವಿವಾಹವು ತುಫೈಲ್ ಬಿನ್ ಹಾರಿಸ್ ಬಿನ್ ಅಬ್ದುಲ್ ಮುತ್ತಲಿಬ್‌ರೊಂದಿಗೆ ನಡೆದಿತ್ತು. ಅವರು ವಿಚ್ಛೇದನ ನೀಡಿದ ಬಳಿಕ ಉಬೈದ್ ಬಿನ್ ಹಾರಿಸ್‌ರನ್ನು ವಿವಾಹವಾದರು. ಉಬೈದ್ ಬಿನ್ ಹಾರಿಸ್‌ರು ಬದ್ರ್ ಯುದ್ಧದಲ್ಲಿ ಹುತಾತ್ಮರಾದ ಬಳಿಕ ಅಬ್ದುಲ್ಲಾ ಬಿನ್ ಜಹಶ್‌ರನ್ನು ವಿವಾಹವಾದರೆಂದು ಇತಿಹಾಸಗಾರರು ಅಭಿಪ್ರಾಯಪಡುತ್ತಾರೆ.

## ಬಡವರ ಮಾತೆ

ಝೈನಬ್‌ರ(ರ) ಹೃದಯವು ಕರುಣೆ ಮತ್ತು ಅನುಕಂಪದಿಂದ ತುಂಬಿತ್ತು. ಆ ಹೃದಯಕ್ಕೆ ಅನ್ಯರ ಸಂಕಷ್ಟವನ್ನು ನೋಡಿ ಸಹಿಸಲಾಗುತ್ತಿರಲಿಲ್ಲ. ಹೊಟ್ಟೆಗಿಲ್ಲದ ಬಡ ಜನರನ್ನು ಕರೆಸಿ ಉಣಬಡಿಸುತ್ತಿದ್ದರು. ದೀನ ದಲಿತರಿಗೆ ನೆರವು ನೀಡುತ್ತಿದ್ದರು. ಈ ನಿಟ್ಟಿನಲ್ಲಿ ಅವರು ತೋರುತ್ತಿದ್ದ ಅದಮ್ಯ ಕಳಕಳಿಯಿಂದಾಗಿಯೇ ಅವರು ಬಡವರ ಮಾತೆ(ಉಮ್ಮುಲ್ ಮಸಾಕೀನ್) ಎಂಬ ಕೀರ್ತಿಗೆ ಪಾತ್ರರಾದರು. ಝೈನಬ್ ಎಂಬ ಹೆಸರಿಗಿಂತ ಉಮ್ಮುಲ್ ಮಸಾಕೀನ್ ಎಂಬ ಹೆಸರೇ ಜನಪ್ರಿಯವಾಗಿತ್ತು.

## ನಿಧನ

ಅವರಿಗೆ ಪ್ರವಾದಿವರ್ಯರ(ಸ) ಪತ್ನಿಯಾಗಿ ಹೆಚ್ಚು ಕಾಲ ಬಾಳುವ ಭಾಗ್ಯ ದೊರೆಯಲಿಲ್ಲ. ವಿವಾಹವಾದ ಮೂರೇ ತಿಂಗಳಲ್ಲಿ ಹಝ್ರತ್ ಝೈನಬ್ ನಿಧನರಾದರು. ಹಿಜರಿ ಮೂರನೇ ವರ್ಷದಲ್ಲಿ ಅವರ ನಿಧನ ಸಂಭವಿಸಿತ್ತು. ಅವರಿಗೆ 30 ವರ್ಷ ವಯಸ್ಸಾಗಿತ್ತು. ಪ್ರವಾದಿಯವರ(ಸ) ಜೀವನಾವಧಿಯಲ್ಲಿಯೇ ನಿಧನರಾದ ಪತ್ನಿಯರಲ್ಲಿ ಹ. ಖದೀಜಾರ ಬಳಿಕ ಝೈನಬರೇ ಒಬ್ಬರಾಗಿದ್ದಾರೆ. ಪ್ರವಾದಿಯವರು(ಸ) ಅವರ ಜನಾಝು ನಮಾಝ್ ನಿರ್ವಹಿಸಿದರು. ಅಂತೆಯೇ ಪ್ರವಾದಿವರ್ಯರು ತಮ್ಮ ಪತ್ನಿಯರಲ್ಲಿ ಕೇವಲ ಝೈನಬ್‌ರ ಜನಾಝು ನಮಾಝನ್ನು ಮಾತ್ರ ನಿರ್ವಹಿಸಿದರು. ಹಝ್ರತ್ ಖದೀಜಾರು ಮರಣಗೊಂಡಾಗ ಜನಾಝು ನಮಾಝ್‌ನ ವಿಧಿ ಜಾರಿಯಾಗಿರಲಿಲ್ಲ. ಪ್ರವಾದಿಯವರು(ಸ) ಸ್ವಕರಗಳಿಂದ ಪತ್ನಿಯ ಪಾರ್ಥಿವ ಶರೀರವನ್ನು ಗೋರಿಯೊಳಗೆ ಇಳಿಸಿದರು. 'ಜನ್ನತುಲ್ ಬಕೀಅ್'ನಲ್ಲಿ ಸಮಾಧಿಸ್ಥರಾದ ಪ್ರವಾದಿ ಪತ್ನಿಯರಲ್ಲಿಯೂ ಹ. ಝೈನಬ್‌ರೇ ಮೊದಲಿಗರು.

□□□

# ಹಝ್ರತ್ ಉಮ್ಮು ಸಲ್ಮ(ರ)

ಇವರು ಕುರೈಶರ ಬನೂ ಮಖ್ಝೂಮ್ ಗೋತ್ರದಲ್ಲಿ ಹುಟ್ಟಿದರು. ತಂದೆ ಅಬೂ ಉಮಯ್ಯ ಬಿನ್ ಮುಗೀರ. ತಾಯಿ ಆತಿಕ ಬಿಂತು ಆಮಿರ್. ತಂದೆ ತಾಯಿಗಳು ಅವರನ್ನು ಹಿಂದ್ ಎಂದೇ ಕರೆಯುತ್ತಿದ್ದರು. ಅಬೂ ಉಮಯ್ಯಾ ಪ್ರಮುಖ ನಾಯಕ ಮತ್ತು ದಾನಶೂರರಾಗಿದ್ದರು.

ಹ. ಉಮ್ಮು ಸಲ್ಮರಿಗೆ(ರ) 13ನೇ ವಯಸ್ಸಿನಲ್ಲಿ ವಿವಾಹವಾಯಿತು. ಚಿಕ್ಕಪ್ಪನ ಮಗ ಅಬ್ದುಲ್ಲಾ ಬಿನ್ ಅಬ್ದುಲ್ ಅಸ್ಸೀರುಲ್‌ರೇ ವರ. ಆ ದಾಂಪತ್ಯವು ಹೂ ಮತ್ತು ಪರಿಮಳದಂತೆ ಬೆಸೆದಿತ್ತು. ಇಸ್ಲಾಮ್ ಬಂತು. ಆ ಯುವ ದಂಪತಿಗಳು ಒಟ್ಟಿಗೆ ಇಸ್ಲಾಮ್ ಧರ್ಮಕ್ಕೆ ಪ್ರವೇಶಿಸಿದರು.

## ತ್ಯಾಗದ ಆರಂಭ

ಇಸ್ಲಾಮಿನ ಪ್ರಾರಂಭಿಕ ಹಂತ. ವೈರಿಗಳು ಇಸ್ಲಾಮ್ ಸ್ವೀಕರಿಸಿದವರನ್ನು ಕಠೋರ ವಾಗಿ ಹಿಂಸಿಸುತ್ತಿದ್ದರು. ಈ ಯುವ ದಂಪತಿಗಳು ಕ್ರೂರ ಮರ್ದನಗಳನ್ನು ಅನುಭವಿಸ ಬೇಕಾಯಿತು. ಇಸ್ಲಾಮ್‌ಗಾಗಿ ಎಲ್ಲವನ್ನೂ ಸಹಿಸಲು ಅವರು ಸಿದ್ಧರಾದರು. ವೈರಿಗಳ ಮರ್ದನವು ಉತ್ತುಂಗಕ್ಕೇರಿದಾಗ, ಮುಸ್ಲಿಮರು ಪ್ರವಾದಿಯ(ಸ) ಆಜ್ಞೆಯಂತೆ ಅಬಿಸೀನಿಯಾಕ್ಕೆ ವಲಸೆ ಹೋದರು. ನಾಲ್ವರು ಸ್ತ್ರೀಯರು ಮತ್ತು ಹನ್ನೊಂದು ಪುರುಷರಿದ್ದ ಪುಟ್ಟ ತಂಡವು ಕುರೈಶರ ಕಣ್ಣಿಗೆ ಬೀಳದಂತೆ ಜಿದ್ದಾ ಬಂದರಿಗೆ ತಲುಪಿತು. ಸೌಭಾಗ್ಯವಶಾತ್, ಅಬಿಸೀನಿಯಾಕ್ಕೆ ತೆರಳುವ ಎರಡು ಹಡಗುಗಳು ಅಲ್ಲಿ ತಂಗಿದ್ದುವು. ಯಾತ್ರಾ ತಂಡವು ಹಡಗು ಏರಿತು. ಪ್ರತಿಯೊಬ್ಬರಿಗೂ ಐದು ದಿರ್ಹಮ್ ಪ್ರಯಾಣ ಶುಲ್ಕ. ಕುರೈಶರು ಹುಡುಕುತ್ತಾ ಅಲ್ಲಿಗೆ ತಲುಪಿದಾಗ ಹಡಗು ದಡಬಿಟ್ಟಿತ್ತು. ಅಬಿಸೀನಿಯಾಕ್ಕೆ ಹೊರಟ ಈ ಪ್ರಥಮ ತಂಡದಲ್ಲಿ ಈ ಪ್ರಿಯ ದಂಪತಿಗಳೂ ಇದ್ದರು.

ಅಬಿಸೀನಿಯಾದಲ್ಲಿ ಅವರ ದಾಂಪತ್ಯ ಜೀವನದ ಪ್ರಥಮ ಪುಷ್ಪವು ಅರಳಿತು. ಸಲ್ಮ, ಮಾತೆಯ ರೂಪ ಲಾವಣ್ಯ ಮತ್ತು ಪಿತನ ಗಾಂಭೀರ್ಯವನ್ನು ಮೈವೆತ್ತ ಗಂಡು ಶಿಶು. ಆ ಮಾತೆಯು ಹರ್ಷ ಪುಳಕಿತರಾದರು. ತಂದೆಯ ಕಣ್ಮನ ತಣಿಯಿತು. ಹೀಗೆ ಅಬ್ದುಲ್ಲಾರು ಅಬೂ ಸಲ್ಮ ಮತ್ತು ಹಿಂದ್ ಉಮ್ಮು ಸಲ್ಮ ಆದರು.

## ಪುನರಾಗಮನ

ಹಂಝಾ ಬಿನ್ ಅಬ್ದುಲ್ ಮುತ್ತಲಿಬ್ ಮತ್ತು ಉಮರ್ ಬಿನ್ ಖತ್ತಾಬ್‌ರು ಇಸ್ಲಾಮ್ ಸ್ವೀಕರಿಸಿದ ಬಳಿಕ ವೈರಿಗಳ ಹೆಡೆಯು ಸ್ವಲ್ಪ ತಗ್ಗಿತು. ಮುಸ್ಲಿಮರ ಆತ್ಮಸ್ಥೈರ್ಯ ಹೆಚ್ಚಿತು. ತನ್ಮಧ್ಯೆ ಕುರೈಶರು ಸಾಮೂಹಿಕವಾಗಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿರುವರೆಂಬ ವದಂತಿಯು ಅಬಿಸೀನಿಯದಲ್ಲಿ ಮುಸ್ಲಿಮರ ಮಧ್ಯೆ ಹಬ್ಬಿತು. ಈ ಸುದ್ದಿಯನ್ನು ನಂಬಿ ಕೆಲವರು ಮಕ್ಕಾಕ್ಕೆ ಮರಳಿದರು. ಆ ಪೈಕಿ ಉಮ್ಮು ಸಲ್ಮ, ಪತಿ ಅಬೂ ಸಲ್ಮ ಮತ್ತು ಪ್ರಿಯ ಪುತ್ರ ಸಲ್ಮ ಇದ್ದರು.

## ಸ್ನೇಹದ ಮಾದರಿ

ಉಮ್ಮು ಸಲ್ಮ ಮತ್ತು ಅವರ ಪತಿ ಪರಸ್ಪರರನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆ ದಾಂಪತ್ಯ ಜೀವನವು ಕೊನೆಯ ತನಕ ಯಾವೊಂದು ಒಡಕಿಲ್ಲದೆ ಉಳಿಯಿತು. ಉಮ್ಮು ಸಲ್ಮರು(ರ) ಪತಿ-ಪತ್ನಿ ಸಂಬಂಧದ ಉಜ್ವಲ ಮಾದರಿಯಾಗಿದ್ದಾರೆ. ಅಬೂ ಸಲ್ಮ ದಂಪತಿಯರ ಸಂಬಂಧವನ್ನು ಜನರು ಎತ್ತಿ ಹೇಳುತ್ತಿದ್ದರು. ಒಮ್ಮೆ ಉಮ್ಮು ಸಲ್ಮ(ರ) ತನ್ನ ಪತಿಯೊಡನೆ ಹೀಗೆಂದರು: "ಓರ್ವ ಸ್ತ್ರೀಯ ಪತಿಯು ನಿಧನಗೊಂಡ ಬಳಿಕ ಆಕೆಯು ಮರು ವಿವಾಹವಾಗದಿದ್ದರೆ, ಅಲ್ಲಾಹನು ಆ ಸ್ತ್ರೀಯನ್ನು ಆಕೆಯ ಪತಿಯೊಂದಿಗೆ ಸ್ವರ್ಗದಲ್ಲಿ ತಂಗಿಸುವನೆಂದು ನಾನು ತಿಳಿದಿದ್ದೇನೆ. ವಿಧುರನಾದ ಪುರುಷನ ಸ್ಥಿತಿಯೂ ಅಷ್ಟೆ. ಆದ್ದರಿಂದ ನಾವೀರ್ವರೂ ಒಂದು ಒಪ್ಪಂದ ಮಾಡಿಕೊಳ್ಳೋಣ. ನನ್ನ ಬಳಿಕ ನೀವು ಅಥವಾ ನಿಮ್ಮ ಬಳಿಕ ನಾನು ಮರು ವಿವಾಹವಾಗಬಾರದು." ಆಗ ಅಬೂಸಲ್ಮ ಹೇಳಿದರು: "ನಾನೊಂದು ಮಾತು ಹೇಳಲೇ? ನೀನು ನನ್ನನ್ನು ಅನುಸರಿಸುವೆಯಾ?" "ಖಂಡಿತ ನಿಮ್ಮನ್ನು ಅನುಸರಿಸುವುದಕ್ಕಿಂತ ಹರ್ಷದಾಯಕವಾದುದು ನನಗೆ ಇನ್ನೇನಿದೆ?" ಉಮ್ಮು ಸಲ್ಮ ಹೇಳಿದರು. ಅದಕ್ಕೆ ಅಬೂ ಸಲ್ಮರು(ರ): "ನಾನು ನಿಧನನಾದರೆ ನೀನು ಮರು ವಿವಾಹವಾಗಬೇಕು" ಎಂದೆನ್ನುತ್ತಾ ಹೀಗೆ ಪ್ರಾರ್ಥಿಸಿದರು: "ಅಲ್ಲಾಹನೇ! ನನ್ನ ಮರಣದ ಬಳಿಕ ಉಮ್ಮು ಸಲ್ಮರಿಗೆ ನನಗಿಂತ ಯೋಗ್ಯನಾದ ಪತಿಯನ್ನು ನೀಡು!"

## ಸತ್ವ ಪರೀಕ್ಷೆ

ಮಕ್ಕಾದಲ್ಲಿ ಬದುಕು ದುಸ್ತರವೆನಿಸಿದಾಗ ಮುಸ್ಲಿಮರು ಒಬ್ಬೊಬ್ಬರೇ ಮದೀನಾದಲ್ಲಿ ಅಭಯ ಪಡೆಯತೊಡಗಿದರು. ಉಮ್ಮು ಸಲ್ಮ(ರ) ಮತ್ತು ಪತಿ ಅಬೂ ಸಲ್ಮರೂ(ರ) ಮದೀನಾಕ್ಕೆ ಹೊರಟರು. ಅವರ ಬಳಿ ಕೇವಲ ಒಂದು ಒಂಟೆಯಿದ್ದಿತು. ಉಮ್ಮು ಸಲ್ಮ(ರ) ಅದರ ಮೇಲೆ ಕುಳಿತರು. ಪುತ್ರನನ್ನು ಮಡಿಲಲ್ಲಿ ಕುಳ್ಳಿರಿಸಿಕೊಂಡರು. ಅಬೂ ಸಲ್ಮ(ರ) ಒಂಟೆಯ ಕಡಿವಾಣ ಹಿಡಿದು ಮುಂದೆ ನಡೆದರು. ಆ ಕಥಾನಕವನ್ನು ಉಮ್ಮು ಸಲ್ಮ(ರ) ಹೀಗೆ ವಿವರಿಸುತ್ತಾರೆ:

"ನಾವು ಹೊರಟ ಸುದ್ದಿಯನ್ನು ಕೇಳಿ ನನ್ನ ಮನೆಯವರು ನನ್ನನ್ನು ತಡೆ ಹಿಡಿದರು. ಅವರು ಅಬೂ ಸಲ್ಮರೊಡನೆ(ರ) "ನೀನು ಎಲ್ಲಿ ಬೇಕಾದರೂ ಹೋಗು. ಆದರೆ ನಾವು ನಮ್ಮ ಹೆಣ್ಣು ಮಗುವನ್ನು ಬಿಡಲಾರೆವು" ಎಂದರು. ಅಸಹಾಯಕರಾದ ಅಬೂ ಸಲ್ಮರು ನನ್ನನ್ನೊಮ್ಮೆ ಮತ್ತು ಅವರನ್ನೊಮ್ಮೆ ನೋಡುತ್ತಾ ನಿಂತು ಬಿಟ್ಟರು. ಆದರೆ ನನ್ನ ಕುಟುಂಬದವರು ರವಷ್ಟು ದಯೆ ತೋರಲಿಲ್ಲ. ಅವರು ಪತಿಯ ಕೈಯಿಂದ ಒಂಟೆಯ ಕಡಿವಾಣವನ್ನು ಕಿತ್ತುಕೊಂಡರು; ನನ್ನನ್ನು ಹಿಡಿದು ಮನೆಗೊಯ್ದರು. ಅಷ್ಟರಲ್ಲಿ ಅಬೂ ಸಲ್ಮರ(ರ) ಸಂಬಂಧಿಕರೂ ಬಂದರು. ಅವರು ಮಧ್ಯಸ್ಥಿಕೆ ನಡೆಸಿ ನನ್ನನ್ನು ಪತಿಯೊಟ್ಟಿಗೆ ಹೋಗಲು ಅನುಮತಿ ದೊರಕಿಸಿ ಕೊಡುವರೆಂದು ನಾನು ಭಾವಿಸಿದ್ದೆ. ಆದರೆ ಅವರ ಉದ್ದೇಶ ಬೇರೆಯೇ ಆಗಿದ್ದಿತು. ಅವರು ಬಂದ ತಕ್ಷಣ ಪುತ್ರನನ್ನು ವಶಪಡಿಸಿಕೊಂಡರು. "ನೀವು ನಿಮ್ಮ ಹೆಣ್ಣನ್ನು ಪತಿಯೊಂದಿಗೆ ಹೋಗಗೊಡದಿದ್ದರೆ ನಮ್ಮ ಮಗುವನ್ನು ನಿಮಗೆ ಬಿಡಲೂ ನಾವು ಸಿದ್ಧರಿಲ್ಲ" ಎಂದು ಹೇಳುತ್ತ ಅವರು ಮಗುವನ್ನು ಕರೆದೊಯ್ದರು. ಹಿಜ್ರತ್‌ನ ಆಜ್ಞೆಯಾಗಿದ್ದುದರಿಂದ ಅಬೂ ಸಲ್ಮರು(ರ) ನನಗಾಗಿ ಕಾದು ಕುಳಿತು ಕೊಳ್ಳಲಿಲ್ಲ. ಅವರು ಮದೀನಾಕ್ಕೆ ಹೊರಟರು.

ನನ್ನ ಮನೋವೇದನೆಯನ್ನು ವಿವರಿಸಲು ಅಸಾಧ್ಯ. ಪ್ರಿಯ ಪುತ್ರ ಮತ್ತು ಪತಿಯಿಂದ ನನ್ನನ್ನು ಅಗಲಿಸಲಾಗಿದೆ. ನನಗೆ ದುಃಖ ಸಹಿಸಲಾಗಲಿಲ್ಲ. ನಾನು ನಿತ್ಯ ಬೆಳಿಗ್ಗೆ ಮನೆಯಿಂದ ಹೊರಟು ಸಮೀಪದ ಬೆಟ್ಟದ ಮೇಲೇರಿ ಅಳುತ್ತಿದ್ದೆ. ಹೀಗೆಯೇ ಹಲವು ದಿನರಾತ್ರೆಗಳು ಉರುಳಿದುವು. ಅದೊಂದು ದಿನ ನನ್ನ ಶೋಚನೀಯಾವಸ್ಥೆಯನ್ನು ಕಂಡ ನನ್ನ ಓರ್ವ ಬಂಧುವಿಗೆ ನನ್ನ ಮೇಲೆ ಕರುಣೆ ಬಂತು. ಅವರು ಸಂಬಂಧಿಕರೆಲ್ಲರನ್ನೂ ಕರೆಸಿ ನನ್ನ ಕುರಿತು ಮನಕರಗುವಂತೆ ಮಾತನಾಡಿದರು. ಅದು ತುಂಬಾ ಫಲ ನೀಡಿತು. ಅವರು ನನಗೆ ಮದೀನಾಕ್ಕೆ ಪತಿಯ ಬಳಿ ಹೋಗಲು ಒಪ್ಪಿಗೆ ನೀಡಿದರು. ಇದನ್ನು ತಿಳಿದಾಗ ನಮ್ಮ ಬೀಗರು ಮಗುವನ್ನು ನನಗೆ ಮರಳಿಸಿದರು. ನಾನು ಮಗುವಿನೊಂದಿಗೆ ಒಂಟೆಯಲ್ಲಿ ಮದೀನಾಕ್ಕೆ ಹೊರಟೆ.

ನಾನು ಏಕಾಂಗಿಯಾಗಿದ್ದೆ. ಹಾದಿಯ ಕುರಿತು ಯಾವ ಗೊತ್ತುಗುರಿಯೂ ಇರಲಿಲ್ಲ. ಅಲ್ಲಾಹನ ಮೇಲೆ ಭರವಸೆಯಿಟ್ಟು ನಾನು ಪಯಣಿಸಿದೆ. ಹಲವು ಅಡಚಣೆಗಳನ್ನು ಎದುರಿಸಬೇಕಾಯಿತು. ಹೇಗೂ ತ್ಯಗಮಿ ತಲಪಿದೆ. ಸೌಭಾಗ್ಯವಶಾತ್ ಅಲ್ಲಿ ಉಸ್ಮಾನ್ ಬಿನ್ ತಲ್ಹತ್‌ರ ಭೇಟಿಯಾಯಿತು. ನಿಮ್ಮೊಂದಿಗೆ ಬೇರೆ ಯಾರಿದ್ದಾರೆಂದು ಅವರು ಪ್ರಶ್ನಿಸಿದರು. ಯಾರೂ ಇಲ್ಲ. ನಾನು ಒಂಟಿಯೆಂದು ಅವರಿಗೆ ತಿಳಿಸಿದೆ. ಸರಿ, ಹಾಗಿದ್ದರೆ ನಾನು ನಿಮ್ಮನ್ನು ಮದೀನಾಕ್ಕೆ ತಲಪಿಸುತ್ತೇನೆಂದು ಅವರು ಹೇಳಿದರು. ನನ್ನ ಒಂಟೆಯ ಕಡಿವಾಣವನ್ನು ಹಿಡಿದು ಅವರು ಮುಂದೆ ಸಾಗಿದರು. ಅವರಂಥ ಸಭ್ಯರನ್ನು ನಾನು

ಕಂಡಿಲ್ಲ. ಅವರು ವಿಶ್ರಾಂತಿ ವೇಳೆ ಎಲ್ಲಾದರೂ ದೂರದ ಮರದ ಮರೆಯಲ್ಲಿ ಹೋಗಿ ಕುಳಿತುಕೊಳ್ಳುತ್ತಿದ್ದರು. ಹೊರಡುವ ವೇಳೆ ಒಂಟೆಯನ್ನು ನನ್ನ ಬಳಿ ತಂದು ನಿಲ್ಲಿಸುತ್ತಿದ್ದರು. ನಾನು ಮತ್ತು ಮಗನು ಒಂಟೆಯ ಮೇಲೆ ಸರಿಯಾಗಿ ಕುಳಿತ ಬಳಿಕ ಅವರು ಕಡಿವಾಣ ಹಿಡಿದು ನಡೆಯುತ್ತಿದ್ದರು. ನಾವು ಮದೀನಾದ ಕುಬಾ ಎಂಬ ಸ್ಥಳಕ್ಕೆ ತಲಪಿದಾಗ ಅವರು, ನಿಮ್ಮ ಪತಿಯು ಇಲ್ಲಿಗೆ ಸಮೀಪದ ಸ್ಥಳದಲ್ಲಿಯೇ ವಾಸವಾಗಿದ್ದಾರೆ. ಅವರನ್ನು ಕಂಡು ಹಿಡಿಯಲು ನಿಮಗೆ ಇನ್ನು ಕಷ್ಟವಾಗದು ಎಂದು ಹೇಳಿದರು. ಉಸ್ಮಾನ್ ಬಿನ್ ತಲ್ಹಾತ್ ಮಕ್ಕಾಕ್ಕೆ ಮರಳಿದರು. ನಾನು ಪತಿಯನ್ನು ಹುಡುಕತೊಡಗಿದೆ. ಸ್ವಲ್ಪ ಹೊತ್ತಿನಲ್ಲಿ ನಾನು ಅವರನ್ನು ಸಂಧಿಸಿದೆ.

ಹ. ಉಮ್ಮು ಸಲ್ಮ(ರ) ಮದೀನಾಕ್ಕೆ ವಲಸೆ ಹೋದ ಪ್ರಥಮ ಮುಸ್ಲಿಮ್ ಮಹಿಳೆ. ಅವರು ಇನ್ನೂರು ಮೈಲಿಗಳಿಗೂ ಮಿಕ್ಕಿ ಒಂಟಿಯಾಗಿ ಸಂಚರಿಸಿ ಮದೀನಾ ತಲಪಿದ್ದಾರೆ. ಅದಕ್ಕೆ ಅಲ್ಲಾಹನ ಬಗೆಗಿನ ಅಚಲ ವಿಶ್ವಾಸವೇ ಅವರಿಗೆ ಧೈರ್ಯ ನೀಡಿತ್ತು. ಉಮ್ಮು ಸಲ್ಮ(ರ) ಇಸ್ಲಾಮಿಗಾಗಿ ಅಪ್ರತಿಮ ತ್ಯಾಗವನ್ನು ಮಾಡಿದ್ದಾರೆ. "ಇಸ್ಲಾಮಿಗಾಗಿ ನನ್ನಷ್ಟು ದೈಹಿಕ ಹಾಗೂ ಮಾನಸಿಕ ಸಂಕಷ್ಟವನ್ನು ಯಾರೂ ಸಹಿಸಿಲ್ಲ" ಎಂದು ಅವರೇ ಒಮ್ಮೆ ಹೇಳಿದ್ದರು.

## ವಿಧವಾ ಜೀವನ

ಅಬೂಸಲ್ಮರು(ರ) ಸುಪ್ರಸಿದ್ಧ ಕುದುರೆ ಸವಾರ ಹಾಗೂ ಧೀರ ಪರಾಕ್ರಮಿಯಾಗಿದ್ದರು. ಬದ್ರ್ ಮತ್ತು ಉಹುದ್‌ಗಳಲ್ಲಿ ಅವರು ತಮ್ಮ ಯುದ್ಧ ಪ್ರೌಢಿಮೆಯನ್ನು ತೋರಿಸಿದರು. ಉಹುದ್ ಯುದ್ಧದಲ್ಲಿ ಮಾರಕವಾಗಿ ಗಾಯಗೊಂಡ ಅಬೂ ಸಲ್ಮರು(ರ) ಕೆಲವಾರು ತಿಂಗಳ ಬಳಿಕ ನಿಧನರಾದರು. ಅದರೊಂದಿಗೆ ಆ ಮಧುರ ದಾಂಪತ್ಯ ಜೀವನದ ಅಂಕದ ಪರದೆ ಬಿತ್ತು. "ಅಲ್ಲಾಹನೇ! ನನ್ನ ಪ್ರೀತಿಯ ಮಕ್ಕಳನ್ನು ಉಳಿಸು, ರಕ್ಷಿಸು" ಎಂದು ಮರಣಾಸನ್ನ ವೇಳೆ ಅವರು ಪ್ರಾರ್ಥಿಸಿದರು.

ಪ್ರವಾದಿ(ಸ) ಉಮ್ಮು ಸಲ್ಮರ(ರ) ಮನೆಗೆ ತೆರಳಿ ಅವರನ್ನು ಸಾಂತ್ವನಗೊಳಿಸಿದರು. ಅಬೂ ಸಲ್ಮರ(ರ) ಜನಾಝಾ ನಮಾಝ್‌ನಲ್ಲಿ ಪ್ರವಾದಿವರ್ಯರು(ಸ) ಸಂಪ್ರದಾಯವನ್ನು ಮೀರಿ ಒಂಭತ್ತು ತಕ್ಬೀರ್ ಹೇಳಿದರು. ಇದು ಅಬೂ ಸಲ್ಮರ(ರ) ಘನತೆಯನ್ನು ಪ್ರತಿಬಿಂಬಿಸುತ್ತದೆ. ಪತಿಯ ಅಗಲಿಕೆಯು ಉಮ್ಮು ಸಲ್ಮರನ್ನು(ರ) ಶೋಕ ಸಾಗರದಲ್ಲಿ ಮುಳುಗಿಸಿತು. ತನ್ನ ಹಾಗೂ ಮಕ್ಕಳ ಭವಿಷ್ಯವು ಕರಾಳವಾಗಿದೆಯೆಂದು ಅವರಿಗೆ ತೋರಿತು. ಪತಿಯ ನಿಧನ ವೇಳೆ ಉಮ್ಮು ಸಲ್ಮ(ರ) ಗರ್ಭಿಣಿಯಾಗಿದ್ದರು.

## ಮರು ವಿವಾಹ

ಹಲವು ಮಂದಿ ಸಹಾಬರು ಉಮ್ಮು ಸಲ್ಮರನ್ನು(ರ) ಸಹಧರ್ಮಿಣಿಯಾಗಿ ಸ್ವೀಕರಿಸಲು ಮುಂದೆ ಬಂದರು. ಪತಿಯಂದಿರು ಯುದ್ಧದಲ್ಲಿ ಹುತಾತ್ಮರಾಗಿದ್ದ ನಿಮಿತ್ತ ವಿಧವೆಯರಾದ ಸ್ತ್ರೀಯರನ್ನು ವಿವಾಹವಾಗಿ ಸಂರಕ್ಷಣೆ ನೀಡುವುದೇ ಮುಸ್ಲಿಮರ ನೀತಿಯಾಗಿತ್ತು. ಆದರೆ ಉಮ್ಮು ಸಲ್ಮ(ರ) ಮರುವಿವಾಹ ಮೆಚ್ಚಲಿಲ್ಲ. ಅವರು ಗತಕಾಲೀನ ಸ್ಮರಣೆಗಳನ್ನು ಮೆಲುಕು ಹಾಕಿ ಬಾಳ ಬಯಸಿದರು. ಇಸ್ಲಾಮಿಗಾಗಿ ಅನುಪಮ ತ್ಯಾಗಗಳನ್ನು ನೀಡಿದ್ದ ಆ ಮಹಿಳೆಯು ಪತಿವಿರಹ ಮತ್ತು ಕುಟುಂಬ ಭಾರವನ್ನು ಹೊತ್ತು ಕಷ್ಟಪಡುವುದನ್ನು ದಯಾಳುವಾದ ಪ್ರವಾದಿಯವರಿಂದ(ಸ) ನೋಡಲಾಗಲಿಲ್ಲ. ತಾನು ವಿವಾಹವಾಗುವೆನೆಂದು ಪ್ರವಾದಿ(ಸ) ಉಮ್ಮು ಸಲ್ಮರಿಗೆ(ರ) ತಿಳಿಸಿದರು. "ನಾನು ಸ್ವಾಭಿಮಾನವುಳ್ಳ ಸ್ತ್ರೀ. ನನಗೆ ತುಂಬಾ ಮಕ್ಕಳಿದ್ದಾರೆ. ಅದಲ್ಲದೆ ವಯಸ್ಸೂ ಆಗಿದೆ" ಎಂದು ಉಮ್ಮು ಸಲ್ಮ ಉತ್ತರಿಸಿದರು. ಅದನ್ನು ಪ್ರವಾದಿ(ಸ) ಗಂಭೀರವಾಗಿ ಪರಿಗಣಿಸಲಿಲ್ಲ. ಹಿಜ್‌ರ 4ರ ಶವ್ವಾಲ್ ತಿಂಗಳಲ್ಲಿ ಪ್ರವಾದಿ(ಸ) ಉಮ್ಮು ಸಲ್ಮರನ್ನು(ರ) ವಿವಾಹವಾದರು.

ಹ. ಝೈನಬ್‌ರ(ರ) ಮನೆಯು ಅವರ ಮರಣದ ಬಳಿಕ ತೆರವಾಗಿದ್ದಿತು. ಪ್ರವಾದಿ(ಸ) ಉಮ್ಮುಸಲ್ಮರನ್ನು(ರ) ಆ ಮನೆಯಲ್ಲಿ ವಾಸ ಹೂಡಿಸಿದರು. ಮನೆಯ ವಸ್ತುಗಳು ಅಲ್ಲಿ ಸಿದ್ಧವಿದ್ದುವು. ಉಮ್ಮು ಸಲ್ಮ(ರ) ಮನೆಗೆ ಪ್ರವೇಶಿಸಿದೊಡನೆ ಅಡುಗೆ ಕೆಲಸ ಆರಂಭಿಸಿದರು.

## ನವ ದಾಂಪತ್ಯ

ಪ್ರಥಮ ಪತಿ ಅಬೂ ಸಲ್ಮರ(ರ) ನಿಧನದಿಂದ ಉಮ್ಮು ಸಲ್ಮ(ರ) ಬಹಳ ದುಃಖಿಕ್ಕೀಡಾಗಿದ್ದರಷ್ಟೆ. ಅಬೂ ಸಲ್ಮರಷ್ಟು(ರ) ಪ್ರೀತಿಯ ಪತಿ ತನಗೆ ದೊರಕದೆಂದು ಅವರು ನಂಬಿದ್ದರು. ಆದರೆ ಕಾಲವು ಉಮ್ಮು ಸಲ್ಮರ(ರ) ಕಣ್ಣೀರನ್ನು ಒರೆಸಿಯೇ ಬಿಟ್ಟಿತು. ಅವರು ಪ್ರವಾದಿಯೊಂದಿಗೆ(ಸ) ಬೆರೆತುಬಿಟ್ಟರು. ಹೊಸ ಸ್ನೇಹ ಮತ್ತು ಹೊಸ ಬಾಳು ಚಿಗುರಿತು. ಪ್ರವಾದಿವರ್ಯರನ್ನು(ಸ) ಸ್ವಪ್ರಾಣದಂತೆ ಪ್ರೀತಿಸಲು ಹಾಗೂ ಅವರ ಸುಖ ಸಂತೋಷಗಳಲ್ಲಿ ಭಾಗಿಯಾಗಲೂ ಅವರಿಗೆ ಸಾಧ್ಯವಾಯಿತು.

ಉಮ್ಮು ಸಲ್ಮರಿಗೆ(ರ) ಅಬೂ ಸಲ್ಮರಿಂದ(ರ) ನಾಲ್ಕು ಮಕ್ಕಳಾಗಿದ್ದರು. ಸಲ್ಮ, ಉಮರ್, ದುರ್ರ, ಝೈನಬ್ ಹೀಗೆ ಎರಡು ಗಂಡು, ಎರಡು ಹೆಣ್ಣು ಮಕ್ಕಳಿದ್ದರು. ಮಕ್ಕಳೊಂದಿಗೆ ಉಮ್ಮು ಸಲ್ಮರಿಗೆ(ರ) ಬಹಳ ವಾತ್ಸಲ್ಯವಿದ್ದಿತು. ಪ್ರವಾದಿವರ್ಯರಿಂದ ಉಮ್ಮು ಸಲ್ಮರಿಗೆ(ರ) ಮಕ್ಕಳಾಗಲಿಲ್ಲ.

## ಸ್ಥಿತಪ್ರಜ್ಞೆ

ಸಂದರ್ಭಕ್ಕೆ ತಕ್ಕಂತೆ ಆಲೋಚಿಸಿ ಕಾರ್ಯಪ್ರವೃತ್ತರಾಗುವುದರಲ್ಲಿ ಹ. ಉಮ್ಮು ಸಲ್ಮರು(ರ) ಎತ್ತಿದ ಕೈ. ಸುಪ್ರಸಿದ್ಧವಾದ ಹುದೈಬಿಯಾ ಘಟನೆಯಲ್ಲಿ ಅವರ ಆ ಪ್ರತಿಭೆ ಬೆಳಗಿದೆ. 'ಉಮ್ರಃ' ನಿರ್ವಹಿಸಲಿಕ್ಕಾಗಿ ಮಕ್ಕಾಕ್ಕೆ ಹೊರಟ ಪ್ರವಾದಿವರ್ಯರು(ಸ) ಮತ್ತು ಸಂಗಡಿಗರನ್ನು ಕುರೈಶರು ಹುದೈಬಿಯಾದಲ್ಲಿ ತಡೆದು ನಿಲ್ಲಿಸಿದರು. ಕೊನೆಗೆ ಪ್ರವಾದಿ(ಸ) ಮತ್ತು ಕುರೈಶರೊಳಗೆ ಒಪ್ಪಂದವಾಯಿತು. ಒಪ್ಪಂದದ ಕೆಲವು ಶರತ್ತುಗಳು ತೋರಿಕೆಗೆ ಮುಸ್ಲಿಮರಿಗೆ ವಿರುದ್ಧವಾಗಿದ್ದುವು. ಇದರಿಂದ ಮುಸ್ಲಿಮರಲ್ಲಿ ಅಸಮಾಧಾನ ಹಬ್ಬಿತು. ಒಪ್ಪಂದದಂತೆ ಮದೀನಾಕ್ಕೆ ಮರಳಲು ಎಲ್ಲರೂ ತಕ್ಷಣವೇ ಮೃಗಗಳನ್ನು ಬಲಿನೀಡಿ ಇಹ್ರಾಮ್ ಕಳಚಬೇಕೆಂದು ಪ್ರವಾದಿ(ಸ) ಆಜ್ಞಾಪಿಸಿದರು. ಆದರೆ ಅದನ್ನು ಯಾರೂ ಪಾಲಿಸಲು ಮುಂದಾಗಲಿಲ್ಲ. ಪ್ರವಾದಿವರ್ಯರು(ಸ) ಮೂರನೇ ಬಾರಿ ಆದೇಶಿಸಿದರೂ ಪರಿಣಾಮ ಬೀರಲಿಲ್ಲ. ಏನು ಮಾಡಬೇಕೆಂದು ತಿಳಿಯದೆ ಪ್ರವಾದಿ(ಸ) ಪೇಚಿಗೀಡಾದರು. ಉಮ್ಮು ಸಲ್ಮರ(ರ) ಬಿಡಾರಕ್ಕೆ ತೆರಳಿದಾಗ ಅವರು ಹೇಳಿದರು: "ನೀವು ಯಾರೊಡನೆಯೂ ಏನೂ ಹೇಳಬೇಡಿ. ಪ್ರಥಮವಾಗಿ ನೀವು ನಿಮ್ಮ ಕೇಶಮುಂಡನ ಮಾಡಿಸಿ ಒಂಟೆಯನ್ನು ಬಲಿನೀಡಿ ಇಹ್ರಾಮ್‌ನಿಂದ ಮುಕ್ತರಾಗಿರಿ. ಇತರರೂ ನಿಮ್ಮನ್ನು ಅನುಕರಿಸುವರು." ಉಮ್ಮು ಸಲ್ಮರ(ರ) ಸಲಹೆ ಫಲಿಸಿತು. ಪ್ರವಾದಿ(ಸ) ಕ್ಷೌರ ಮಾಡಿಸಿ ಒಂಟೆಯನ್ನು ಬಲಿ ನೀಡುವುದನ್ನು ಕಂಡ ಸಹಾಬಿಗಳು ಮೊದಲಿನಂತೆ ಸುಮ್ಮನಿರಲಿಲ್ಲ. ಅವರೂ ಕ್ಷೌರ ಮತ್ತು ಬಲಿಕರ್ಮ ನಿರ್ವಹಿಸಿ ಇಹ್ರಾಮ್‌ನಿಂದ ವಿಮುಕ್ತರಾದರು.

## ಮಾದರೀ ಜೀವನ

ಹ. ಉಮ್ಮು ಸಲ್ಮರ(ರ) ಜೀವನವು ಸರಳ ಹಾಗೂ ನಿರಾಡಂಬರವಾಗಿದ್ದಿತು. ಜೀವನ ನಿರ್ವಹಣೆಗೆ ಅಲ್ಪ ಆಹಾರ ವಸ್ತುಗಳೇ ಅವರಿಗೆ ಧಾರಾಳವಾಗಿತ್ತು. ಅವರ ಪ್ರತಿ ಯೊಂದು ಚಲನೆಯಲ್ಲಿಯೂ ಭಯಭಕ್ತಿ ಮತ್ತು ಸರಳತೆ ಪ್ರತಿಬಿಂಬಿತವಾಗಿತ್ತು. ಒಮ್ಮೆ ಉಮ್ಮು ಸಲ್ಮರು(ರ) ಒಂದು ಚಿನ್ನದ ಸರವನ್ನು ಧರಿಸಿದರು. ಪ್ರವಾದಿವರ್ಯರಿಗೆ(ಸ) ಅದು ಇಷ್ಟವಿಲ್ಲವೆಂದು ತಿಳಿದಾಗ ಅದನ್ನು ತೆಗೆದು ಬಿಟ್ಟರು. ತರುವಾಯ ಅದನ್ನು ಎಂದೂ ಧರಿಸಲಿಲ್ಲ.

ಸುನ್ನತ್ ನಮಾಝ್ ಮತ್ತು ಸುನ್ನತ್ ಉಪವಾಸಗಳನ್ನು ನಿಷ್ಠೆಯಿಂದ ಪಾಲಿಸುತ್ತಿದ್ದರು. ದಾನಧರ್ಮಗಳಲ್ಲಿ ಅತ್ಯಾಸಕ್ತಿ ಹೊಂದಿದ್ದರು. ಕೇಳಿದವರನ್ನು ಬರಿಗೈಯಲ್ಲಿ ಕಳುಹಿಸುತ್ತಿರಲಿಲ್ಲ. ಒಮ್ಮೆ ಕೆಲವು ಬಡವರು ಉಮ್ಮು ಸಲ್ಮರ(ರ) ಬಳಿಗೆ ಬಂದು ಏನಾದರೂ ನೀಡಬೇಕೆಂದು ಯಾಚಿಸಿದರು. ಆಗ ಮನೆಯಲ್ಲಿದ್ದ ಓರ್ವ ಸ್ತ್ರೀಯು ಅವರನ್ನು ಅಟ್ಟಿ ಬಿಟ್ಟಾಗ ಉಮ್ಮು ಸಲ್ಮ(ರ) ಆಕೆಯನ್ನು ವಿರೋಧಿಸಿದರು. ಅವರಿಗೆ ಏನಾದರೂ ನೀಡುವಂತೆ ಸೇವಕಿಗೆ ತಿಳಿಸಿದರು.

ಉಮ್ಮು ಸಲ್ಮರು(ರ) ನಿರ್ಭೀಡೆಯಿಂದ ಮಾತನಾಡುವ ಗುಣ ಹೊಂದಿದ್ದರು. ಪ್ರವಾದಿ(ಸ) ಮತ್ತು ಪತ್ನಿಯರೊಳಗೆ ಕಾರಣವಶಾತ್ ಪರಸ್ಪರ ಕೌಟುಂಬಿಕ ವಿರಸ ವುಂಟಾದಾಗ ಹರ್ರುತ್ ಉಮರ್‌ರು(ರ) ಹಫ್ಸರಿಗೆ(ರ) ಎಚ್ಚರಿಕೆ ನೀಡಿದ ಬಳಿಕ ಉಮ್ಮು ಸಲ್ಮರ(ರ) ಬಳಿಗೆ ಹೋಗಿ ಅವರನ್ನೂ ಗದರಿಸಿದರು. ಆಗ ಉಮ್ಮು ಸಲ್ಮ(ರ) ಹೇಳಿದರು: "ಹೇ ಉಮರ್, ನಿಮ್ಮ ಬಗ್ಗೆ ನನಗೆ ತುಂಬಾ ಅಚ್ಚರಿಯಾಗುತ್ತಿದೆ. ಎಲ್ಲ ವಿಷಯ ಗಳಲ್ಲಿಯೂ ನೀವು ತಲೆ ಹಾಕುತ್ತೀರಿ. ಈಗ ಪ್ರವಾದಿ(ಸ) ಮತ್ತು ಅವರ ಪತ್ನಿಯರ ವ್ಯವಹಾರಗಳಲ್ಲಿ ಹಸ್ತಕ್ಷೇಪ ನಡೆಸುತ್ತಿದ್ದೀರಿ." ಈ ಅನಿರೀಕ್ಷಿತ ಉತ್ತರದಿಂದ ಉಮರ್(ರ) ನಿರುತ್ತರರಾದರು.

## ವಿದ್ಯೆಬುದ್ಧಿ

ಆಯಿಶಾರನ್ನು(ರ) ಹೊರತುಪಡಿಸಿದರೆ ಉಮ್ಮು ಸಲ್ಮರು(ರ) ವಿದ್ಯೆ-ಬುದ್ಧಿಗಳಲ್ಲಿ ಹೆಚ್ಚು ಬೆಳಗಿದರು. 378 ಪ್ರವಾದಿ ವಚನಗಳು ಉಮ್ಮು ಸಲ್ಮರಿಂದ(ರ) ವರದಿಯಾಗಿವೆ. ಹದೀಸ್‌ಗಳನ್ನು ವರದಿ ಮಾಡಿರುವ ಸ್ತ್ರೀಯರಲ್ಲಿ ಹ. ಆಯಿಶಾರು(ರ) ಪ್ರಥಮ ಹಾಗೂ ಉಮ್ಮು ಸಲ್ಮರು(ರ) ದ್ವಿತೀಯ ಸ್ಥಾನ ಪಡೆದಿದ್ದಾರೆ. ಸಹಾಬಿಗಳು ಆಯಿಶಾರಂತೆಯೇ(ರ) ಉಮ್ಮು ಸಲ್ಮರೊಡನೆಯೂ(ರ) ಸಮಸ್ಯೆಗಳ ಕುರಿತು ವಿಚಾರಿಸುತ್ತಿದ್ದರು. ಆಡಳಿತಗಾರ ಮರ್ವಾನ್ ಬಿನ್ ಹಕಮ್‌ರೂ ಹ. ಉಮ್ಮು ಸಲ್ಮರಿಂದ(ರ) ಹಲವು ವಿಷಯಗಳ ಬಗ್ಗೆ ಸಲಹೆ ಸೂಚನೆಗಳನ್ನು ಪಡೆಯುತ್ತಿದ್ದರು.

ಆಯಿಶಾ(ರ) ಮತ್ತು ಹಫ್ಸರಂತೆಯೇ(ರ) ಉಮ್ಮು ಸಲ್ಮರೂ(ರ) ಕುರ್‌ಆನ್ ಕಂಠಪಾಠ ಮಾಡಿದ್ದರು. ಪ್ರವಾದಿಯ(ಸ) ಶೈಲಿಯಲ್ಲಿ ಶ್ರವಣ ಮಧುರವಾದ ಕುರ್‌ಆನ್ ಓದುವ ಪ್ರತಿಭೆಯು ಅವರಂತೆ ಇನ್ನಾರಲ್ಲಿಯೂ ಇರಲಿಲ್ಲ. ಕವಿತೆಯನ್ನು ರಚಿಸಿ, ಹಾಡಲು ಅವರಿಗೆ ತಿಳಿದಿತ್ತು. ಜ್ಞಾನ ಸಂಪಾದನೆಯ ಬಗ್ಗೆ ಉಮ್ಮು ಸಲ್ಮರಿಗೆ(ರ) ವಿಶೇಷ ಆಸಕ್ತಿಯಿದ್ದಿತು. ಪ್ರವಾದಿವರ್ಯರು(ಸ) ವೇದಿಕೆ ಮೇಲೇರಿ ಭಾಷಣ ಆರಂಭಿಸುವಾಗ ಉಮ್ಮು ಸಲ್ಮರು(ರ) ಕೆಲಸವೆಲ್ಲವನ್ನೂ ಬದಿಗಿಟ್ಟು ಅದನ್ನು ಗಮನವಿಟ್ಟು ಆಲಿಸುತ್ತಿದ್ದರು.

## ನಿಧನ

ಹಿಜರಿ 61ರಲ್ಲಿ ಉಮ್ಮು ಸಲ್ಮ(ರ) ಇಹಲೋಕ ಯಾತ್ರೆ ಮುಗಿಸಿದರು. ಜಮಲ್, ಸಿಪ್ಪೀನ್, ಕರ್ಬಲ ಮುಂತಾದ ರೋಮಾಂಚಕ ಘಟನೆಗಳಿಗೆ ಸಾಕ್ಷಿಯಾದರು. ಅಬೂ ಹುರೈರ(ರ) ಜನಾಝಾ ನಮಾಝ್ ನಿರ್ವಹಿಸಿದರು. ಸುದೀರ್ಘವಾದ 84 ವರ್ಷಗಳ ಅತ್ಯುಜ್ವಲ ಜೀವನವು ಬಖೀಲ್‌ನ ಸ್ಮಶಾನದಲ್ಲಿ ಅಂತ್ಯ ವಿಶ್ರಾಂತಿ ಪಡೆಯಿತು.

□□□

# ಹಝ್ರತ್ ಝೈನಬ್(ರ)

ಹಝ್ರತ್ ಝೈನಬ್‌ರು(ರ) ಅಭಿಜಾತ ಸುಂದರಿ ಮತ್ತು ಸುಶೀಲೆಯಾಗಿದ್ದರು. ಉಮ್ಮು ಹಕಮ್ ಎಂಬ ಮುದ್ದು ಹೆಸರು. ಬನೂ ಅಸದ್ ವಂಶದ ಜಹ್‌ಶ್ ರುಬಾಬರ ಮಗಳು. ಪ್ರವಾದಿವರ್ಯರ ಪಿತೃ ಸಹೋದರಿ ಹಾಗೂ ಅಬ್ದುಲ್ ಮುತ್ತಲಿಬ್‌ರ ಮಗಳು, ಉಮೈಮರು ಅವರ ತಾಯಿ. ಇಸ್ಲಾಮಿನ ಆರಂಭ ದೆಸೆಯಲ್ಲಿಯೇ ಅವರು ತೌಹೀದ್‌ನ ಕಹಳೆಯಿಂದ ಆಕರ್ಷಿತರಾದರು. ಸತ್ಯವಿಶ್ವಾಸವನ್ನು ಸ್ವೀಕರಿಸಿ ಸ್ವಕುಟುಂಬ ಮತ್ತು ಸ್ವಸಮಾಜದ ವಿದ್ವೇಷಕ್ಕೆ ಪಾತ್ರರಾದರು. ಕೊನೆಗೆ ಗತ್ಯಂತರವಿಲ್ಲದೆ ಮನೆಮಾರು, ಊರನ್ನು ತೊರೆದು ಮದೀನಾಕ್ಕೆ ವಲಸೆ ಹೋದರು.

## ಒಲ್ಲದ ಮದುವೆ

ಮದೀನಾಕ್ಕೆ ಹಿಜ್ರತ್ ಹೋಗುವಾಗ ಝೈನಬ್‌ರಿಗೆ(ರ) ಮೂವತ್ತು ವಯಸ್ಸು ದಾಟಿತ್ತು. ಆಗ ಅವರು ವಿವಾಹಿತರಾಗಿರಲಿಲ್ಲ. ಝೈದ್ ಬಿನ್ ಹಾರಿಸ್‌ರ ಪತ್ನಿ ಉಮ್ಮು ಐಮನ್ ನಿಧನರಾದಾಗ, ಝೈನಬ್‌ರನ್ನು(ರ) ಅವರಿಗೆ ವಿವಾಹ ಮಾಡಿಕೊಡೋಣವೆಂದು ಪ್ರವಾದಿ(ಸ) ಭಾವಿಸಿದರು. ಈ ವಿಷಯವನ್ನು ಪ್ರವಾದಿ(ಸ) ಝೈನಬ್‌ರೊಡನೆ(ರ) ಪ್ರಸ್ತಾಪಿಸಿದರು. "ಅವರನ್ನು ಪತಿಯಾಗಿ ಸ್ವೀಕರಿಸಲು ನನಗಿಷ್ಟವಿಲ್ಲ"ವೆಂದು ಝೈನಬ್(ರ) ಉತ್ತರಿಸಿದರು.

ಝೈದ್ ಓರ್ವ ಗುಲಾಮರಾಗಿದ್ದರು. ಈಗ ಸ್ವತಂತ್ರರಾಗಿದ್ದಾರೆ. ಅವರಿಗೆ ಕುಲೀನೆ ಹಾಗೂ ರೂಪವತಿಯಾದ ಓರ್ವ ತರುಣಿಯನ್ನು ವಿವಾಹ ಮಾಡಿಕೊಟ್ಟು ಇಸ್ಲಾಮಿನ ಸುಂದರ ಸಮಾನತಾವಾದವನ್ನು ಪ್ರದರ್ಶಿಸಬೇಕೆಂದು ಪ್ರವಾದಿ(ಸ) ಬಯಸಿದ್ದರು. ಝೈನಬ್(ರ) ಪ್ರವಾದಿಯವರ(ಸ) ಇಂಗಿತಕ್ಕೆ ತಲೆಬಾಗಿದರು. ವಿವಾಹಪೂರ್ವದ ಅಸಂತೃಪ್ತಿಯ ಹೊಗೆ ಮಾಯವಾಗಿ, ದಂಪತಿಗಳಲ್ಲಿ ಸ್ನೇಹಭಾವನೆ ಬೆಳೆಯಬಹುದೆಂದು ಪ್ರವಾದಿ(ಸ) ಆಶಿಸಿದರು. ಹೀಗೆ ಝೈದ್ ಮತ್ತು ಝೈನಬ್‌ರ ವಿವಾಹ ನೆರವೇರಿತು.

## ಕುಲೀನ, ಆದರೆ...

ಝೈದ್ ಬಿನ್ ಹಾರಿಸ್(ರ) ಒಂದು ಉನ್ನತ ಕುಲದ ಸದಸ್ಯರಾಗಿದ್ದರು. ಪ್ರಖ್ಯಾತ ಹಾತಿಮ್‌ಥಾಯ್ ಕುಟುಂಬದಲ್ಲಿ ಅವರು ಜನಿಸಿದ್ದರು. ಒಮ್ಮೆ ಝೈದ್ ಮತ್ತು ತಾಯಿಯು ಅದೆಲ್ಲಿಗೋ ಯಾತ್ರೆ ಹೊರಟಿದ್ದರು. ಮರುಭೂಮಿಯಲ್ಲಿ ದರೋಡೆಕೋರರು ಅವರನ್ನು ಆಕ್ರಮಿಸಿ ಝೈದ್‌ರನ್ನು ಅಪಹರಿಸಿ ಕೊಂಡೊಯ್ದರು. ಉಕಾಸ್ ಸಂತೆಯಲ್ಲಿ ಅವರನ್ನು ಮಾರಿದರು. ಹಕೀಮ್ ಬಿನ್ ಹಿಶಾಮ್‌ರು ಪಿತೃ ಸಹೋದರಿ ಖದೀಜರಿಗಾಗಿ(ರ) ಅವರನ್ನು ನಾನ್ನೂರು ದಿರ್ಹಮ್‌ಗಳಿಗೆ ಕೊಂಡು ಕೊಂಡರು. ಪ್ರವಾದಿ(ಸ) ಖದೀಜರನ್ನು ವಿವಾಹವಾದಾಗ, ಅವರು ಝೈದ್‌ರನ್ನು ಪತಿಗೆ ಉಡುಗೊರೆಯಾಗಿ ನೀಡಿದರು. ಪ್ರವಾದಿವರ್ಯರು(ಸ) ಅವರನ್ನು ಸ್ವತಂತ್ರಗೊಳಿಸಿದರು.

ದರೋಡೆಕೋರರು ಅಪಹರಿಸಿದಂದಿನಿಂದ ಝೈದ್‌ರ ಕುಟುಂಬದವರು ಅವರಿಗಾಗಿ ಹುಡುಕುತ್ತಿದ್ದರು. ಝೈದ್ ಮಕ್ಕಾದಲ್ಲಿರುವರೆಂಬ ಸುದ್ದಿ ತಿಳಿದ ಚಿಕ್ಕಪ್ಪ ಅವರನ್ನು ಕರೆದೊಯ್ಯಲಿಕ್ಕಾಗಿ ಬಂದರು. ಚಿಕ್ಕಪ್ಪನೊಂದಿಗೆ ಹೋಗಲು ಪ್ರವಾದಿಯವರು(ಸ) ಝೈದ್‌ರಿಗೆ ಒಪ್ಪಿಗೆ ನೀಡಿದರು. ಅಪ್ಪ ಮತ್ತು ಚಿಕ್ಕಪ್ಪನಿಗಿಂತ ಹೆಚ್ಚಾಗಿ ತನ್ನನ್ನು ಪ್ರೀತಿಸುತ್ತಿರುವ ಪ್ರವಾದಿವರ್ಯರನ್ನು(ಸ) ತಾನು ಬಿಟ್ಟಿರಲಾರೆನೆಂದು ಝೈದ್ ಖಡಾಖಂಡಿತವಾಗಿ ಹೇಳಿಬಿಟ್ಟರು. ಚಿಕ್ಕಪ್ಪ ಮರಳಿ ಹೋದರು. ತರುವಾಯ ಪ್ರವಾದಿ(ಸ) ಅವರನ್ನು ಕಅಬಾಕ್ಕೆ ಕರೆದುಕೊಂಡು ಹೋದರು. ಅಲ್ಲಿ ನೆರೆದಿದ್ದವರೊಡನೆ ಹೀಗೆಂದು ಬಹಿರಂಗಪಡಿಸಿದರು. "ಇಂದಿನಿಂದ ಝೈದ್ ನನ್ನ ಮಗ." ಈ ರೀತಿಯಿಂದ ಝೈದ್‌ರು ಪ್ರವಾದಿಯ(ಸ) ದತ್ತು ಪುತ್ರರಾದರು. ಪ್ರವಾದಿಯವರ(ಸ) ದೃಷ್ಟಿಯಲ್ಲಿ ಝೈದ್‌ರು ಕುಲೀನರಾಗಿದ್ದರು.

## ಮುರಿದ ಸಂಬಂಧ

ವಿವಾಹ ಜರಗಿತು. ಆದರೆ ಹೃದಯ ಒಂದಾಗಲಿಲ್ಲ. ಸಾಮರಸ್ಯದ ಬದಲಿಗೆ ದಂಪತಿಗಳ ಮಧ್ಯೆ ವಿರಸ ಭುಗಿಲೆದ್ದಿತು. ದಿನಗಳೆದಂತೆ ಅದು ಹೆಚ್ಚಿತು. ಒಂದು ವರ್ಷ ಹೀಗೆಯೇ ಕಳೆದು ಹೋಯಿತು. ಯಾವ ರೀತಿಯಿಂದಲೂ ಈ ದಾಂಪತ್ಯ ಜೀವನವನ್ನು ಸರಿಹೊಂದಿಸಲಾಗದೆಂದು ಮನಗಂಡ ಝೈದ್‌ರು ವಿವಾಹ ವಿಚ್ಛೇದನದ ಅನುಮತಿ ನೀಡುವಂತೆ ಪ್ರವಾದಿವರ್ಯರನ್ನು(ಸ) ಕೋರಿದರು. ಪ್ರವಾದಿ(ಸ) ಒಪ್ಪಿಗೆ ಕೊಡಲಿಲ್ಲ. ವಿವಾಹ ವಿಚ್ಛೇದನ ನೀಡಬೇಡವೆಂದು ಪ್ರವಾದಿ(ಸ) ಝೈದ್‌ರಿಗೆ ಬುದ್ಧಿ ಹೇಳಿದರು. ಆದರೆ ಸಂಬಂಧವನ್ನು ಮುಂದುವರಿಸಲಸಾಧ್ಯವೆಂದು ಝೈದ್‌ರು ದೃಢವಾಗಿ ಹೇಳಿದರು. ಕೊನೆಗೆ ಆ ಕುಟುಂಬ ಕಲಹವು ವಿವಾಹ ವಿಚ್ಛೇದನದಲ್ಲಿ ಪರ್ಯವಸಾನಗೊಂಡಿತು.

## ಸಂಪ್ರದಾಯದ ಉಲ್ಲಂಘನೆ

ಝೈನಬ್‌ರ ಮನೋವ್ಯಥೆ ಹೆಚ್ಚಿತು. ಪ್ರವಾದಿವರ್ಯರ ಪ್ರೇರಣೆಯಿಂದಲೇ ಈ ವಿವಾಹವು ಜರಗಿದ್ದುದರಿಂದ ಈ ವಿವಾಹ ವಿಚ್ಛೇದನವು ಪ್ರವಾದಿಯವರಿಗೆ(ಸ) ದೊಡ್ಡ ಸಮಸ್ಯೆಯಾಯಿತು. ಝೈನಬ್‌ರನ್ನು(ರ) ತಾನೇ ವಿವಾಹವಾದರೆ ಅವರ ಮನೋವೇದನೆ ಕಡಿಮೆಯಾಗಿ ಅರಕ್ಷಿತ ಭಾವನೆ ತೊಲಗಬಹುದೆಂದು ಪ್ರವಾದಿ(ಸ) ಭಾವಿಸಿದರು. ಝೈದ್‌ರ(ರ) ಮೂಲಕವೇ ಝೈನಬ್‌ರ(ರ) ಬಳಿಗೆ ವಿವಾಹ ಪ್ರಸ್ತಾಪ ಕಳುಹಿಸಿದರು. 'ಇಸ್ತಿಖಾರ' (ಶುಭ ಕೋರುವ ನಮಾಝ್) ಮುಗಿಸಿದ ಬಳಿಕ ಉತ್ತರ ನೀಡುವೆನೆಂದು ಝೈನಬ್(ರ) ತಿಳಿಸಿದರು.

ಪ್ರವಾದಿ(ಸ) ಮತ್ತು ಹ. ಝೈನಬ್‌ರ(ರ) ವಿವಾಹವು ನೆರವೇರಿತು. ದತ್ತುಪುತ್ರ ನಿಂದ ವಿವಾಹ ವಿಚ್ಛೇದನವನ್ನು ಪಡೆದ ಪತ್ನಿಯನ್ನು ವಿವಾಹವಾಗಬಾರದೆಂಬ ರಿವಾಜು ಅರಬರಲ್ಲಿದ್ದಿತು. ದತ್ತು ಪುತ್ರನು ಸ್ವಂತ ಪುತ್ರನಲ್ಲ. ಆದ್ದರಿಂದ ಆತನು ತೊರೆದ ಸ್ತ್ರೀಯನ್ನು ನಿಕಾಹ್ ಮಾಡಿಕೊಳ್ಳಬಹುದೆಂದು ಪ್ರವಾದಿ(ಸ) ಈ ಮೂಲಕ ಬಹಿರಂಗಪಡಿಸಿದರು.

ಝೈನಬ್‌ರ(ರ) ವಿವಾಹದ ಪ್ರಯುಕ್ತ ಪ್ರವಾದಿ(ಸ) ಸತ್ಕಾರ ಕೂಟವೊಂದನ್ನು ಏರ್ಪಡಿಸಿದರು. ಇತರ ಪತ್ನಿಯರನ್ನು ವಿವಾಹವಾದಾಗ ಪ್ರವಾದಿ(ಸ) ಇಷ್ಟೊಂದು ಭರ್ಜರಿ ಸತ್ಕಾರ ಕೂಟ ನಡೆಸಿರಲಿಲ್ಲ.

## ಉತ್ಕೃಷ್ಟ ಗುಣ

ಹ. ಝೈನಬ್‌ರು ಭಯಭಕ್ತಿ ಹಾಗೂ ಕುಶಾಗ್ರಮತಿಯಾಗಿದ್ದರು. ಆಯಿಶಾರ(ರ) ಅಪವಾದ ಪ್ರಸಂಗವು ಅದಕ್ಕೆ ಉದಾಹರಣೆಯಾಗಿದೆ. ಆಯಿಶಾರ(ರ) ಬಗ್ಗೆ ನನಗೆ ಒಳ್ಳೆಯ ಅಭಿಪ್ರಾಯವಿದೆಯೆಂದು ಅವರು ಪ್ರವಾದಿವರ್ಯರೊಡನೆ(ಸ) ಹೇಳಿದ್ದರು. ಯಾವುದೇ ಪ್ರಾಮುಖ್ಯ ಕೆಲಸವನ್ನು ಮಾಡುವುದಕ್ಕಿಂತ ಮುಂಚೆ ಅವರು 'ಇಸ್ತಿಖಾರ' ಮಾಡುತ್ತಿದ್ದರು. ಉಮ್ಮು ಸಲ್ಮ(ರ) ಹೇಳಿರುವಂತೆ, ಝೈನಬ್‌ರು ಅತ್ಯಧಿಕ ವ್ರತಾನುಷ್ಠಾನ ಮತ್ತು ನಿದ್ದೆ ಬಿಟ್ಟು ನಮಾಝ್ ನಿರ್ವಹಿಸುತ್ತಿದ್ದರು. "ಧರ್ಮಭಕ್ತಿ, ದೇವಭಯ, ಸತ್ಯನಿಷ್ಠೆ, ಕುಟುಂಬ ಸಂಬಂಧ, ನಿಸ್ವಾರ್ಥತೆ, ದಾನಧರ್ಮ ಇತ್ಯಾದಿಗಳಲ್ಲಿ ಝೈನಬ್‌ರು ಅದ್ವಿತೀಯ ಮಹಿಳೆ ಯಾಗಿದ್ದರು." ಇದು ಅವರ ಬಗ್ಗೆ ಆಯಿಶಾರ(ರ) ಪ್ರತಿಕ್ರಿಯೆ.

ಹ. ಝೈನಬ್‌ರು(ರ) ಬಡವರಿಗೆ ನೆರಳಾಗಿದ್ದರು. ದೊರೆತುದೆಲ್ಲವನ್ನೂ ಅನಾಥರಿಗೂ ವಿಧವೆಯರಿಗೂ ದಾನ ಮಾಡುತ್ತಿದ್ದರು. ಖಲೀಫ ಉಮರ್‌ರು(ರ) ಪ್ರವಾದಿವರ್ಯರ(ಸ) ಪತ್ನಿಯರ ವಾರ್ಷಿಕ ಖರ್ಚಿಗಾಗಿ 12,000 ದಿರ್ಹಮ್ ಮೀಸಲಾಗಿಟ್ಟಿದ್ದರು. ಝೈನಬ್‌ರು(ರ) ಅದರಿಂದ ತನಗೆ ದೊರೆತ ಮೊತ್ತವನ್ನು ಬಡಬಗ್ಗರಿಗೂ ಸ್ವಕುಟುಂಬದವರಿಗೂ ವಿತರಣೆ

ಮಾಡಿದರು. ಈ ಸಮಾಚಾರ ಸಿಕ್ಕಿದ ಉಮರ್‌ರು(ರ) ಪುನಃ ಸಾವಿರ ದಿರ್ಹಮ್ ಕಳುಹಿಸಿಕೊಟ್ಟರು. ಅವರು ಅದನ್ನೂ ದಾನ ಮಾಡಿದರು. "ಅಲ್ಲಾಹನೇ! ಇನ್ನು ಮುಂದೆ ಈ ಹಣವನ್ನು ಸ್ವೀಕರಿಸುವ ಸಂದರ್ಭವನ್ನು ಒದಗಿಸಬೇಡ" ಎಂದು ಝೈನಬ್(ರ) ಪ್ರಾರ್ಥಿಸಿದರು. ಹ. ಝೈನಬ್(ರ) ಸ್ವಕರಗಳಿಂದ ಚರ್ಮ ಶುದ್ಧಗೊಳಿಸಿ ಅದನ್ನು ಮಾರಿ ದೊರೆಯುವ ಹಣವನ್ನು ಬಡವರಿಗೆ ನೀಡುತ್ತಿದ್ದರು.

## ಕೊಡುಗೈ

"ನಿಮ್ಮ ಕೈ ನೀಳವಿರುವವರು ನನ್ನನ್ನು ಮೊದಲು ಸೇರುವಿರಿ" ಎಂದು ಮರಣ ವೇಳೆ ಪ್ರವಾದಿವರ್ಯರು(ರ) ಪತ್ನಿಯರಿಗೆ ಹೇಳಿದರು. ಈ ವರ್ಣನೋಕ್ತಿಯು ಅವರಿಗೆ ಪ್ರಥಮತಃ ಅರ್ಥವಾಗಿರಲಿಲ್ಲ. ಅವರು ಪರಸ್ಪರ ತಮ್ಮ ಕೈಗಳನ್ನು ಅಳತೆ ಮಾಡಲಾ ರಂಭಿಸಿದರು. ಪ್ರವಾದಿಯ(ಸ) ಬಳಿಕ ಝೈನಬ್‌ರು ಪ್ರಥಮವಾಗಿ ನಿಧನರಾದಾಗ ಅವರಿಗೆ ಆ ಮಾತಿನ ಅರ್ಥವಾಯಿತು. ಕೈ ನೀಳವುಳ್ಳವಳೆಂದರೆ ಕೊಡುಗೈ ದಾನಿಯೆಂದರ್ಥ.

ಹ. ಝೈನಬ್‌ರು ಹಿಜರಿ 20ರಲ್ಲಿ ತನ್ನ 53ನೇ ವಯಸ್ಸಿನಲ್ಲಿ ನಿಧನರಾದರು. ಆಗ ಉಮರ್ ಬಿನ್ ಖತ್ತಾಬ್‌ರ ಆಳ್ವಿಕೆಯಿದ್ದಿತು. 'ಕಫನ್' ಅವರೇ ಸಿದ್ಧಪಡಿಸಿಟ್ಟಿದ್ದರು. ಝೈನಬ್‌ರ ವಿಯೋಗವು ಬಡವರ ಹಾಗೂ ನಿರ್ಗತಿಕರ ಮಟ್ಟಿಗೆ ತುಂಬಲಾರದ ನಷ್ಟ ವಾಗಿತ್ತು. "ಸದ್ಗುಣ ಸಂಪನ್ನೆಯಾದ ಆ ಮಹಾ ಮಹಿಳೆ ನಮ್ಮನ್ನು ಅಗಲಿದರು. ಅನಾಥೆಯರೂ ವಿಧವೆಯರೂ ಧರ್ಮ ಸಂಕಟಕ್ಕೀಡಾದರು." ಇದು ಆಯಿಶಾರ(ರ) ಸಂತಾಪ ಸೂಚಕ ಮಾತು.

ಮರಣ ವಾರ್ತೆಯನ್ನು ತಿಳಿದ ಖಲೀಫ ಉಮರ್‌ರು(ರ) ಜನಾಝ ನಮಾಝ್ ಗಾಗಿ ಎಲ್ಲರಿಗೂ ಕರೆ ನೀಡಿದರು. ಉಮರ್‌ರು(ರ) ನಮಾಝ್‌ನ ಮುಂದಾಳ್ತನ ವಹಿಸಿದರು. ಅದು ಅತಿ ಉಷ್ಣ ಕಾಲವಾಗಿತ್ತು. ಬಿಸಿಲಿನ ತಾಪವನ್ನು ತಡೆಯಲಿಕ್ಕಾಗಿ ನಮಾಝ್‌ನ ವೇಳೆ ಕಬರಿನ ಮೇಲೆ ಒಂದು ಕುಬ್ಬ ನಾಟಿದ್ದರು. ಸಹೋದರ ಪುತ್ರರಾದ ಮುಹಮ್ಮದ್, ಅಬ್ದುಲ್ಲ ಮತ್ತು ಝೈದ್‌ರ ಪುತ್ರ ಉಸಾಮರು ಸೇರಿ ಮೃತದೇಹವನ್ನು ಸಮಾಧಿಯೊಳಕ್ಕೆ ಇಳಿಸಿದರು.

□□□

# ಹರ್ಝ್ರತ್ ಜುವೈರಿಯ(ರ)

ಬನೂ ಮುಸ್ತಲಿಕ್ ಗೋತ್ರದವರು ಮದೀನಾವನ್ನು ಆಕ್ರಮಿಸುವ ಸನ್ನಾಹ ದಲ್ಲಿದ್ದಾರೆ. ಪರಿಸರದ ಗೋತ್ರಗಳನ್ನು ಮುಸ್ಲಿಮರ ವಿರುದ್ಧ ಒಂದುಗೂಡಿಸುತ್ತಿದ್ದಾರೆ. ಈ ಸುದ್ದಿಯು ಪ್ರವಾದಿವರ್ಯರಿಗೆ(ಸ) ತಲುಪಿತು. ತನಿಖೆಯಿಂದ ಅದು ನಿಜವೆಂದು ರುಜುವಾಯಿತು. ಪ್ರವಾದಿ(ಸ) ಮತ್ತು ಅನುಚರರು ಮದೀನಾದಲ್ಲಿ ನೆಲೆಸಿದ ಬಳಿಕ ಕುರೈಶರು ಪರಿಸರದ ಅರಬ್ ಗೋತ್ರಗಳನ್ನು ಮುಸ್ಲಿಮರ ವಿರುದ್ಧ ಕೆರಳಿಸುತ್ತಿದ್ದರು. ಬನೂ ಮುಸ್ತಲಿಕ್ ಗೋತ್ರದವರ ಯುದ್ಧ ಸಿದ್ಧತೆಯು ಪ್ರಸ್ತುತ ಒಳಸಂಚಿನ ಒಂದು ಭಾಗವಾಗಿತ್ತು.

## ಕೈದಿ

ಪ್ರವಾದಿವರ್ಯರು(ಸ) ಮತ್ತು ಅನುಯಾಯಿಗಳು ವೈರಿಗಳನ್ನು ಗುರಿಯಾಗಿರಿಸಿ ಹೊರಟರು. ಪರಿಸರದ ಗೋತ್ರಗಳೆಲ್ಲವನ್ನು ಸಂಘಟಿಸಿ ಒಗ್ಗಟ್ಟಿನಿಂದ ಮದೀನವನ್ನು ಆಕ್ರಮಿಸುವುದಕ್ಕಿಂತ ಮುಂಚಿತವಾಗಿ ಬನೂ ಮುಸ್ತಲಿಕ್‌ರನ್ನು ದುರ್ಬಲಗೊಳಿಸುವುದೇ ಪ್ರವಾದಿಯ(ಸ) ಉದ್ದೇಶವಾಗಿತ್ತು. ಮುರೈಸಿಅ್ ಜಲಾಶಯದ ಸಮೀಪದಲ್ಲಿ ಮುಸ್ಲಿಮರು ವೈರಿಗಲನ್ನು ಎದುರಿಸಿದರು. ಮುಸ್ಲಿಮರೊಡನೆ ಹೆಚ್ಚು ಕಾಲ ಹೋರಾಡಲು ವೈರಿಗಳಿಗೆ ಸಾಧ್ಯವಾಗಲಿಲ್ಲ. ಅವರು ಸೋತು ಓಡಿ ಹೋದರು. ಸುಮಾರು 600 ಮಂದಿ ಕೈದಿಗಳಾದರು. ಬನೂ ಮುಸ್ತಲಿಕ್ ಗೋತ್ರದ ನಾಯಕ ಹಾರಿಸ್ ಬಿನ್ ಅಬೀ ಸಿರಾರ್‌ರ ಪುತ್ರಿ ಜುವೈರಿಯಾರು ಯುದ್ಧ ಬಂಧಿಯಾದರು. ಅವರ ಪತಿ ಮುಸಾಫಿ ಬಿನ್ ಸಫ್ವಾನ್ ಸಂಘರ್ಷದಲ್ಲಿ ಹತರಾದರು.

## ಪ್ರವಾದಿಯ(ಸ) ಪತ್ನಿ ಪಟ್ಟಕ್ಕೆ

ಪ್ರವಾದಿವರ್ಯರು(ಸ) ಯುದ್ಧ ಕೈದಿಗಳನ್ನು ಮುಸ್ಲಿಮರಿಗೆ ಹಂಚಿದರು. ಅಂದು ಯುದ್ಧ ಕೈದಿಗಳನ್ನು ಸೆರೆಮನೆಯಲ್ಲಿಡುವ ಸಂಪ್ರದಾಯವಿರಲಿಲ್ಲ. ಅವರನ್ನು ಮುಸ್ಲಿಮ್ ಯೋಧರ ಸುಪುರ್ದಿನಲ್ಲಿ ಕೆಲಸ ಮುಂತಾದವುಗಳಿಗೆ ನೇಮಿಸಲಾಗುತ್ತಿತ್ತು. ಮುರೈಸಿಅ್

ಯುದ್ಧದ ಕೈದಿಗಳನ್ನು ವಿತರಣೆ ಮಾಡಿದಾಗ ಜುವೈರಿಯವರು ಸಾಬಿತ್ ಬಿನ್ ಖೈಸ್‌ರವರ(ರ) ಪಾಲಿಗೆ ಬಂದರು.

ಕುಲ ಪ್ರತಿಷ್ಠೆಯಿರುವ ಬನೂ ಮುಸ್ತಲಿಕ್ ಗೋತ್ರದ ನಾಯಕರ ಪುತ್ರಿ ಜುವೈರಿಯರವರು ಗುಲಾಮ ಜೀವನವನ್ನು ಮೆಚ್ಚಲಿಲ್ಲ. ಅವರು ವಿಮೋಚನೆ ಪತ್ರ ಬರೆದು ಸ್ವತಂತ್ರರಾಗಬಯಸಿದರು. ಸಾಬಿತ್ ಬಿನ್ ಖೈಸ್‌ರೂ ಅದಕ್ಕೆ ಒಪ್ಪಿದರು. ಆದರೆ ಸಂದಾಯ ಮಾಡಬೇಕಾದ ಹಣ ಜುವೈರಿಯರಲ್ಲಿರಲಿಲ್ಲ. ಅವರು ನೆರವಿಗಾಗಿ ಪ್ರವಾದಿಯ(ಸ) ಬಳಿ ಹೋದರು. ಕುಲೀನ ಮನೆತನದ ಜುವೈರಿಯರನ್ನು ಪ್ರವಾದಿವರ್ಯರು ಗುಲಾಮತನ ದಿಂದ ವಿಮೋಚಿಸಿ, ಅವರ ಅಪೇಕ್ಷೆಯಂತೆ ಸ್ವಪತ್ನಿಯಾಗಿ ಸ್ವೀಕರಿಸಿದರು.

## ಪುತ್ರಿಯ ವಿಮೋಚನೆ

ಮುರೈಸಿಲ್ ಯುದ್ಧದಲ್ಲಿ ಸೋತ ಬನೂ ಮುಸ್ತಲಿಕ್ ಗೋತ್ರದ ನಾಯಕ ಹಾರಿಸ್ ಬಿನ್ ಅಬೀ ಸಿರಾರರು ಮಗಳನ್ನು ವಿಮೋಚನೆಗೊಳಿಸಲಿಕ್ಕಾಗಿ ಹೇರಳ ಹಣ ಸಮೇತ ಮದೀನಾಕ್ಕೆ ಹೊರಟರು. ಮದೀನಾ ತಲುಪಿ ಪ್ರವಾದಿಯೊಂದಿಗೆ(ಸ) ಮಾತುಕತೆ ನಡೆಸಿದರು. ಮಗಳನ್ನು ಬಿಡುಗಡೆಗೊಳಿಸಬೇಕೆಂದೂ ಅದಕ್ಕಾಗಿ ನಾನು ಪ್ರಾಯಶ್ಚಿತ್ತವಾಗಿ ಏನು ಬೇಕಿದ್ದರೂ ನೀಡಲು ಸಿದ್ಧನೆಂದೂ ತಿಳಿಸಿದರು. ಜುವೈರಿಯಾ ಸ್ವತಂತ್ರಳಾಗಿ ಪ್ರವಾದಿಯ(ಸ) ಪತ್ನಿ ಪಟ್ಟವನ್ನು ಸ್ವೀಕರಿಸಿರುವಳೆಂದು ತಿಳಿದು ಸಂತೋಷಪಟ್ಟರು. ಪ್ರವಾದಿಯ ಈ ಸೌಜನ್ಯದ ವರ್ತನೆಯಿಂದ ಆಕರ್ಷಿತರಾಗಿ ಹಾರಿಸ್ ಇಸ್ಲಾಮ್ ಸ್ವೀಕರಿಸಿದರು.

ಇನ್ನೊಂದು ಚರಿತ್ರೆಯ ದಾಖಲೆಯಲ್ಲಿ ಹೀಗಿದೆ: ಜುವೈರಿಯಾರು ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟಾಗ ತಂದೆ ಹಾರಿಸ್ ಪ್ರವಾದಿಯ ಬಳಿ ಹೋಗಿ ಹೀಗೆಂದರು: "ನನ್ನ ಮಗಳಿಗೆ ದಾಸಿಯಾಗಿ ಜೀವಿಸಲು ಸಾಧ್ಯವಿಲ್ಲ. ಅದು ನಮ್ಮ ಕುಲ-ಗೌರವಕ್ಕೆ ಭೂಷಣ ವಲ್ಲ. ಆದ್ದರಿಂದ ಮಗಳನ್ನು ಬಿಡುಗಡೆ ಮಾಡಿ ನನ್ನ ಸಂಗಡ ಕಳುಹಿಸಿರಿ." ಅದಕ್ಕೆ ಪ್ರವಾದಿವರ್ಯರು(ಸ) "ನಾನು ಜುವೈರಿಯರನ್ನು ಆಕೆಯ ನಿರ್ಧಾರಕ್ಕೆ ಬಿಟ್ಟಿದ್ದೇನೆ. ಜುವೈರಿಯಾಗೆ ಒಪ್ಪಿಗೆಯಿದ್ದರೆ ನೀವು ಕರೆದೊಯ್ಯಬಹುದು" ಎಂದು ಹೇಳಿದರು. ಹಾರಿಸ್ ಮಗಳ ಬಳಿ ಹೋಗಿ ಹೇಳಿದರು: "ಮುಹಮ್ಮದರು ನಿನ್ನಿಷ್ಟದಂತೆ ವರ್ತಿಸುವ ಅನುಮತಿ ನೀಡಿದ್ದಾರೆ. ಆದ್ದರಿಂದ ನೀನು ನನ್ನೊಂದಿಗೆ ಬಾ. ನನ್ನನ್ನು ಅಪಮಾನಿಸಬೇಡ." ಜುವೈರಿಯಾರು ಹೀಗೆ ಉತ್ತರಿಸಿದರು: "ನಾನು ಪ್ರವಾದಿಯ ಬಳಿಯೇ ಬಾಳುವುದನ್ನು ಮೆಚ್ಚುತ್ತೇನೆ." ಜುವೈರಿಯಾರಿಗೆ ಧರ್ಮ ಮತ್ತು ಪ್ರವಾದಿಯೊಂದಿಗಿರುವ ಗೌರವಾದರ ಮನೋಭಾವವನ್ನು ಗ್ರಹಿಸಿದ ಪ್ರವಾದಿವರ್ಯರು(ಸ) ಅವರನ್ನು ವಿವಾಹವಾಗಲು ನಿರ್ಧರಿಸಿದರು. ಜುವೈರಿಯಾರೇ ವಿವಾಹ ಪ್ರಸ್ತಾಪವನ್ನು ಪ್ರವಾದಿವರ್ಯರ(ಸ) ಮುಂದಿರಿಸಿದ್ದರೆಂದು ಐತಿಹಾಸಿಕ ಉಲ್ಲೇಖಗಳಿವೆ.

## ಗುಲಾಮರ ಸಾಮೂಹಿಕ ವಿಮೋಚನೆ

ಪ್ರವಾದಿ(ಸ) ಮತ್ತು ಜುವೈರಿಯಾರ ವಿವಾಹವು ಉತ್ತಮ ಪರಿಣಾಮ ಬೀರಿತು. ಈ ವಿವಾಹವನ್ನು ಅನುಯಾಯಿಗಳು ಬಹಳ ಸಂತೋಷದಿಂದ ಸ್ವಾಗತಿಸಿದರು. ತರುವಾಯ ಪ್ರವಾದಿವರ್ಯರ(ಸ) ಪ್ರಿಯ ಪತ್ನಿಯ ಗೋತ್ರದವರನ್ನು ಗುಲಾಮರಾಗಿರಿಸಿಕೊಳ್ಳಲು ಅವರು ಇಷ್ಟಪಡಲಿಲ್ಲ. ಅವರು ಆ ಯುದ್ಧ ಕೈದಿಗಳೆಲ್ಲರನ್ನು ವಿಮೋಚನೆಗೊಳಿಸಿ ಬಿಟ್ಟರು. ಅವರ ಹಣವನ್ನೂ ಹಿಂತಿರುಗಿಸಿದರು. ಮುಸ್ಲಿಮರ ಈ ವರ್ತನೆಯಿಂದ ಆಕರ್ಷಿತರಾಗಿ ಅನೇಕ ಮಂದಿ ಇಸ್ಲಾಮ್ ಸ್ವೀಕರಿಸಿ ಮುಸ್ಲಿಮರೊಂದಿಗೆ ವಾಸಿಸಿದರು. ಈ ಘಟನೆಯ ಕುರಿತು. ಹ. ಆಯಿಶಾ(ರ) ಹೇಳುತ್ತಾರೆ: "ಜುವೈರಿಯಾ ಮತ್ತು ಪ್ರವಾದಿಯವರ(ಸ) ವಿವಾಹವು ಸ್ವಗೋತ್ರದವರಿಗೆ ದೊಡ್ಡ ಅನುಗ್ರಹವಾಗಿತ್ತು." ಗೋತ್ರದವರೆಲ್ಲರಿಗೂ ಸಾಮೂಹಿಕ ವಿಮೋಚನೆ ದೊರೆಯಿತು. ಅವರಲ್ಲನೇಕರು ಇಸ್ಲಾಮ್ ಸ್ವೀಕರಿಸಿದರು.

ಬನೂ ಮುಸ್ತಲಿಕ್ ಗೋತ್ರದವರು ಮದೀನಾದ ನೆರೆಕರೆಯಲ್ಲಿ ವಾಸವಾಗಿದ್ದರು. ಅವರೆಲ್ಲರೂ ಇಸ್ಲಾಮಿನ ವೈರಿಗಳಾಗಿದ್ದರು. ಜುವೈರಿಯಾರ ವಿವಾಹದಿಂದ ಅವರೆಲ್ಲರೂ ಪ್ರವಾದಿವರ್ಯರ(ಸ) ಮಿತ್ರರಾದರು. ಈ ಘಟನೆಯನ್ನು ಕೆಲವು ಇತಿಹಾಸಜ್ಞರು ಪ್ರವಾದಿಯ ಮಹಾ ರಾಜಕೀಯ ವಿಜಯವೆಂದು ಅಭಿಪ್ರಾಯಪಟ್ಟಿದ್ದಾರೆ. ಅದರೊಂದಿಗೆ ಇಸ್ಲಾಮಿ ರಾಷ್ಟ್ರದ ಗಡಿಯು ಮಕ್ಕಾದೆಡೆಗೆ ಪುನಃ ನೂರು ಮೈಲು ಹತ್ತಿರವಾಯಿತು.

ಬದಲಾವಣೆ: ಕುಬೇರ ಕುಟುಂಬದಲ್ಲಿ ಜನಿಸಿದ ಜುವೈರಿಯಾ ಸುಖ ಸಂತೋಷ ತುಂಬಿದ ಆಡಂಬರಪೂರ್ಣ ವಾತಾವರಣದಲ್ಲಿ ಬೆಳೆದು ಬಂದರು. ಅಭಿಮಾನ ಮತ್ತು ಕುಲೀನತೆಗೆ ತಕ್ಕಂತೆ ಓರ್ವ ಯುವಕನನ್ನು ವಿವಾಹವಾದರು. ಲೌಕಿಕ ಸುಖಗಳಲ್ಲಿ ತನ್ಮಯವಾಗಿರುವುದೇ ಅವರ ಬಯಕೆಯಾಗಿತ್ತು. ತನ್ಮಧ್ಯೆ ಯುದ್ಧ ಬಂತು. ಯುವ ಪತಿ ವಧಿಸಲ್ಪಟ್ಟರು. ಸ್ವಪಕ್ಷೀಯರು ಶೋಚನೀಯ ಸೋಲನುಭವಿಸಿದರು. ಹೆಚ್ಚೇಕೆ, ಸ್ವಯಂ ಕೈದಿಯಾಗಿ ಬಂಧಿತರಾದರು. ಈ ಎಲ್ಲ ದುರಂತಗಳನ್ನು ಅನುಭವಿಸಬೇಕಾಗಿ ಬಂದಿದ್ದರೂ ಅವರಿಗೆ ಪ್ರವಾದಿ ಅಥವಾ ಅನುಯಾಯಿಗಳ ಬಗ್ಗೆ ಕಿಂಚಿತ್ ದ್ವೇಷವಿರಲಿಲ್ಲ. ಸ್ವಯಂ ಗುಲಾಮತನದಿಂದ ಮುಕ್ತಳಾಗಿ ತಾಯಿನಾಡಿಗೆ ಮರಳುವುದಂತಿರಲಿ ತಂದೆ ಒತ್ತಾಯಿಸಿಯೂ ಅವರೊಂದಿಗೆ ಹೋಗಲೊಪ್ಪಲಿಲ್ಲ. ಅವರ ಈ ಅದ್ಭುತ ಬದಲಾವಣೆಗೆ ಪ್ರವಾದಿ(ಸ) ಮತ್ತು ಅನುಯಾಯಿಗಳ ಸ್ನೇಹಾದರದ ವರ್ತನೆ, ಉತ್ಕೃಷ್ಟ ಜೀವನ ಹಾಗೂ ಇಸ್ಲಾಮ್ ಸತ್ಯಧರ್ಮವೆಂಬ ವಿಶ್ವಾಸವೇ ಕಾರಣವಾಗಿತ್ತು. ಸತ್ಯಧರ್ಮಕ್ಕಾಗಿ ಕುಲ, ಮೇಲ್ಮೆ ಮತ್ತು ಸುಖಾಡಂಬರ ಪ್ರಜ್ಞೆಯನ್ನು ಕಿತ್ತೆಸೆದು ಧರ್ಮನಿಷ್ಠೆ-ದೇವಭಕ್ತೆಯಾಗಿ ಜೀವಿಸಲು ಆ ಮಹಿಳೆ ನಿರ್ಧರಿಸಿದರು. ಅವರಿಗೆ ಅಲ್ಲಾಹ್ ಮತ್ತು ಪ್ರವಾದಿವರ್ಯರು(ಸ) ಸ್ವಕುಟುಂಬ ಮತ್ತು ಸ್ವಸುಖಕ್ಕಿಂತ ಅಮೂಲ್ಯವಾಗಿದ್ದರು.

## ಗುಣನಡತೆ

ಹಝ್ರತ್ ಜುವೈರಿಯಾರ ಜೀವನವು ಮಾದರೀ ಯೋಗ್ಯವಾಗಿತ್ತು. ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದ ಬಳಿಕ ಅವರ ದಿನಚರಿಯಲ್ಲಿ ವಿಸ್ಮಯಕರ ಬದಲಾವಣೆ ಯುಂಟಾಯಿತು. ಸದಾ ದಿಕ್ರ್ ಮತ್ತು ಇಬಾದತ್‌ಗಳಲ್ಲಿ ತಲ್ಲೀನರಾಗಲಾರಂಭಿಸಿದರು. ಸುನ್ನತ್ ಉಪವಾಸಗಳನ್ನೂ ಹೆಚ್ಚು ಅನುಷ್ಠಿಸತೊಡಗಿದರು. ಒಮ್ಮೆ ಪ್ರವಾದಿ(ಸ) ಪ್ರಭಾತ ನಮಾಝ್ ಬಳಿಕ ಜುವೈರಿಯಾರನ್ನು ಭೇಟಿಯಾದರು. ಆಗ ಅವರು ನಮಾಝ್‌ನ ಸ್ಥಳದಲ್ಲಿಯೇ ಕುಳಿತು ದಿಕ್ರ್ ಹೇಳುತ್ತಿದ್ದರು. ಮಧ್ಯಾಹ್ನವೂ ಅದೇ ಸ್ಥಿತಿಯಲ್ಲಿರುವುದನ್ನು ಪ್ರವಾದಿ(ಸ) ನೋಡಿದರು. 'ಬೆಳಗಿನ ಅದೇ ಆಸನವೋ?' ಎಂದು ಪ್ರಶ್ನಿಸಿದರು. 'ಹೌದು' ಎಂದು ಜುವೈರಿಯಾ ಉತ್ತರಿಸಿದರು. ಪ್ರವಾದಿ(ಸ) ಅವರಿಗೆ ಹೊಸ ದಿಕ್ರ್‌ಗಳನ್ನು ಹೇಳಿಕೊಟ್ಟರು.

ಓರ್ವ ಗೃಹಿಣಿಯೆಂಬ ನೆಲೆಯಲ್ಲಿ ಅವರು ಪ್ರವಾದಿವರ್ಯರ ಉಪಚಾರ ಮತ್ತು ಪ್ರವಾದಿಯವರಿಗೆ(ಸ) ಆಹಾರ ಪಾನೀಯಗಳನ್ನು ತಯಾರಿಸಿ ಕೊಡುವ ಕುರಿತು ಬಹಳ ಆಸ್ಥೆ ತೋರಿಸುತ್ತಿದ್ದರು. ಅವರಿಗೆ ವಿದ್ಯೆಯಲ್ಲಿಯೂ ಅಭಿರುಚಿಯಿತ್ತು. ಅನೇಕ ಪ್ರಸಿದ್ಧ ಅನುಯಾಯಿಗಳು ಮತ್ತು ತಾಬಿಈಗಳು ಅವರಿಂದ ಹದೀಸ್‌ಗಳನ್ನು ವರದಿ ಮಾಡಿದ್ದಾರೆ.

## ಮರಣ

ಹಿಜರಿ 50ರಲ್ಲಿ ಆ ಪುಣ್ಯ ತೇಜಸ್ವಿನಿ ತನ್ನ 65ನೇ ವಯಸ್ಸಿನಲ್ಲಿ ಅಸ್ತಂಗತ ರಾದರು. ಕೆಲವು ಇತಿಹಾಸಕಾರರು ಹಿ. 56ರಲ್ಲಿ 70ನೇ ವಯಸ್ಸಿನಲ್ಲಿ ಹ. ಜುವೈರಿಯಾ(ರ) ನಿಧನರಾಗಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಅದು ಮುಆವಿಯಾರ ಆಡಳಿತ ಕಾಲ. ಮದೀನದ ಗವರ್ನರರಾಗಿದ್ದ ಮರ್ವಾನ್‌ರು ಜನಾಝಾ ನಮಾಝ್‌ನ ಮುಂದಾಳ್ತನ ವಹಿಸಿದ್ದರು. ಬಖೀಲ್‌ನ ಸಾರ್ವಜನಿಕ ಸ್ಮಶಾನದಲ್ಲಿ ಅವರನ್ನು ದಫನ ಮಾಡಲಾಯಿತು.

□□□

# ಹಝ್ರತ್ ಉಮ್ಮು ಹಬೀಬ(ರ)

ರಮ್ಲ ಎಂಬ ನಿಜ ನಾಮಧೇಯವಿದ್ದರೂ ಉಮ್ಮುಹಬೀಬ ಎಂದೇ ಕರೆಯಲ್ಪಡುತ್ತಿದ್ದರು. ಸುಪ್ರಸಿದ್ಧ ಬನೂ ಉಮಯ್ಯ ಗೋತ್ರದಲ್ಲಿ ಜನಿಸಿದರು. ಇಸ್ಲಾಮ್ ಮತ್ತು ಪ್ರವಾದಿ ಮುಹಮ್ಮದರ ಕಡುವೈರಿಯಾಗಿದ್ದ ಅಬೂಸುಫ್‌ಯಾನ್‌ರೇ ಉಮ್ಮು ಹಬೀಬರ ತಂದೆ. ಹ. ಉಸ್ಮಾನ್‌ರ(ರ) ಪಿತೃ ಸಹೋದರಿ ಹಾಗೂ ಅಬುಲ್ ಆಸ್‌ರ ಪುತ್ರಿ ಸಫಿಯ್ಯರೇ ಅವರ ತಾಯಿ. ಹ. ಮುಆವಿಯರು(ರ) ಉಮ್ಮು ಹಬೀಬರ(ರ) ಸಹೋದರ.

ಬನೂ ಅಸದ್ ಗೋತ್ರದ ಉಬೈದುಲ್ಲಾ ಬಿನ್ ಜಹ್ಶ್‌ರನ್ನು ಪತಿಯಾಗಿ ಸ್ವೀಕರಿಸಿದರು. ವಿವಾಹದ ಬಳಿಕ ಉಮ್ಮು ಹಬೀಬರು ಪತಿಗೃಹದಲ್ಲಿ ವಾಸಿಸಿದರು. ಮುಹಮ್ಮದ್‌ರಿಗೆ(ಸ) ಪ್ರವಾದಿತ್ವ ದೊರೆತಾಗ ಉಮ್ಮು ಹಬೀಬರಿಗೆ ಕೇವಲ ಹದಿನೇಳು ವರ್ಷ ವಯಸ್ಸಾಗಿತ್ತು.

## ಚಿಪ್ಪಿನೊಳಗಿನ ಮುತ್ತು

ಪ್ರವಾದಿವರ್ಯರು(ಸ) ಇಸ್ಲಾಮಿ ಸಂದೇಶದೊಂದಿಗೆ ರಂಗ ಪ್ರವೇಶಿಸಿದರು. ಕುರೈಶರು ನಖಶಿಖಾಂತ ಪ್ರವಾದಿವರ್ಯರನ್ನೂ(ಸ) ಇಸ್ಲಾಮನ್ನೂ ವಿರೋಧಿಸಿದರು. ಅಬೂಸುಫ್‌ಯಾನ್ ಪ್ರಮುಖ ಶತ್ರುಗಳಲ್ಲಿ ಓರ್ವರಾಗಿದ್ದರು. ಪ್ರವಾದಿ(ಸ) ಮತ್ತು ಇಸ್ಲಾಮನ್ನು ಮೊಳಕೆಯಲ್ಲೇ ಚಿವುಟಿ ಬಿಡಲು ಅಬೂ ಸುಫ್‌ಯಾನ್ ಬಹಳವಾಗಿ ಪ್ರಯತ್ನಿಸಿದರು. ಉಹುದ್ ಮತ್ತು ಕಂದಕ್ ಯುದ್ಧಗಳಲ್ಲಿ ಅವರು ಕುರೈಶೀ ಸೇನೆಯ ನಾಯಕತ್ವ ವಹಿಸಿದರು. ಉಹುದ್ ಯುದ್ಧದ ವೇಳೆ ಪ್ರವಾದಿಯವರು(ಸ) ವಧಿಸಲ್ಪಟ್ಟರೆಂಬ ಸುದ್ದಿ ತಿಳಿದಾಗ ಅಬೂಸುಫ್‌ಯಾನ್ ಅತಿಯಾಗಿ ಸಂತೋಷ ಪಟ್ಟಿದ್ದರು. ಅಬೂ ಸುಫ್‌ಯಾನ್‌ರ ಪತ್ನಿ ಹಿಂದ್ ಪ್ರವಾದಿಯವರ(ಸ) ಚಿಕ್ಕಪ್ಪ ಹಂಝರ(ರ) ಕರುಳನ್ನು ಜಗಿಜಗಿದು ಉಗುಳಿದ್ದರು. ಇದರಿಂದ ಅಬೂಸುಫ್‌ಯಾನ್‌ರ ಕುಟುಂಬಕ್ಕೆ ಇಸ್ಲಾಮ್ ಮತ್ತು ಪ್ರವಾದಿಯೊಂದಿಗಿದ್ದ ವೈರ ವಿದ್ವೇಷದ ತೀಕ್ಷ್ಣತೆಯನ್ನು ಊಹಿಸಬಹುದು.

ಆದರೆ, ಹ. ಉಮ್ಮು ಹಬೀಬರು ಹಲವು ಚಿಪ್ಪುಗಳೊಳಗಿನ ಮುತ್ತು ಮತ್ತು ಹಲವು ದುಷ್ಟರ ಮಧ್ಯದ ಸಜ್ಜನರಂತಿದ್ದರು. ಅವರು ಸತ್ಯವನ್ನು ಅರಿತುಕೊಂಡರು. ತಂದೆ

ಮತ್ತು ಕುಟುಂಬವೆಲ್ಲವೂ ಅವರ ವಿರೋಧಿಗಳು. ತಾನು ಸತ್ಯವನ್ನು ಸ್ವೀಕರಿಸಿದರೆ ಅವರೆಲ್ಲರೂ ತನ್ನನ್ನು ದ್ವೇಷಿಸುವರೆಂದು ಅವರಿಗೆ ತಿಳಿದಿತ್ತು. ಇಡೀ ಲೋಕವೇ ವಿರುದ್ಧವಾದರೂ ಇಸ್ಲಾಮನ್ನು ಸ್ವೀಕರಿಸಿಯೇ ಸಿದ್ಧವೆಂದು ಉಮ್ಮು ಹಬೀಬ ದೃಢ ನಿರ್ಧಾರ ಮಾಡಿದರು. ಅದೊಂದು ದಿನ ಸುಪ್ರಭಾತದಲ್ಲಿ ಪ್ರವಾದಿಯ(ಸ) ಬದ್ಧ ವೈರಿಯಾಗಿದ್ದ ಅಬೂಸುಫಿಯಾನ್‌ರ ಯುವಪುತ್ರಿ ಎಲ್ಲರನ್ನೂ ದಿಗ್ಭ್ರಾಂತಗೊಳಿಸಿ ಕುಟುಂಬ ಮತ್ತು ಸಮಾಜದ ವಿರೋಧಕ್ಕೆ ಪಂಥಾಹ್ವಾನವೊಡ್ಡಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು. ಪತಿಯೂ ಅವರನ್ನು ಅನುಗಮಿಸಿದರು.

## ರಕ್ತ ಸಂಬಂಧಕ್ಕಿಂತ ಪ್ರಾಮುಖ್ಯತೆ

ಉಮ್ಮು ಹಬೀಬ(ರ) ಮತ್ತು ಅವರ ಪತಿಯ ಇಸ್ಲಾಮ್ ಧರ್ಮ ಸ್ವೀಕಾರವು ಅಬೂ ಸುಫ್‌ಯಾನ್ ಮತ್ತು ಅವರ ಕುಟುಂಬಕ್ಕೆ ಮಹಾ ಹೊಡೆತವಾಗಿದ್ದಿತು. ಮಗಳನ್ನು ಇಸ್ಲಾಮಿನಿಂದ ಹಿಂತಿರುಗಿಸಲು ಅಬೂ ಸುಫ್‌ಯಾನ್ ಶತಪ್ರಯತ್ನ ನಡೆಸಿದರು. 'ನೀನು ಚಿಕ್ಕವಳು. ಹೆಸರಾಂತ ಕುಟುಂಬದವಳು. ಹೆಚ್ಚೇಕೆ, ಕುರೈಶಿ ನಾಯಕನ ಮುದ್ದು ಮಗಳು. ನೀನು ಜೀವನದ ದ್ರಾಕ್ಷಾರಸವನ್ನು ಸವಿಯಬೇಕಾದ ಭಾಗ್ಯವಂತೆ. ನಿನಗೆ ಏನೂ ಕೊರತೆ ಯಿಲ್ಲ. ಬೇಕಾದಷ್ಟು ಸುಖಪಡುವ ಸವಲತ್ತುಗಳಿವೆ. ಇವೆಲ್ಲವನ್ನೂ ತೊರೆದು ಆ ಬಡ ಮುಹಮ್ಮದ್(ಸ) ಮತ್ತು ಸಂಗಡಿಗರೊಡನೆ ಸೇರಿ ಸಮಾಜದ ವಿರೋಧವನ್ನೇಕೆ ಕಟ್ಟಿ ಕೊಳ್ಳಬೇಕು? ನೀನು ಹಿಂತಿರುಗದಿದ್ದರೆ ಕಠಿಣ ಹಿಂಸೆ ಮತ್ತು ಮರ್ದನಗಳನ್ನು ಅನುಭವಿಸ ಬೇಕಾದೀತು.' ಆದರೆ ಉಮ್ಮು ಹಬೀಬ(ರ) ಅಬೂ ಸುಫ್‌ಯಾನ್‌ರ ಪ್ರಲೋಭನೆ ಮತ್ತು ಬೆದರಿಕೆಗಳಿಗೆ ಮಣಿಯುವ ಹೇಡಿಯಾಗಿರಲಿಲ್ಲ. ಅವರಿಗೆ ರಕ್ತಸಂಬಂಧಕ್ಕಿಂತ ವಿಶ್ವಾಸ ಶ್ರದ್ಧೆಯು ಪ್ರಾಮುಖ್ಯವಾಗಿತ್ತು. ಕುಟುಂಬವಿಡೀ ವೈರಿಗಳಾದರೂ ಅವರು ಸತ್ಯವನ್ನು ತ್ಯಜಿಸಲು ಸಿದ್ಧರಾಗಲಿಲ್ಲ.

## ತ್ಯಾಗಯಾತ್ರೆ

ಶತ್ರುಗಳ ಚಿತ್ರಹಿಂಸೆ ದಿನೇ ದಿನೇ ಅಧಿಕವಾಯಿತು. ಮುಸ್ಲಿಮರು ಅದೆಲ್ಲವನ್ನೂ ಸಹಿಸಿದರು. ಕುರೈಶರ ಕ್ರೂರ ಮರ್ದನಗಳಿಗೆ ಅವರನ್ನು ಇಸ್ಲಾಮಿನಿಂದ ವಿಮುಖಗೊಳಿಸ ಲಾಗಲಿಲ್ಲ. ಮುಸ್ಲಿಮ್ ಅಭಯಾರ್ಥಿಗಳ ಪ್ರಥಮ ತಂಡವು ಅಬಿಸೀನಿಯಾಕ್ಕೆ ಮೊದಲೇ ಹೋಗಿತ್ತು. ಎರಡನೆಯ ತಂಡದಲ್ಲಿ ಉಮ್ಮು ಹಬೀಬ(ರ) ಮತ್ತು ಪತಿಯೂ ಹೊರಟರು. ಸತ್ಯವನ್ನು ಸ್ವೀಕರಿಸಿದ್ದಕ್ಕಾಗಿ ಸ್ವಂತ ಮನೆಯಲ್ಲಿಯೂ ಊರಿನಲ್ಲಿಯೂ ರಕ್ಷಣೆಯಿಲ್ಲ. ಪರಂಪರಾಗತ ಧರ್ಮದಲ್ಲಿಯೇ ಉಳಿದು ಊರಿನಲ್ಲಿಯೇ ಸಂತೋಷದಲ್ಲಿರುವುದು, ಅದಲ್ಲದಿದ್ದರೆ ಊರು ತೊರೆದು ಎಲ್ಲಾದರೂ ಹೋಗುವುದು- ಇವೆರಡರ ವಿನಾ ಅನ್ಯ ಮಾರ್ಗವಿರಲಿಲ್ಲ. ಆ ಧೀರ ಮಹಿಳೆಯು ನಿಸ್ಸಂಕೋಚವಾಗಿ ಎರಡನೆಯ ಮಾರ್ಗವನ್ನೇ

ಸ್ವೀಕರಿಸಿದರು. ಊರು, ಮನೆ, ಕುಟುಂಬದವರನ್ನು ತೊರೆದು ಉರಿಯುವ ಮರಳಿನ ಹಾದಿಯಲ್ಲಿ ಬಹುದೂರದ ಅಬಿಸೀನಿಯಾ ದೇಶಕ್ಕೆ ಹೊರಟರು. ಅಲ್ಲಾಹನ ಸಂಪ್ರೀತಿ ಮತ್ತು ಪರಲೋಕ ಮೋಕ್ಷವನ್ನು ಸಾಧಿಸಲಿಕ್ಕಾಗಿ!

## ದುಃಸ್ವಪ್ನ

ವಿಶಾಲ ಮನಸ್ಕರಾಗಿದ್ದ ನಜ್ಜಾಶಿ ರಾಜರು ಮುಸ್ಲಿಮ್ ಅಭಯಾರ್ಥಿಗಳನ್ನು ಸ್ವಾಗತಿಸಿದರು. ಅಬಿಸೀನಿಯಾದಲ್ಲಿ ಅವರಿಗೆ ಅಭಯ ನೀಡಿದರು. ಪ್ರವಾದಿ(ಸ) ಮತ್ತು ಇಸ್ಲಾಮಿನ ಕುರಿತು ಅವರು ಕೇಳಿ ತಿಳಿದುಕೊಂಡರು. ನಜ್ಜಾಶಿ ರಾಜರು ಕ್ರೈಸ್ತರಾಗಿದ್ದರು. ಕ್ರೈಸ್ತರ ವೇದಗ್ರಂಥವಾದ ಬೈಬಲ್‌ನಲ್ಲಿಯೂ ಮುಹಮ್ಮದ್ ಎಂಬ ಹೆಸರಿನ ಅನುರೂಪವಾದ ಓರ್ವ ಪ್ರವಾದಿಯ ಆಗಮನದ ಸುವಾರ್ತೆ ಮತ್ತು ಅವರ ವೈಶಿಷ್ಟ್ಯಗಳ ಕುರಿತು ಪ್ರತಿಪಾದಿಸಲ್ಪಟ್ಟಿದ್ದಿತ್ತು. ಬೈಬಲ್‌ನಲ್ಲಿ ಭವಿಷ್ಯ ನುಡಿದಿರುವ ಪ್ರವಾದಿಯು ಮುಹಮ್ಮದ್‌ರೇ(ಸ) ಆಗಿರಬಹುದೆಂದು ನಜ್ಜಾಶಿ ಭಾವಿಸಿದರು. ಅವರು ಪಾದ್ರಿಗಳನ್ನು ಅರಮನೆಗೆ ಆಹ್ವಾನಿಸಿದರು. ಇಸ್ಲಾಮ್ ಮತ್ತು ಪ್ರವಾದಿ ಮುಹಮ್ಮದ್‌ರ(ಸ) ಕುರಿತು ಅವರೊಡನೆ ಚರ್ಚೆ ನಡೆಸಿದರು. ಕಪಿಮುಷ್ಟಿ ಮತ್ತು ಧನಮೋಹಿಗಳಾಗಿದ್ದ ಪುರೋಹಿತರು ಕ್ರೈಸ್ತ ಧರ್ಮವನ್ನು ತೊರೆದು ಇಸ್ಲಾಮ್ ಧರ್ಮವನ್ನು ಸ್ವೀಕರಿಸಲೊಪ್ಪಲಿಲ್ಲ. ಆದರೆ ಸದ್ಗುಣಿಯಾಗಿದ್ದ ನಜ್ಜಾಶಿ ರಾಜರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿ ಮುಸ್ಲಿಮರಿಗೆ ಅಬಿಸೀನಿಯದಲ್ಲಿ ಇಸ್ಲಾಮಿನ ಪ್ರಚಾರ ಮಾಡುವ ಅನುಮತಿ ನೀಡಿದರು.

ಉಮ್ಮು ಹಬೀಬ(ರ) ಮತ್ತು ಅವರ ಪತಿಯೂ ಅಬಿಸೀನಿಯಾದಲ್ಲಿ ನೆಲೆಸಿದರು. ದಿನ, ವಾರ, ತಿಂಗಳುಗಳುರುಳಿದುವು. ಉಮ್ಮು ಹಬೀಬರಿಗೆ(ರ) ಹಬೀಬ ಎಂಬ ಹೆಣ್ಣು ಮಗು ಹುಟ್ಟಿತು. ದುಃಖ ಮತ್ತು ಯಾತನೆಯ ಕರಿನೆರಳು ಮಾಯವಾಗಿ ಭವಿಷ್ಯವು ಉಜ್ವಲವಾಗುವುದೆಂದು ಅವರು ನಿರೀಕ್ಷಿಸಿದರು. ಆದರೆ ಆ ಶುಭಾಕಾಂಕ್ಷೆಯು ಹೆಚ್ಚು ಕಾಲ ಉಳಿಯಲಿಲ್ಲ. ಉಮ್ಮು ಹಬೀಬ(ರ) ಒಂದು ಸ್ವಪ್ನ ಕಂಡರು. ಭೀತಿ ಪಡಿಸುವಂತಹ ಸ್ವಪ್ನ! ಪತಿಯ ರೂಪವು ಅತ್ಯಂತ ವಿಕಾರವಾಗಿದೆ. ನೋಡುವಾಗ ದ್ವೇಷ ಮತ್ತು ಜಿಗುಪ್ಸೆ ತೋರುತ್ತದೆ. ಏನೋ ಆಪತ್ತು ಸಂಭವಿಸಲಿದೆಯೆಂದು ಉಮ್ಮು ಹಬೀಬ(ರ) ಊಹಿಸಿದರು.

ಬೆಳಗಾಯಿತು. ಉಮ್ಮು ಹಬೀಬರ(ರ) ದೃಢ ವಿಶ್ವಾಸವು ಇನ್ನೊಮ್ಮೆ ಪರೀಕ್ಷೆಗೆ ಗುರಿಯಾಯಿತು. ಇದು ಕೇವಲ ಸ್ತ್ರೀಯೆಂಬ ಮಟ್ಟದಲ್ಲಿದ್ದರೆ ಚಿಂತಿರಲಿಲ್ಲ. ಪ್ರಿಯ ಪತ್ನಿ ಮತ್ತು ಪುತ್ರಿ ವಾತ್ಸಲ್ಯದ ಮಾತೆಯೆಂಬ ನಿಟ್ಟಿನಲ್ಲಿ ಈ ಪರೀಕ್ಷೆಯು ಅತ್ಯಂತ ಕಠಿಣ ವಾಗಿತ್ತು. ಸ್ತ್ರೀಯು ಶಾರೀರಿಕವಾಗಿ ಅಬಲೆಯಾಗಿದ್ದರೂ ವಿಶ್ವಾಸದಲ್ಲಿ ಅಬಲೆಯಲ್ಲ ವೆಂಬುದನ್ನು ಉಮ್ಮು ಹಬೀಬರು(ರ) ಸಾಧಿಸ ಹೊರಟಿದ್ದರು.

ಪತಿ ಉಬೈದುಲ್ಲಾರು ಉಮ್ಮು ಹಬೀಬರನ್ನು(ರ) ಕರೆದು ಹೇಳಿದರು: "ನಾನು ಇಸ್ಲಾಮ್ ಮತ್ತು ಕ್ರೈಸ್ತ ಧರ್ಮಗಳ ಕುರಿತು ಗಾಢವಾಗಿ ಆಲೋಚಿಸಿದೆ. ಕೊನೆಗೆ ಕ್ರೈಸ್ತ ಧರ್ಮಕ್ಕಿಂತ ಉತ್ತಮವಾದ ಧರ್ಮ ಬೇರೆ ಯಾವುದೂ ಇಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದೇನೆ. ಆದ್ದರಿಂದ ಇಸ್ಲಾಮ್ ತೊರೆದು ಕ್ರೈಸ್ತ ಧರ್ಮವನ್ನು ಸ್ವೀಕರಿಸುವ ನಿರ್ಧಾರ ಕೈಗೊಂಡಿದ್ದೇನೆ. ನಿನಗೆ ನಿನ್ನ ಪತಿ ಬೇಕಿದ್ದರೆ ನೀನೂ ನನ್ನೊಂದಿಗೆ ಕ್ರೈಸ್ತ ಧರ್ಮವನ್ನು ಸ್ವೀಕರಿಸು."

ಉಮ್ಮು ಹಬೀಬರಿಗೆ(ರ) ಈ ಮಾತುಗಳನ್ನು ನಂಬಲಾಗಲಿಲ್ಲ. ಶೋಕತಪ್ತ ನಯನಗಳಿಂದ ಅವರು ಪತಿಯನ್ನು ನೋಡಿದರು. ಹೌದು. ತಮಾಷೆಯಲ್ಲ, ಆ ಮುಖದಲ್ಲಿ ಯಾವ ಭಾವ ಭೇದವೂ ಇಲ್ಲ. ಪತಿಯ ನಿರ್ಧಾರವನ್ನು ಬದಲಿಸಲು ಉಮ್ಮು ಹಬೀಬ(ರ) ಸಾಧ್ಯವಿದ್ದಷ್ಟು ಪ್ರಯತ್ನಿಸಿದರು. ತಾನು ಕಂಡ ಸ್ವಪ್ನವನ್ನು ವಿವರಿಸಿದರು. ಆದರೆ ಮೊದಲೇ ಕುಡುಕನೂ ಮೂರ್ಖನೂ ಆಗಿದ್ದ ಪತಿಯು ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲ.

ಪತಿಯು ತೊರೆದರೆ ತಾನೇನು ಮಾಡಬೇಕು? ತನ್ನ ಪುಟ್ಟ ಮಗಳ ಗತಿಯೇನು? ಆಪ್ತೇಷ್ಟರಿಲ್ಲದ ಈ ನಾಡಿನಲ್ಲಿ ನಾನು ಒಂಟಿಯಾಗಲಾರೆನೇ? ಉಮ್ಮು ಹಬೀಬರ(ರ) ಮನಸ್ಸಿನಲ್ಲಿ ಇಂತಹ ಯಾವ ಗೊಂದಲವೂ ಉಂಟಾಗಲಿಲ್ಲ. ಅವರ ವಿಶ್ವಾಸವು ಅಚಲವಾಗಿತ್ತು. ಅವರಿಗೆ ಪತಿಯೂ ಬೇಡ, ಕುಟುಂಬವೂ ಬೇಡ. ಕೇವಲ ಅಲ್ಲಾಹ್ ಮತ್ತು ಅಲ್ಲಾಹನ ಪ್ರವಾದಿಯೇ ಸಾಕು. ಅದಕ್ಕಾಗಿ ಯಾವ ತ್ಯಾಗವನ್ನು ಮಾಡಲೂ ಅವರು ಸಿದ್ಧರಿದ್ದರು.

ಒಂದೆಡೆ ಶ್ರೀಮಂತ ಕುರೈಶಿ ನಾಯಕ ಅಬೂ ಸುಫ್‌ಯಾನರ ಮುದ್ದು ಕುವರಿ ಇಸ್ಲಾಮಿಗಾಗಿ ಯಾತನೆ ವೇದನೆಗಳಿಂದ ಜೀವನ ದೂಡುತ್ತಿದ್ದಾರೆ. ಮತ್ತೊಂದೆಡೆ ತಾನು ಪ್ರಾಣಕ್ಕಿಂತ ಮಿಗಿಲಾಗಿ ಪ್ರೀತಿಸುವ ಇಸ್ಲಾಮಿನ ಮೂಲೋತ್ಪಾಟನೆಗಾಗಿ ತಂದೆ ಅಬೂ ಸುಫ್‌ಯಾನ್ ನಿರಂತರ ಯುದ್ಧ ನಡೆಸುತ್ತಿದ್ದಾರೆ.

## ತ್ಯಾಗದ ಕೊಡುಗೆ

ಉಮ್ಮು ಹಬೀಬರ(ರ) ಹೃದಯವಿದ್ರಾವಕ ಘಟನೆಯನ್ನು ಪ್ರವಾದಿ(ಸ) ಅರಿತರು. ಆ ಮೃದು ಹೃದಯವನ್ನು ಅದು ಬಹಳವಾಗಿ ನೋಯಿಸಿತು. ಇಸ್ಲಾಮಿಗಾಗಿ ಸರ್ವಸ್ವವನ್ನೂ ತ್ಯಜಿಸಿ ಒಂಟಿಯಾಗಿರುವ ಆ ಮಹಿಳಾರತ್ನವನ್ನು ದುಃಖ ಸಾಗರದಿಂದ ದಡಸೇರಿಸಿ ಸಾಂತ್ವನಗೊಳಿಸಲು ಪ್ರವಾದಿ(ಸ) ಬಯಸಿದರು. ತಕ್ಷಣವೇ ಅಮ್ರ್ ಬಿನ್ ಉಮಯ್ಯರನ್ನು ಪ್ರವಾದಿಯವರು(ಸ) ನಜ್ಜಾಶಿ ರಾಜನ ಬಳಿಗೆ ಕಳುಹಿಸಿ ಉಮ್ಮು ಹಬೀಬರನ್ನು(ರ) ತಾನು

ವಿವಾಹವಾಗಬಯಸಿರುವುದಾಗಿ ಪತ್ರ ಬರೆದರು. ಈ ಸುದ್ದಿಯನ್ನು ನಜ್ಜಾಶಿ ರಾಜರು ಸೇವಕಿ ಅಬ್ರಹಃರ ಮೂಲಕ ಉಮ್ಮು ಹಬೀಬರಿಗೆ(ರ) ತಿಳಿಸಿದರು. ಉಮ್ಮು ಹಬೀಬರ(ರ) ಕಣ್ಣುಗಳಿಂದ ಆನಂದಬಾಷ್ಪಗಳುದುರಿದುವು. ಸಂತೋಷ ವಾರ್ತೆಯನ್ನು ತಲುಪಿಸಿದ ಅಬ್ರಹಃರಿಗೆ ಉಮ್ಮುಹಬೀಬ(ರ) ತನ್ನ ಬಳೆ ಮತ್ತು ಉಂಗುರಗಳನ್ನು ಬಹುಮಾನವಾಗಿ ಕೊಟ್ಟರು. ಉಮ್ಮುಹಬೀಬರು(ರ) ತನ್ನ ರಕ್ತ ಸಂಬಂಧಿಯಾಗಿದ್ದ ಖಾಲಿದ್ ಬಿನ್ ಸಈದ್‌ರಿಗೆ ವಿವಾಹದ ಉಸ್ತುವಾರಿ ವಹಿಸಿಕೊಟ್ಟರು.

ಸಂಜೆ ವೇಳೆ ನಜ್ಜಾಶಿ ರಾಜರು ಜಅ್‌ಫರ್ ಬಿನ್ ಅಬೀ ತಾಲಿಬ್‌ರನ್ನೂ ಇತರ ಮುಸ್ಲಿಮರನ್ನೂ ಅರಮನೆಗೆ ಆಮಂತ್ರಿಸಿದರು. ಎಲ್ಲರ ಸಮ್ಮುಖದಲ್ಲಿ ವಿವಾಹವು ವಿಧಿವತ್ತಾಗಿ ನೆರವೇರಿತು. ವಿವಾಹದ ಬಳಿಕ ನೆರೆದಿದ್ದವರಿಗೆ ನಜ್ಜಾಶಿ ರಾಜರು ಔತಣ ನೀಡಿದರು. ನಾನ್ನೂರು ದೀನಾರ್ ಮಹ್ರ್ ನಿರ್ಧರಿಸಲಾಗಿತ್ತು. ಅದನ್ನು ನಜ್ಜಾಶಿ ರಾಜರು ಪ್ರವಾದಿಯವರ ಪರವಾಗಿ ಖಾಲಿದ್ ಬಿನ್ ಸಈದ್‌ರ ಹಸ್ತ ನೀಡಿದರು. ಅವರು ಅದನ್ನು ಉಮ್ಮು ಹಬೀಬರಿಗೆ(ರ) ತಲಪಿಸಿದರು. ಮಹ್ರ್‌ನ ಹಣದಿಂದ ಉಮ್ಮುಹಬೀಬರು(ರ) 50 ದೀನಾರನ್ನು ಅಬ್ರಹಃರಿಗೆ ದಾನ ಮಾಡಿದರು. ಅಬ್ರಹಃರು ಪ್ರಸ್ತುತ ಸಂತೋಷ ವಾರ್ತೆಯನ್ನು ಪ್ರಥಮವಾಗಿ ತಿಳಿಸಿದ್ದರಲ್ಲವೇ? ಆದರೆ ನಜ್ಜಾಶಿ ರಾಜರು ವಿರೋಧಿಸಿದ್ದರಿಂದ ಅಬ್ರಹಃರು ಆ ಹಣ ಮತ್ತು ಬಳೆ ಉಂಗುರಗಳನ್ನು ಉಮ್ಮು ಹಬೀಬರಿಗೆ(ರ) ಮರಳಿ ಕೊಟ್ಟರು. ಮರುದಿನ ನಜ್ಜಾಶಿ ರಾಜರು ಅಬ್ರಹಃರ ಮೂಲಕ ಕಸ್ತೂರಿ ಮತ್ತು ಸುಗಂಧ ದ್ರವ್ಯವನ್ನು ಉಮ್ಮು ಹಬೀಬರಿಗೆ(ರ) ಕಳುಹಿಸಿಕೊಟ್ಟರು.

## ಆತ್ಮಸಂತೃಪ್ತಿ

ವಿವಾಹದ ಬಳಿಕ ನಜ್ಜಾಶಿ ರಾಜರು ಉಮ್ಮುಹಬೀಬರನ್ನು(ರ) ಮದೀನಾಕ್ಕೆ ಹಡಗಿನಲ್ಲೇರಿಸಿ ಕಳುಹಿಸಿದರು. ಅವರು ಸುರಕ್ಷಿತವಾಗಿ ಪಯಣಿಸಿ ಮದೀನಾ ತಲಪಿದರು. ಆಗ ಉಮ್ಮು ಹಬೀಬರಿಗೆ(ರ) ತೀರಗಾಣದ ದುಃಖ ಸಾಗರದಲ್ಲಿ ಈಜಿ ಕೊನೆಗೆ ತೀರ ತಲುಪಿದಂತಹ ಅನುಭವವಾಗಿದ್ದಿರಬಹುದು. ದುಃಖದ ಸುಡುಬಿಸಿಲಿನಿಂದ ಸಂತೋಷದ ಆ ತಂಪು ನೆರಳಿಗೆ ಕಾಲಿಟ್ಟಾಗ ಅವರು ಸಮಾಧಾನದ ನಿಟ್ಟುಸಿರು ಬಿಟ್ಟಿರಬಹುದು.

ಊರು ಮತ್ತು ಮನೆಯನ್ನು ತೊರೆದು ಹತ್ತು ವರ್ಷಗಳು ದಾಟಿವೆ. ಜೀವನದ ಸುದೀರ್ಘ ಮೂವತ್ತು ವರುಷಗಳು ಕಳೆದು ಹೋಗಿವೆ. ಸಮವಯಸ್ಕ ಹಾಗೂ ಆಡಂಬರ ಪ್ರಿಯ ಕುರೈಶಿ ತರುಣಿಯರು ಜೀವನದ ಮಾಧುರ್ಯವನ್ನು ಸವಿದು ಮೈಮರೆತಿರಬಹುದು. ಆದರೆ ತ್ಯಾಗದ ನೋವಿನ ಮಾಧುರ್ಯವೇ ಬೇರೆ. ಅದನ್ನು ಕೇವಲ ಉಮ್ಮುಹಬೀಬರೇ(ರ) ಬಲ್ಲರು. ತುಂಬಿ ತುಳುಕುವ ಯೌವನದ ಎಸಳುಗಳು ತ್ಯಾಗದ ಅಗ್ನಿಕುಂಡದಲ್ಲಿ ಒಂದೊಂದಾಗಿ ಬಾಡಿ ಕರಟಿದುವು. ಆದರೂ ಅವರ ಆತ್ಮವು ಸಂತೃಪ್ತವಾಗಿದೆ. ಸರ್ವಸ್ವವೂ ಅಲ್ಲಾಹನಿಗೆ, ಆತನ ಸಂತೃಪ್ತಿಯೇ ತನ್ನ ಜೀವನದ ಧ್ಯೇಯ.

ಹಿಜರಿ ಏಳನೇ ವರ್ಷದಲ್ಲಿ ಉಮ್ಮು ಹಬೀಬ(ರ) ಮದೀನಾ ತಲಪಿದ್ದರು. ಅವರು ಮದೀನಾ ತಲಪಿದಾಗ ಪ್ರವಾದಿವರ್ಯರು(ಸ) ಖೈಬರ್‌ನಲ್ಲಿದ್ದರು. ಖೈಬರ್ ವಿಜಯದ ಬಳಿಕ ಮದೀನಾಕ್ಕೆ ಮರಳಿದ ಪ್ರವಾದಿವರ್ಯರು(ಸ) ಆ ತ್ಯಾಗಿವರ್ಯೆಯನ್ನು ಪ್ರೀತಿಯಿಂದ ಸ್ವಾಗತಿಸಿದರು. ಉಮ್ಮು ಹಬೀಬರು(ರ) ಅಬಿಸೀನಿಯಾದಿಂದ ತಂದಿದ್ದ ಸುಗಂಧ ವಸ್ತುಗಳನ್ನು ಪ್ರವಾದಿಯ(ಸ) ಮುಂದೆ ಅರ್ಪಿಸಿದರು. ಅಬಿಸೀನಿಯಾ ಎಂಬ ಆ ದೂರ ದೇಶದ ಬಗ್ಗೆ ಪ್ರವಾದಿವರ್ಯರಿಗೆ(ಸ) ಹಲವು ವಿಷಯಗಳನ್ನು ಕೇಳಿ ತಿಳಿಯಲಿಕ್ಕಿತ್ತು. ಉಮ್ಮು ಹಬೀಬರಿಗೆ(ರ) ಹಲವು ವಿಷಯಗಳನ್ನು ಹೇಳಲಿಕ್ಕಿತ್ತು.

## ತಂದೆಯ ಪ್ರತಿಕ್ರಿಯೆ

ಮಗಳ ವಿವಾಹದ ಸುದ್ದಿಯನ್ನು ತಿಳಿದಾಗ ಇಸ್ಲಾಮಿನ ಕಡುವೈರಿಯಾಗಿದ್ದ ಅಬೂ ಸುಫ್ಯಾನ್ ಹೀಗೆ ಪ್ರತಿಕ್ರಿಯೆ ನೀಡಿದರು: "ಅದೇನಿದ್ದರೂ ಮುಹಮ್ಮದ್ ಬಹಳ ಒಳ್ಳೆಯ ಮನುಷ್ಯ."

ಉಮ್ಮು ಹಬೀಬ(ರ) ಮತ್ತು ಪ್ರವಾದಿವರ್ಯರ(ಸ) ವಿವಾಹದ ಬಳಿಕ ಅಬೂ ಸುಫ್ಯಾನ್ ಮಾನಸಿಕ ಗೊಂದಲಕ್ಕೆ ಸಿಲುಕಿದರು. ಏನಿದ್ದರೂ ಮಗಳಲ್ಲವೇ? ಮಗಳು ಪ್ರೇಮಿಸುವ ಪತಿಯನ್ನು ತಾನು ವಿರೋಧಿಸುವುದಾದರೂ ಹೇಗೆ? ಮುಹಮ್ಮದ್ ಮಗಳನ್ನು ಹಿಂಸಿಸಿಲ್ಲ. ಆಕೆ ಅನುಭವಿಸಿದ ಸಂಕಷ್ಟಗಳಿಗೆ ಇದಕ್ಕಿಂತ ದೊಡ್ಡ ಪ್ರತಿಫಲವೇನಿದೆ? ತನ್ನ ಮಗಳಿಗೆ ಪತ್ನಿತ್ವವನ್ನು ನೀಡಿ ಮುಹಮ್ಮದ್ ತನ್ನನ್ನು ಗೌರವಿಸಿಲ್ಲವೇ? ಹಾಗಿದ್ದರೂ ತನಗೆ ಮುಹಮ್ಮದರೊಡನೆ ಅನುಕಂಪ ತೋರಲು ಸಾಧ್ಯವಿದೆಯೇ? ಅದು ತನ್ನ ಘನತೆಗೆ ಕುಂದಲ್ಲವೇ? ಕುರೈಶರ ನಾಯಕತ್ವ ಪಟ್ಟವು ಹೋಗಿ ಬಿಡುವುದಲ್ಲವೇ? ಅದೇನೇ ಇರಲಿ. ಗಾಳಿಯ ದಿಕ್ಕನ್ನು ನೋಡೋಣ. ಅಂತಿಮ ತೀರ್ಮಾನ ಆ ಮೇಲೆ ಮಾಡಬಹುದು.

## ಪುನಃ ಭೇಟಿಯಾದಾಗ

ಹುದೈಬಿಯಾ ಒಪ್ಪಂದವನ್ನು ನವೀಕರಿಸಲಿಕ್ಕಾಗಿ ನಾಯಕ ಅಬೂ ಸುಫ್ಯಾನ್‌ರನ್ನು ಮದೀನಾಕ್ಕೆ ಕಳುಹಿಸಿದರು. ಆ ವೇಳೆ ಮಗಳನ್ನು ಭೇಟಿಯಾಗಲು ಅಬೂ ಸುಫ್ಯಾನ್ ಮರೆಯಲಿಲ್ಲ. ಹತ್ತು ವರ್ಷಗಳ ಬಳಿಕ ತಂದೆ ಮಗಳು ಪುನಃ ಭೇಟಿಯಾದರು. ಆದರೆ ಯಾವ ಭಾವೋದ್ರೇಕವೂ ಇಲ್ಲ. ತಂದೆಯೂ ಅಲ್ಲಾಹ್ ಮತ್ತು ಪ್ರವಾದಿಯ ಕಡುವೈರಿ. ಉಮ್ಮು ಹಬೀಬರು(ರ) ಬಳಿಯಿದ್ದ ಹಾಸಿಗೆಯನ್ನು ಮಡಚಿದರು. ನಾನು ಕುಳಿತುಕೊಳ್ಳಬಹು ದೆಂದು ಭಾವಿಸಿ ಅದನ್ನು ಮಡಚಿದೆಯಾ? ಅಬೂ ಸುಫ್ಯಾನ್ ನೀರಸವಾಗಿ ಪ್ರಶ್ನಿಸಿದರು. 'ಹೌದು' ಉಮ್ಮು ಹಬೀಬ(ರ) ನಿಸ್ಸಂಕೋಚ ಉತ್ತರ ನೀಡಿದರು. "ಅದು ಅಲ್ಲಾಹನ ಪ್ರವಾದಿಯ ಹಾಸಿಗೆ. ಬಹುದೇವಾರಾಧಕರಾಗಿರುವ ನಿಮಗೆ ಅದರಲ್ಲಿ ಆಸೀನರಾಗುವ

ಅರ್ಹತೆಯಿಲ್ಲ." ಅಬೂ ಸುಫ್‌ಯಾನ್ ಈ ಉತ್ತರವನ್ನು ನಿರೀಕ್ಷಿಸಿರಲಿಲ್ಲ. "ಹಿಂದೆ ನೀನು ಬಹಳ ಒಳ್ಳೆಯವಳಾಗಿದ್ದಿ. ಈಗ ನಿನ್ನ ಗುಣವೂ ಬಹಳವಾಗಿ ಕೆಟ್ಟಿದೆ" ಅಬೂ ಸುಫ್‌ಯಾನ್ ಆರೋಪಿಸಿದರು.

## ಗಾಳಿ ತಿರುಗಿ ಬೀಸಿದಾಗ

ಪ್ರವಾದಿ(ಸ) ಹಿಜರಿ ಎಂಟನೇ ವರ್ಷದಲ್ಲಿ ಮಕ್ಕಾವನ್ನು ಜಯಿಸಲಿಕ್ಕಾಗಿ ಸುಮಾರು ಹತ್ತು ಸಾವಿರ ಸೇನಾಬಲದೊಂದಿಗೆ ಹೊರಟರು. ಒಪ್ಪಂದ ಪ್ರಯತ್ನವು ಮುರಿದ ಬಳಿಕ, ಪ್ರವಾದಿ ಮುಹಮ್ಮದ್(ಸ) ಏನು ಮಾಡುವರೆಂದು ಅಬೂ ಸುಫ್‌ಯಾನ್ ಕಾತರದಿಂದ ಕಾಯುತ್ತಿದ್ದರು. ಪ್ರವಾದಿಯವರು(ಸ) ಭಾರೀ ಸೇನೆಯೊಂದಿಗೆ ಬಂದು, ಮಕ್ಕಾದ ಸಮೀಪ ಬೀಡು ಬಿಟ್ಟಿರುವುದನ್ನು ತಿಳಿದ ಅಬೂ ಸುಫ್‌ಯಾನ್ ಇನ್ನು ಪ್ರತಿಭಟಿಸಿ ಪ್ರಯೋಜನ ವಿಲ್ಲವೆಂದು ಮನಗಂಡರು ಅಥವಾ ತಾನು ಈ ತನಕ ವಿರೋಧಿಸಿದ್ದು ಸೂಕ್ತವೇ? ಮುಹಮ್ಮದ್(ಸ) ಸತ್ಯಸಂಧನೆಂದು ನನಗೆ ಹಿಂದೆಯೇ ತಿಳಿದಿಲ್ಲವೇ? ಅಹಂಕಾರ ಮತ್ತು ನಾಯಕತ್ವ ವ್ಯಾಮೋಹವೇ ನನ್ನ ಈ ವಿರೋಧಕ್ಕೆ ಪ್ರೇರಕವಲ್ಲವೇ? ಈ ಅಳಿದುಳಿದ ಸಂದೇಹವೂ ನಿವಾರಣೆಯಾಗಿದೆ. ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯಲ್ಲದಿರು ತ್ತಿದ್ದರೆ ಅವರಿಗೆ ಈ ವಿಸ್ಮಯಕಾರೀ ವಿಜಯವು ಸಾಧ್ಯವಾಗುತ್ತಿತ್ತೇ? ಇದು ಕೊನೆಯ ಅವಕಾಶ. ಈಗಲೇ ಇಸ್ಲಾಮ್ ಸ್ವೀಕರಿಸುವುದು ನನಗೆ ಹಿತಕರ.

ಅಬ್ಬಾಸ್‌ರ(ರ) ಸಂಗಡ ಅಬೂ ಸುಫ್‌ಯಾನ್ ಪ್ರವಾದಿವರ್ಯರ(ಸ) ಬಳಿಗೆ ತಲಪಿದರು. ಪ್ರವಾದಿ(ಸ) ಅವರಿಗೆ ಅಭಯ ನೀಡಿದರು. ಆ ಬಳಿಕ ಇಸ್ಲಾಮ್ ಸ್ವೀಕರಿಸಲು ಅಬೂ ಸುಫ್‌ಯಾನ್ ಸ್ವಲ್ಪವೂ ತಡಮಾಡಲಿಲ್ಲ. ಹೇಳತಕ್ಕಂತಹ ಯುದ್ಧ ನಡೆಯದೆಯೇ ಮಕ್ಕಾ ಮುಸ್ಲಿಮರ ಅಧೀನವಾಯಿತು. ಹ. ಹಮ್‌ಝ(ರ) ಕರುಳು ಜಗಿದು ಉಗುಳಿದ ಅಬೂ ಸುಫ್‌ಯಾನ್‌ರ ಪತ್ನಿ ಹಿಂದ್ ಮತ್ತು ಉಮ್ಮು ಹಬೀಬರ(ರ) ಸಹೋದರ ಮುಆವಿಯ ಮುಂತಾದವರೆಲ್ಲರೂ ಇಸ್ಲಾಮ್ ಸ್ವೀಕರಿಸಿದರು.

## ಉತ್ಕೃಷ್ಟ ಗುಣ

ಧೈರ್ಯ ಸ್ಥೈರ್ಯವು ಉಮ್ಮುಹಬೀಬರ(ರ) ವಿಶಿಷ್ಟ ಗುಣವಾಗಿತ್ತು. ಆಪತ್ಕಾಲದಲ್ಲಿ ಅವರು ಅಧೀರರಾಗದೆ ದೃಢರಾಗಿದ್ದರು. ವಿದೂರ ಅಬಿಸೀನಿಯಾದಲ್ಲಿ ತನ್ನ ಸರ್ವಾವಲಂಬಿ ಯಾಗಿದ್ದ ಪತಿಯು ಧರ್ಮಭ್ರಷ್ಟನಾಗಿ ತನ್ನನ್ನು ದಾರಿ ತಪ್ಪಿಸಲು ಪ್ರಯತ್ನಿಸುತ್ತಿರುವ ವಿಷಮ ಘಟ್ಟದಲ್ಲಿ ಅವರು ಮೇರುಗಿರಿಯಂತೆ ಅಚಲರಾಗಿ ನಿಂತರು. ಭವಿಷ್ಯದ ಭಯಭೀತಿಯಿಲ್ಲದೆ ತನ್ನ ಕುಟುಂಬ ಮತ್ತು ಸಮಾಜದ ಕಠಿಣ ಹಿಂಸೆ ಮರ್ದನಗಳನ್ನು

ಲೆಕ್ಕಿಸದೆ ಅವರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು. ಇವುಗಳಿಂದ ಅವರ ಧೈರ್ಯ ಮತ್ತು ಆತ್ಮಸ್ಥೈರ್ಯವನ್ನು ಊಹಿಸಬಹುದು.

ದೃಢವಿಶ್ವಾಸಿ ಮತ್ತು ಭಕ್ತೆಯಾಗಿದ್ದ ಉಮ್ಮು ಹಬೀಬರು(ರ) ಸುನ್ನತ್‌ಗಳನ್ನು ನಿಷ್ಠೆಯಿಂದ ಪಾಲಿಸುತ್ತಿದ್ದರು. ಅಬೂ ಸುಫ್‌ಯಾನ್ ನಿಧನರಾಗಿ ಮೂರು ದಿನ ಕಳೆದ ಬಳಿಕ ಸ್ವಲ್ಪ ಸುಗಂಧ ದ್ರವ್ಯವನ್ನು ತರಿಸಿ ಮುಖ ಮತ್ತು ಬಟ್ಟೆಗಳಿಗೆ ಸವರಿದರು. ತರುವಾಯ ಅಲ್ಲಿ ಉಪಸ್ಥಿತರಿದ್ದವರೊಡನೆ ಹೇಳಿದರು: "ನನಗೆ ಇದರಲ್ಲೇನೂ ಅಚ್ಚರಿ ಯಾಗಿಲ್ಲ. ಪತಿಯ ಹೊರತು ಇತರ ಸಂಬಂಧಿಕರು ಯಾರಾದರೂ ಮೃತರಾದರೆ ಮೂರು ದಿನ ಶೋಕ ಆಚರಿಸಬೇಕು, ಪತಿಯು ಮೃತಪಟ್ಟರೆ ನಾಲ್ಕು ತಿಂಗಳು ಹತ್ತು ದಿನ ಶೋಕ ಆಚರಿಸಬೇಕೆಂದು ಪ್ರವಾದಿ ತಿಳಿಸಿದ್ದಾರೆ. ಕೇವಲ ಅದನ್ನು ಪಾಲಿಸುವುದಷ್ಟೇ ನನ್ನ ಇಂಗಿತ."

## ಪರಲೋಕ ಯಾತ್ರೆ

ಹಿಜರಿ 44ರಲ್ಲಿ ಹ. ಉಮ್ಮು ಹಬೀಬರು ತನ್ನ 73ನೇ ವಯಸ್ಸಿನಲ್ಲಿ ನಿಧನ ರಾದರು. ಮರಣಕ್ಕಿಂತ ಸ್ವಲ್ಪ ಮುಂಚೆ ಆಯಿಶಾರನ್ನು(ರ) ಬಳಿ ಕರೆದು ಹೀಗೆಂದರು: "ನಾವು ಸವತಿಗಳು. ಒಡನಾಟದಲ್ಲಿ ಹಲವು ಲೋಪದೋಷಗಳು ಬಂದಿರಬಹುದು. ಅವೆಲ್ಲವನ್ನೂ ಕ್ಷಮಿಸಬೇಕು. ನನ್ನ ಪಾಪ ವಿಮೋಚನೆಗಾಗಿ ಅಲ್ಲಾಹನೊಡನೆ ಪ್ರಾರ್ಥಿಸ ಬೇಕು." ಆಯಿಶಾ(ರ) ಪ್ರಾರ್ಥಿಸಿದಾಗ ಉಮ್ಮು ಹಬೀಬ(ರ) ಹೇಳಿದರು: "ನೀವು ನನ್ನ ಮನಸ್ಸನ್ನು ತಂಪುಗೊಳಿಸಿದಿರಿ. ಅಲ್ಲಾಹ್ ನಿಮ್ಮ ಮನಸ್ಸನ್ನೂ ತಂಪುಗೊಳಿಸಲಿ."

ಸಹೋದರ ಮುಆವಿಯರ(ರ) ಆಡಳಿತ ಕಾಲದಲ್ಲಿ ಉಮ್ಮು ಹಬೀಬ(ರ) ನಿಧನರಾದರು. ಜನ್ನತ್ತುಲ್ ಬಖೀಯಲ್ಲಿ ದಫನ ಮಾಡಲಾಯಿತು. ಅವರ ಗೋರಿಯು ಡಮಾಸ್ಕಸ್‌ನಲ್ಲಿದೆಯೆಂಬ ಅಭಿಪ್ರಾಯವೂ ಇದೆ. ಅಲ್ಲಿನ ಒಂದು ಗೋರಿಯ ಮೇಲೆ ಹೀಗೆ ಉಲ್ಲೇಖಿತವಾಗಿದೆಯಂತೆ: "ಇಲ್ಲಿ ಪ್ರವಾದಿ ಪತ್ನಿ ಸಯ್ಯಿದಃ ಉಮ್ಮು ಹಬೀಬ(ರ) ಅಂತಿಮ ವಿಶ್ರಾಂತಿ ಪಡೆಯುತ್ತಿದ್ದಾರೆ."

□□□

# ಹಝ್ರತ್ ಸಫಿಯ್ಯಃ(ರ)

ಬನೂ ನಝೀರ್ ಮತ್ತು ಬನೂ ಕುರೈಝುಗಳು ಎರಡು ಪ್ರಸಿದ್ಧ ಯಹೂದಿ ಗೋತ್ರಗಳಾಗಿದ್ದುವು. ಬನೂ ನಝೀರ್ ಗೋತ್ರಕ್ಕೆ ಹುಯಯ್ಯ್ ಬಿನ್ ಅಖ್ತಬ್ ನಾಯಕರಾಗಿದ್ದರು. ಬನೂ ಕುರೈಝು ಗೋತ್ರದ ನಾಯಕ ಸಮೂಈಲ್‌ರ ಮಗಳು ಸರ್ರಾರನ್ನು ಹುಯಯ್ಯ್ ವಿವಾಹವಾಗಿದ್ದರು. ಬನೂ ನಝೀರ್ ಗೋತ್ರವು ಪ್ರವಾದಿ ಹಾರೂನ್‌ರ(ಅ) ವಂಶಪರಂಪರೆಗೆ ಸೇರಿತ್ತು. ಆದ್ದರಿಂದಲೇ ಯಹೂದಿಯರೆಲ್ಲರೂ ಬನೂ ನಝೀರ್ ಗೋತ್ರದವರನ್ನು ಬಹಳವಾಗಿ ಗೌರವಿಸುತ್ತಿದ್ದರು.

ಹುಯಯ್ಯ್ ಮತ್ತು ಸರ್ರರಿಗೆ ಝೈನಬ್ ಎಂಬ ಹೆಸರಿನ ಹೆಣ್ಣು ಮಗು ಹುಟ್ಟಿತು. ತರುವಾಯ ಝೈನಬ್‌ರು ಸಫಿಯ್ಯ ಎಂಬ ಹೆಸರಿನಿಂದ ಖ್ಯಾತರಾದರು. ಸಫಿಯ್ಯರು ಆ ಉನ್ನತ ಯಹೂದಿ ಕುಟುಂಬದ ಕಣ್ಮಣಿಯಾಗಿದ್ದರು. ನಾಯಕನ ಪುತ್ರಿಯೆಂಬ ಅಭಿಮಾನದಿಂದ ಯಹೂದಿಯರೆಲ್ಲರೂ ಸಫಿಯ್ಯರನ್ನು ಬಹಳವಾಗಿ ಪ್ರೀತಿಸುತ್ತಿದ್ದರು.

ಹದಿನಾಲ್ಕನೇ ವಯಸ್ಸಿನಲ್ಲಿ ಸಫಿಯ್ಯರನ್ನು ವಿವಾಹ ಮಾಡಿಕೊಟ್ಟರು. ಯುವಕವಿ ಮತ್ತು ಪರಾಕ್ರಮಿಯಾಗಿದ್ದ ಸಲಾಮ್ ಬಿನ್ ಮಶ್ಕ್ ಅವರ ಪತಿ. ಆದರೆ ಆ ದಾಂಪತ್ಯ ಜೀವನವು ಹೆಚ್ಚು ಕಾಲ ಮುಂದುವರಿಯಲಿಲ್ಲ. ಕಾರಣಾಂತರದಿಂದ ದಂಪತಿಗಳಲ್ಲಿ ಒಡಕುಂಟಾಯಿತು. ವಿರಸ ಹೆಚ್ಚಿ ವಿವಾಹ ವಿಚ್ಛೇದನ ಅನಿವಾರ್ಯವಾಯಿತು.

ವಿವಾಹ ವಿಚ್ಛೇದನದ ಬಳಿಕ ಹುಯಯ್ಯ್ ಮಗಳನ್ನು ಕಿನಾನ್ ಬಿನ್ ಅಬಿಲ್ ಹಖೈಖ್‌ರಿಗೆ ವಿವಾಹ ಮಾಡಿಕೊಟ್ಟರು. ಕಿನಾನರೂ ಕವಿ ಮತ್ತು ಪರಾಕ್ರಮಿಯಾಗಿದ್ದರು.

### ಗಡೀಪಾರು

ಬನೂ ನಝೀರ್ ಗೋತ್ರದವರು ಮದೀನದ ಪರಿಸರ ಪ್ರದೇಶದಲ್ಲಿ ವಾಸವಾಗಿದ್ದರು. ಪ್ರವಾದಿವರ್ಯರು(ಸ) ಮದೀನಾಕ್ಕೆ ಬಂದಾಗ ಯಹೂದಿಯರೊಡನೆ ಒಪ್ಪಂದ ಮಾಡಿದರು. ಆದರೆ ಒಪ್ಪಂದವನ್ನು ಮುರಿಯುವುದೇ ಯಹೂದಿಯರ ಹವ್ಯಾಸವಾಗಿತ್ತು. ಬನೂ ನಝೀರ್ ಗೋತ್ರದವರು ಮದೀನಾದ ಮುನಾಫಿಕರ ಮತ್ತು ಮಕ್ಕಾದ ಮುಶ್ರಿಕರ ಪ್ರೇರಣೆಯಿಂದ ಪ್ರವಾದಿವರ್ಯರನ್ನು(ಸ) ಸಂಚಿನಿಂದ ಕೊಲ್ಲಲು ಪ್ರಯತ್ನಿಸಿದರು. ಅವರ

ಒಳಸಂಚು ವಿಫಲವಾಯಿತು. ಒಪ್ಪಂದಕ್ಕೆ ವಿರುದ್ಧವಾಗಿ ಅವರು ಪ್ರವಾದಿಯ(ಸ) ಮೇಲೆ ಯುದ್ಧ ಸಾರಿದರು. ಪ್ರವಾದಿ(ಸ) ಅವರನ್ನು ಸೋಲಿಸಿ ಮದೀನದಿಂದ ಇನ್ನೂರು ಮೈಲು ದೂರದಲ್ಲಿರುವ ಖೈಬರ್‌ಗೆ ಗಡೀಪಾರು ಮಾಡಿದರು. ಚರಸೊತ್ತುಗಳನ್ನು ಕೊಂಡೊಯ್ಯಲು ಪ್ರವಾದಿ(ಸ) ಅನುಮತಿ ನೀಡಿದ್ದರು. ಉತ್ತಮ ಕಿಟಿಕಿ ಬಾಗಿಲುಗಳನ್ನೂ ಅವರು ಕಿತ್ತೊಯ್ದರು. ಮದೀನದಿಂದ ಖೈಬರ್‌ಗೆ ತೆರಳುವ ಅವರ ಈ ಯಾನವು ಮದುವೆಯ ಮೆರವಣಿಗೆಯನ್ನು ಜ್ಞಾಪಿಸುತ್ತಿತ್ತು. ಬೇಂಡು, ವಾದ್ಯ, ಗಾಯನ, ನೃತ್ಯವೆಲ್ಲವೂ ಅದರಲ್ಲಿತ್ತು. ಅಂದು ಸಫಿಯ್ಯಾರಿಗೆ ಸುಮಾರು 14 ವರ್ಷ ಪ್ರಾಯವಾಗಿರಬಹುದು.

ಖೈಬರ್ ಯಹೂದಿಯರ ಕೇಂದ್ರವಾಗಿದ್ದಿತು. ಗಡೀಪಾರುಗೊಳಿಸಲಾದ ಬನೂನಝೀರ್ ಗೋತ್ರದವರಿಗೆ ಅಲ್ಲಿ ಭವ್ಯ ಸ್ವಾಗತ ದೊರೆಯಿತು. ಬನೂ ನಝೀರ್ ಗೋತ್ರದ ನಾಯಕ ಹಾಗೂ ಇಸ್ಲಾಮಿನ ಕಡುವೈರಿಯಾಗಿದ್ದ ಹುಯಯ್ಯ್ ಬಿನ್ ಅಖ್ತಬ್, ಖೈಬರ್‌ನಲ್ಲಿರುವ ಎಲ್ಲ ಯಹೂದಿಯರ ನಾಯಕರಾದರು.

ಖೈಬರ್‌ನಿಂದ ಗಡೀಪಾರುಗೊಳಿಸಲ್ಪಟ್ಟ ಯಹೂದಿಯರು, ತಾವು ಮುಸ್ಲಿಮರೊಡನೆ ಯುದ್ಧ ಮಾಡುವುದಿಲ್ಲ, ಮುಸ್ಲಿಮರ ವೈರಿಗಳಿಗೆ ನೆರವಾಗುವುದಿಲ್ಲವೆಂಬ ವಾಗ್ದಾನ ನೀಡಿದ್ದರು. ಆ ವಾಗ್ದಾನವನ್ನು ಉಲ್ಲಂಘಿಸಿ ಸಫಿಯ್ಯರ ತಂದೆ ಅಖ್ತಬ್‌ರು ಕುರೈಶರನ್ನು ಯುದ್ಧಕ್ಕೆ ಪ್ರೇರೇಪಿಸಿದರು. ಪ್ರವಾದಿವರ್ಯರು(ಸ) ಒಪ್ಪಂದ ಮಾಡಿಕೊಂಡಿದ್ದ ಬನೂ ಕುರೈಝದವರನ್ನೂ ಕಂದಕ್ ಯುದ್ಧದಲ್ಲಿ ಪಾಲ್ಗೊಳಿಸಿದರು. ಕಂದಕ್ ಯುದ್ಧದ ಬಳಿಕ ನಡೆದ ಸಂಘರ್ಷದಲ್ಲಿ ಸೋತ ಬನೂ ಕುರೈಝದವರೊಂದಿಗೆ ಹುಯಯ್ಯ್‌ರನ್ನೂ ಪ್ರವಾದಿವರ್ಯರು(ಸ) ಮರಣ ದಂಡನೆಗೆ ಗುರಿಪಡಿಸಿದರು.

## ಖೈಬರ್ ಯುದ್ಧ

ಖೈಬರ್ ಯಹೂದಿಯರು ಮದೀನವನ್ನು ಆಕ್ರಮಿಸಲಿಕ್ಕಾಗಿ ಭರದ ಸಿದ್ಧತೆ ನಡೆಸುತ್ತಿರುವರೆಂದು ಪ್ರವಾದಿವರ್ಯರಿಗೆ(ಸ) ಸುದ್ದಿ ಬಂತು. ಯಹೂದಿಯರೊಡನೆ ಶಾಂತಿ ಮಾತುಕತೆ ನಡೆಸಲು ಅಬ್ದುಲ್ಲಾ ಬಿನ್ ರವಾಹ್‌ರನ್ನು(ರ) ಖೈಬರ್‌ಗೆ ಕಳುಹಿಸಿದರು. ಆದರೆ ಅದರಿಂದ ಪ್ರಯೋಜನವಾಗಲಿಲ್ಲ.

ಖೈಬರ್‌ನ ನೆರೆ ಪ್ರದೇಶವಾಗಿದ್ದ ಗಫ್ಫಾನ್‌ನ ದೊಡ್ಡ ಗೋತ್ರದೊಡನೆ ಯಹೂದಿಯರು ಒಪ್ಪಂದ ಮಾಡಿಕೊಂಡರು. ಯುದ್ಧದಲ್ಲಿ ಮುಸ್ಲಿಮರನ್ನು ಸೋಲಿಸಲು ನೆರವಾದರೆ ಮದೀನಾದ ಫಲಸಮೃದ್ಧ ಖರ್ಜೂರ ತೋಟಗಳನ್ನು ಅರ್ಧಾಂಶವನ್ನು ಅವರಿಗೆ ನೀಡುವುದಾಗಿ ಮಾತುಕೊಟ್ಟರು. ಗಫ್ಫಾನ್‌ನವರು ಯಹೂದಿಯರೊಡನೆ ಯುದ್ಧದಲ್ಲಿ ಭಾಗವಹಿಸುವ ಮುನ್ಸೂಚನೆಯೆಂಬಂತೆ ಅವರು ಮದೀನದ ಗಡಿ ಪ್ರದೇಶಗಳಲ್ಲಿ

ದರೋಡೆ ಪ್ರಾರಂಭಿಸಿದರು. ಪ್ರವಾದಿವರ್ಯರ(ಸ) ಇಪ್ಪತ್ತು ಒಂಟೆಗಳನ್ನು ಅಪಹರಿಸಿದರು. ಅದಲ್ಲದೆ ಅವುಗಳನ್ನು ಮೇಯಿಸುತ್ತಿದ್ದ ಅಬೂದರ್‌ರ ಮಗನನ್ನು ವಧಿಸಿ, ಅವರ ಪತ್ನಿಯನ್ನು ಬಲಾತ್ಕಾರವಾಗಿ ಎಳೆದೊಯ್ದರು.

ಪ್ರವಾದಿವರ್ಯರು(ಸ) 1600 ಯೋಧರೊಂದಿಗೆ ಮದೀನಾದಿಂದ ಹೊರಟರು. ಅದೊಂದು ಪ್ರಭಾತದಲ್ಲಿ ಮುಸ್ಲಿಮರು ಖೈಬರ್ ಪ್ರವೇಶಿಸಿದರು. ಖೈಬರ್‌ನಲ್ಲಿ ಆರು ಸುಭದ್ರ ಕೋಟೆಗಳಿದ್ದುವು. ಎಷ್ಟೇ ಸಾಹಸಪಟ್ಟರೂ ಮುಸ್ಲಿಮರಿಗೆ ಅದನ್ನು ವಶಪಡಿಸಲಸಾಧ್ಯವೆಂದು ಭಾವಿಸಿ ಯಹೂದಿಯರು ಒಪ್ಪಂದಕ್ಕೆ ನಿಲ್ಲದೆ ಬಾಣಗಳ ಸುರಿಮಳೆಯಾರಂಭಿಸಿದರು. ಮುಸ್ಲಿಮರು ಪ್ರತ್ಯಾಕ್ರಮಣ ಮಾಡಿದರು. ಯಹೂದಿಯರ ಲೆಕ್ಕಾಚಾರ ತಲೆಕೆಳಗಾಯಿತು. ತೀವ್ರ ಹೋರಾಟದ ಬಳಿಕ ವೈರಿಗಳ ಪ್ರಬಲ ಕೋಟೆಗಳು ಮುಸ್ಲಿಮರ ಅಧೀನವಾದುವು.

## ವಿಶಿಷ್ಟ ಸೊತ್ತು

ಯುದ್ಧ ಕೈದಿಗಳನ್ನೂ ಯುದ್ಧ ಸಂಪತ್ತನ್ನೂ ಪ್ರವಾದಿವರ್ಯರ(ಸ) ಮುಂದೆ ತರಲಾಯಿತು. ಬಿಲಾಲ್‌ರವರು(ರ) ಸಫಿಯ್ಯ ಮತ್ತು ಆಕೆಯ ಚಿಕ್ಕಪ್ಪನ ಮಗಳನ್ನೂ ಕರೆ ತಂದರು. ದಾರಿಯಲ್ಲಿ ಸಫಿಯ್ಯರು ಪತಿ ಮತ್ತು ಸಂಬಂಧಿಕರ ಕಳೇಬರಗಳನ್ನೂ ನೋಡಿದರು. ತಾಳ್ಮೆ ಮತ್ತು ಆತ್ಮಸಂಯಮದ ಅದಮ್ಯ ನಿಟ್ಟುಸಿರಿನ ವಿನಾ ಅವರು ಚಕಾರವೆತ್ತಲಿಲ್ಲ. ಆದರೆ ಜೊತೆಗಾರ್ತಿ ಎದೆ ಬಡಿದು ಅಳಲಾರಂಭಿಸಿದಳು. ಪ್ರವಾದಿ ವರ್ಯರ(ಸ) ಸನ್ನಿಧಿಗೆ ತಲಪಿದಾಗ ಸಫಿಯ್ಯ(ರ) ಸ್ವಲ್ಪ ಸರಿದು ನಿಂತರು. ಇನ್ನೋರ್ವ ಸ್ತ್ರೀಯು ಹಿಂದಿನಂತೆಯೇ ಎದೆಬಡಿದು ಚೀರುತ್ತಿದ್ದರು. ಇದನ್ನು ನೋಡಿದ ಪ್ರವಾದಿ ವರ್ಯರು(ಸ) ಬಿಲಾಲ್‌ರನ್ನು ಪ್ರಶ್ನಿಸಿದರು: "ಬಿಲಾಲ್, ನೀವು ಬಹಳ ಕಠಿಣ ಹೃದಯರು. ಈ ಸ್ತ್ರೀಯರನ್ನು ಅವರ ಪತಿಯಂದಿರು ಮತ್ತು ಸಂಬಂಧಿಕರು ಮರಣ ಹೊಂದಿದ ಸ್ಥಳದಿಂದಲೇ ಕರೆತರಬೇಕಾಗಿತ್ತೇ?"

ಸಮರಾರ್ಜಿತ ಸಂಪತ್ತಿನಲ್ಲಿ ನಾಯಕನಿಗೆ ನೀಡುವ ವಿಶಿಷ್ಟ ಪಾಲನ್ನು 'ಸಫಿಯ್ಯ' ಎಂದು ಕರೆಯಲಾಗುತ್ತದೆ. ಈ ಯುದ್ಧದಲ್ಲಿ ದೊರೆತ ವಿಶಿಷ್ಟ 'ಸಂಪತ್ತು' ಎಂಬ ನೆಲೆಯಲ್ಲಿ ಸಫಿಯ್ಯರಿಗೆ ಆ ನಾಮ ದೊರೆಯಿತು. ಅವರ ಹೆಸರು ಝೈನಬ್ ಎಂದಿತ್ತೆಂದು ಈ ಹಿಂದೆ ಹೇಳಿದೆಯಲ್ಲವೇ. ಯುದ್ಧ ಕೈದಿಗಳೆಲ್ಲರನ್ನು ಒಂದೆಡೆ ಸೇರಿಸಿದಾಗ, ದಹ್ಯತುಲ್ ಕಲ್ಬ್(ರ) ಪ್ರವಾದಿಯ ಬಳಿ ಬಂದು ಯುದ್ಧ ಕೈದಿಗಳಲ್ಲಿ ಓರ್ವಳನ್ನು ತನಗೆ ನೀಡಬೇಕೆಂದು ವಿನಂತಿಸಿದರು. ಯಾವಳಾದರೊಬ್ಬಳನ್ನು ಸ್ವೀಕರಿಸುವಂತೆ ಪ್ರವಾದಿ(ಸ) ಒಪ್ಪಿಗೆ ನೀಡಿದರು. ಅವರು ಸಫಿಯ್ಯರನ್ನು ಆರಿಸಿದರು. "ಸಫಿಯ್ಯರು ಬನೂ ನಝೀರ್ ಗೋತ್ರದ ನಾಯಕನ ಮಗಳಾಗಿರುವುದರಿಂದ ನಿಮ್ಮ ವಿನಾ ಅನ್ಯರಿಗೆ ಯೋಗ್ಯವಲ್ಲ" ಎಂದು ಸಹಾಬಿಗಳು ಪ್ರವಾದಿವರ್ಯರಿಗೆ(ಸ) ತಿಳಿಸಿದರು.

ಅರಬರ ಸಂಪ್ರದಾಯದಂತೆ ನಾಯಕನ ಪುತ್ರಿಯು ನಾಯಕನ ವಿನಾ ಅನ್ಯರನ್ನು ವಿವಾಹವಾಗುವುದಿಲ್ಲ. ಜನಸಾಮಾನ್ಯರು ವಿವಾಹವಾದರೆ ಅಳಿಸಲಾಗದ ಕಳಂಕವುಂಟಾ ಗುತ್ತದೆ. ಅಂತಹ ವಿವಾಹವು ಸುರಕ್ಷಿತವಾಗಿರಲಾರದು. ಉನ್ನತ ಮಟ್ಟದಲ್ಲಿ ಜೀವಿಸುತ್ತಿದ್ದ ಸಫಿಯ್ಯರು ಓರ್ವ ಗುಲಾಮಳಾಗಿ ಜೀವಿಸುವುದು ಇಸ್ಲಾಮೀ ನೀತಿಗೆ ಭೂಷಣವಲ್ಲ. ಆದ್ದರಿಂದ ಸಫಿಯ್ಯರನ್ನು ವಿಮೋಚನೆಗೊಳಿಸಿ ವಿವಾಹವಾಗುವುದು ಸೂಕ್ತವೆಂದು ಪ್ರವಾದಿ(ಸ) ನಿರ್ಧರಿಸಿದರು.

ದಹ್ಯತುಲ್ ಕಲ್ಬ್‌ರಿಗೆ(ರ) ಇನ್ನೋರ್ವಳು ಕೈದಿಯನ್ನು ನೀಡಿದರು. ಸಫಿಯ್ಯರನ್ನು ಸ್ವತಂತ್ರಗೊಳಿಸಿದರು. ಸಫಿಯ್ಯರಿಗೆ ಇಚ್ಛೆಯಿದ್ದರೆ ಸ್ವಂತ ಮನೆಗೆ ಮರಳುವ ಬಗ್ಗೆ ಯಾವ ಅಡ್ಡಿಯೂ ಇಲ್ಲವೆಂದು ವಿದಿತಪಡಿಸಿದರು. ವಿವೇಕಮತಿಯಾದ ಸಫಿಯ್ಯರು ಮನೆಗೆ ಹೋಗುವ ಬದಲಾಗಿ ಇಸ್ಲಾಮ್ ಸ್ವೀಕರಿಸಿ ಪ್ರವಾದಿಯ(ಸ) ಪತ್ನಿಯೆಂಬ ಪದವನ್ನು ಅಲಂಕರಿಸಲೊಪ್ಪಿದರು. ಹೀಗೆ ಸಫಿಯ್ಯರ ಸಂಪೂರ್ಣ ಒಪ್ಪಿಗೆಯಿಂದ ಪ್ರವಾದಿ(ಸ) ಅವರನ್ನು ವಿವಾಹವಾದರು.

## ಯಹೂದಿ ಸ್ತ್ರೀಯ ಒಳಸಂಚು

ವಿಜಯದ ಬಳಿಕ ಪ್ರವಾದಿ(ಸ) ಕೆಲವು ದಿನ ಖೈಬರ್‌ನಲ್ಲಿಯೇ ಉಳಕೊಂಡರು. ಉಮ್ಮು ಸುಲೈಮರ ಬಿಡಾರದಲ್ಲಿ ಸಫಿಯ್ಯರು(ರ) ತಂಗಿದ್ದರು. ತನ್ಮಧ್ಯೆ ಸಲಾಮ್ ಬಿನ್ ಮಶ್ಕ್‌ರ ಪತ್ನಿ ಝೈನಬ್‌ರು ಪ್ರವಾದಿಯವರನ್ನು(ಸ) ಒಂದು ಔತಣಕ್ಕೆ ಆಮಂತ್ರಿಸಿ ವಿಷ ನೀಡಿದರು. ಪ್ರವಾದಿಯವರು(ಸ) ಆ ಮಹಿಳೆಯನ್ನು ಪ್ರಥಮತಃ ಕ್ಷಮಿಸಿದರು. ವಿಷ ಬಾಧೆಯಿಂದ ಬುಶ್ಶೈರ್ ಬಿನ್ ಖರಾಲ್‌ರು ಮೃತಪಟ್ಟಾಗ ಶಿಕ್ಷಾಕ್ರಮದಂತೆ ಆಕೆಯನ್ನು ಮರಣದಂಡನೆಗೆ ಗುರಿಪಡಿಸಿದರು. ಸಫಿಯ್ಯರನ್ನು ವಿವಾಹ ವಿಚ್ಛೇದನ ಮಾಡಿದ ಸಲಾಮ್ ಬಿನ್ ಮಶ್ಕ್‌ರ ದ್ವಿತೀಯ ಪತ್ನಿಯೇ ಈ ಝೈನಬ್ ಎಂಬುದು ಗಮನಾರ್ಹ. ಇದು ಪ್ರವಾದಿಯವರನ್ನು(ಸ) ಮೋಸದಿಂದ ಕೊಲ್ಲುವ ಯಹೂದಿಯರ ಇನ್ನೊಂದು ಹೂಟವಾಗಿತ್ತು.

## ಮಧುಚಂದ್ರ ಮತ್ತು ಔತಣ

ಕೆಲವಾರು ದಿನಗಳ ಬಳಿಕ ಪ್ರವಾದಿವರ್ಯರು(ಸ) ಸಹಾಬರೊಂದಿಗೆ ಖೈಬರ್‌ಗೆ ಮರಳಿದರು. ದಾರಿ ಮಧ್ಯದಲ್ಲಿ ಒಂದೆಡೆ ಮಧುಚಂದ್ರ ಆಚರಿಸಿದರು. ಜೀವನವನ್ನು ಸಂಪೂರ್ಣವಾಗಿ ತ್ಯಾಗ ಮತ್ತು ಹೋರಾಟವನ್ನಾಗಿ ಮಾಡಿದವರಿಗೆ ಅದಕ್ಕಾಗಿ ರತ್ನಮಂದಿರಗಳ ಅಗತ್ಯವಿಲ್ಲ. ಮಧುಚಂದ್ರದೊಂದಿಗೆ ಔತಣವೂ ಬೇಕಷ್ಟೆ. ಸಹಾಬಿಗಳ ಬಳಿಯಿರುವ ಆಹಾರ ಪದಾರ್ಥಗಳನ್ನು ಸಂಗ್ರಹಿಸುವಂತೆ ಪ್ರವಾದಿ(ಸ) ಆಜ್ಞೆ ನೀಡಿದರು. ಹೀಗೆ ಶೇಖರ

ವಾದ ಖರ್ಜೂರ, ಕೆನೆ ಮತ್ತು ತುಪ್ಪವನ್ನು ಬೆರೆಸಿ ಒಂದು ತಿಂಡಿ ತಯಾರಿಸಿದರು. ಎಲ್ಲರೂ ತಿಂದರು. ಇದು ಸಫಿಯ್ಯರನ್ನು ವಿವಾಹವಾದಾಗ ಪ್ರವಾದಿವರ್ಯರು(ಸ) ನೀಡಿದ ಔತಣ.

## ಯಹೂದಿ ಹೆಣ್ಣು

ಖೈಬರ್ ವಿಜಯದಿಂದ ಮರಳುವ ಪ್ರವಾದಿ(ಸ) ಮತ್ತು ಸಹಾಬಿಗಳನ್ನು ಸ್ವಾಗತಿಸಲಿಕ್ಕಾಗಿ ಮದೀನದ ಸ್ತ್ರೀಯರು ಕಾದು ನಿಂತಿದ್ದರು. ಸ್ವಪತಿಯರನ್ನು ನೋಡುವ ಕಾತರವೂ ಇದೆ. ಅವರು ಹೀಗೆ ಕಾತರದಿಂದ ಕಾಯುತ್ತಿರುವಾಗಲೇ ಪ್ರವಾದಿಯವರು(ಸ) ಹೊಸ ಪತ್ನಿಯೊಂದಿಗೆ ಆಗಮಿಸುವರೆಂಬ ಸುದ್ದಿಯೂ ಮುಟ್ಟಿತು. ಅವರನ್ನು ನೋಡ ಬೇಕೆಂಬ ಕುತೂಹಲವೂ ಸೇರಿಕೊಂಡಿತು. ಆದರೆ ಆಕೆ ಓರ್ವ ಯಹೂದಿ ಸ್ತ್ರೀಯೆಂಬ ತಾತ್ಸಾರ ಭಾವನೆ! ಅವರು ಯಹೂದಿಯರ ಬಗ್ಗೆ ಚೆನ್ನಾಗಿ ಅರಿತಿದ್ದರು. ಅವರು ನೀಚರು ಮತ್ತು ದ್ರೋಹಿಗಳು. ಲೌಕಿಕತೆಗಾಗಿ ಧರ್ಮವನ್ನು ಮಾರಿದವರು. ಹೀಗೆ ಹಲವು ದುರ್ವಿಚಾರಗಳು ಆ ಹೃದಯಗಳಲ್ಲಿ ಮೂಡಿ ಮರೆಯಾದುವು.

ಸಫಿಯ್ಯರು ಒಂಟೆಯ ಮೇಲೆ ಪ್ರವಾದಿಯ ಹಿಂಬದಿಯಲ್ಲಿ ಕುಳಿತು ಸಂಚರಿಸುತ್ತಿದ್ದರು. ಮದೀನ ತಲಪುವ ಹುಮ್ಮಸ್ಸಿನಿಂದ ಎಲ್ಲರೂ ಪಯಣದ ವೇಗವನ್ನು ಹೆಚ್ಚಿಸಿದರು. ಪ್ರವಾದಿಯವರೂ(ಸ) ಒಂಟೆಯನ್ನು ಓಡಿಸಿದರು. ಓಡಿಸಿದ ರಭಸಕ್ಕೆ ಒಂಟೆಯ ಹೆಜ್ಜೆ ತಪ್ಪಿ ಸ್ವಲ್ಪ ಮುಗ್ಗರಿಸಿದಂತಾಯಿತು. ಪ್ರವಾದಿ(ಸ) ಮತ್ತು ಸಫಿಯ್ಯಾ(ರ) ವಿರುದ್ಧ ಪಾರ್ಶ್ವಗಳಿಗೆ ಉರುಳಿ ಬಿದ್ದರು. ಭಾಗ್ಯವಶಾತ್, ಏನೂ ಅಪಾಯವಾಗಲಿಲ್ಲ. ಪ್ರವಾದಿ(ಸ) ಲಗುಬಗೆಯಿಂದ ಎದ್ದು ನಿಂತರು. ಸಫಿಯ್ಯರನ್ನು ಎತ್ತಿ ನಿಲ್ಲಿಸಿದರು. ಆ ಹೆಂಗಸರಿಗೆ ಬಹಳ ಹೆದರಿಕೆಯಾಗಿತ್ತು. ಏನೂ ಆಗದಿರುವ ಬಗ್ಗೆ ಸಂತೋಷವಾಯಿತು. ಆದರೆ ಅಪಶಕುನ 'ಯಹೂದಿ ಹೆಣ್ಣನ್ನು ಅಲ್ಲಾಹ್ ಅನುಗ್ರಹಿಸದಿರಲಿ!' ಎಂದರು.

ಓರ್ವ ಅನ್ಸಾರಿಯ ಮನೆಯಲ್ಲಿ ಪ್ರವಾದಿವರ್ಯರು(ಸ) ಸಫಿಯ್ಯರನ್ನು ತಂಗಿಸಿದರು. ಅನೇಕ ಸ್ತ್ರೀಯರು ಅವರ ಭೇಟಿಗಾಗಿ ಆಗಮಿಸಿದ್ದರು. ಆಯಿಶಾ(ರ), ಹಫ್ಸ(ರ) ಮತ್ತು ಜುವೈರಿಯಾರೂ(ರ) ಸಫಿಯ್ಯರ(ರ) ಸಂದರ್ಶನಕ್ಕೆ ಬಂದರು. ಓರ್ವ ಹೊಸ ಗೆಳತಿಯು ಆಗಮಿಸಿದ್ದಾಳೆ. ನೋಡದಿದ್ದರಾದೀತೇ? ಮರಳಿ ಬರುವಾಗ ಪ್ರವಾದಿಯವರು(ಸ) ಆಯಿಶಾರೊಡನೆ(ರ) ಪ್ರಶ್ನಿಸಿದರು: 'ಸಫಿಯ್ಯರ(ರ) ಒಡನಾಟ ಹಿಡಿಸಿತೇ?' 'ಹೂಂ, ಯಹೂದಿ ಹೆಣ್ಣು' ಎಂದುತ್ತರಿಸಿದರು. ಸಫಿಯ್ಯ ಈಗ ಇಸ್ಲಾಮ್ ಸ್ವೀಕರಿಸಿದ್ದು ಇನ್ನು ಮುಂದೆ ಅಂತಹ ಮಾತು ಹೇಳಬಾರದೆಂದು ಪ್ರವಾದಿ(ಸ) ಉಪದೇಶಿಸಿದರು.

ಫಾತಿಮರೂ ಸಫಿಯ್ಯರನ್ನು ಭೇಟಿಯಾದರು. ಅವರು ಫಾತಿಮರಿಗೆ(ರ) ಕೆಲವು ಆಭರಣಗಳನ್ನು ನೀಡಿದರು. ಎಲ್ಲರೊಡನೆಯೂ ಸ್ನೇಹ ಮತ್ತು ವಿನಯದಿಂದಲೇ

ಸಫಿಯ್ಯ(ರ) ವರ್ತಿಸಿದರು. ವಯಸ್ಸು ಕೇವಲ ಹದಿನೇಳಾಗಿದ್ದರೂ ಪಕ್ವಮತಿಯಾದ ಗೃಹಿಣಿಯ ನಡವಳಿಕೆಯಿತ್ತು.

## ಸ್ವಪ್ನ

ಸಫಿಯ್ಯರ(ರ) ಮುಖದಲ್ಲಿ ಕೆಲವು ಕಲೆಗಳಿದ್ದುವು. ಪ್ರವಾದಿ(ಸ) ಆ ಬಗ್ಗೆ ವಿಚಾರಿಸಿದಾಗ ಸಫಿಯ್ಯರು ಹೇಳಿದರು: "ಆಕಾಶದಿಂದ ಚಂದ್ರನು ಉದುರಿ ನನ್ನ ಮಡಿಲಿಗೆ ಬಿದ್ದ ಸ್ವಪ್ನವನ್ನು ಕಂಡಿದ್ದೆ. ನಾನು ಅದನ್ನು ತಂದೆಗೆ ತಿಳಿಸಿದೆ. ಆಗ ಅವರಿಗೆ ತುಂಬಾ ಕೋಪ ಬಂತು. ನಿನಗೆ ಅರಬರ ರಾಣಿಯಾಗಿ ಲೋಕದಲ್ಲಿ ಮೆರೆಯುವ ಬಯಕೆಯೇ? ಎನ್ನುತ್ತಾ ನನ್ನ ಮುಖಕ್ಕೆ ಬಲವಾಗಿ ಹೊಡೆದರು. ಇದು ಆ ಗಾಯದ ಕಲೆ."

ಮನಸ್ಸು ಗುಪ್ತ ರಹಸ್ಯಗಳ ಆಗರ. ಅಸಂಖ್ಯಾತ ವಿಚಾರ, ವಿಕಾರ ಭಾವನೆಗಳು ಸುಪ್ತ ಮನಸ್ಸಿನಲ್ಲಿ ತಂಗಿರುತ್ತವೆ. ಕೆಲವೊಮ್ಮೆ ಅವು ಸ್ವಪ್ನ ರೂಪದಲ್ಲಿ ಪ್ರತ್ಯಕ್ಷ ವಾಗುತ್ತವೆ. ಮಗಳ ಸ್ವಪ್ನ ವೃತ್ತಾಂತವನ್ನು ತಿಳಿದ ತಂದೆಯು ಈಕೆಯು ಮುಹಮ್ಮದರ ಪತ್ನಿಯಾಗುವ ಬಯಕೆ ಹೊಂದಿರುವಳೆಂಬುದನ್ನು ಸ್ವಾಭಾವಿಕವಾಗಿ ಊಹಿಸಿದ್ದರು.

## ಸವತಿ ಮತ್ಸರ

ಒಮ್ಮೆ ಝೈನಬ್ ಮತ್ತು ಸಫಿಯ್ಯರು ಪ್ರವಾದಿಯೊಂದಿಗೆ ಪಯಣ ಹೊರಟಿದ್ದರು. ದಾರಿಯಲ್ಲಿ ಸಫಿಯ್ಯರ(ರ) ಒಂಟೆಗೆ ರೋಗ ತಗಲಿತು. ಝೈನಬ್‌ರ(ರ) ಬಳಿ ಒಂದಕ್ಕಿಂತ ಹೆಚ್ಚು ಒಂಟೆಗಳಿದ್ದುವು. ಒಂದು ಒಂಟೆಯನ್ನು ಸಫಿಯ್ಯರಿಗೆ(ರ) ನೀಡುವಂತೆ ಪ್ರವಾದಿ ಯವರು(ಸ) ಝೈನಬ್‌ರಿಗೆ ಆದೇಶಿಸಿದರು. ಝೈನಬ್‌ರು(ರ) ಔದಾರ್ಯದ ಪ್ರತೀಕ ವಾಗಿದ್ದರೂ ಸವತಿ ಮತ್ಸರಕ್ಕೆ ಸಿಲುಕಿದರು. "ಆ ಯಹೂದಿ ಸ್ತ್ರೀಗೆ ನನ್ನ ಒಂಟೆಯನ್ನು ಕೊಡಬೇಕೇ? ಆಕೆ ಬರಲಿ." ಈ ಮಾತಿನಿಂದ ಪ್ರವಾದಿ(ಸ) ತುಂಬಾ ಕುಪಿತರಾದರು. ಹಲವು ದಿನಗಳ ತನಕ ಝೈನಬ್‌ರೊಡನೆ(ರ) ಮಾತನಾಡುವುದನ್ನೇ ನಿಲ್ಲಿಸಿದರು. ಕೊನೆಗೆ ಆಯಿಶಾರು(ರ) ಮಧ್ಯಸ್ತಿಕೆ ವಹಿಸಿ ಝೈನಬ್‌ರಿಗೆ(ರ) ಕ್ಷಮೆ ಕೊಡಿಸಿದರು.

ಒಂದು ದಿನ ಆಯಿಶಾ ಮತ್ತು ಝೈನಬ್‌ರು ಸಫಿಯ್ಯರನ್ನು(ರ) ಗೇಲಿ ಮಾಡುತ್ತಾ "ಪ್ರವಾದಿಯ ಪತ್ನಿಯರಲ್ಲಿ ನಮಗೆ ಹೆಚ್ಚಿನ ಸ್ಥಾನಮಾನವಿದೆ. ನಾವು ಪ್ರವಾದಿಯ ಪತ್ನಿಯರಾಗಿರುವೆವಲ್ಲದೇ ಅವರ ಚಿಕ್ಕಪ್ಪಂದಿರ ಪುತ್ರಿಯರೂ ಆಗಿದ್ದೇವೆ" ಎಂದು ಹೇಳಿದರು. ಪ್ರವಾದಿ(ಸ) ಮನೆಗೆ ಬಂದಾಗ ಸಫಿಯ್ಯ(ರ) ಅಳುತ್ತಿದ್ದರು. ಆ ಬಗ್ಗೆ ಪ್ರವಾದಿವರ್ಯರು(ಸ) ವಿಚಾರಿಸಿದಾಗ ನಡೆದ ವೃತ್ತಾಂತವನ್ನು ವಿವರಿಸಿದರು. ಅದಕ್ಕೆ ಪ್ರವಾದಿ(ಸ) "ನೀನು ಇದಕ್ಕಾಗಿ ಅಳುತ್ತಿರುವೆಯಾ?" ಎಂದು ಕೇಳಿದರು. ಆ ಬಳಿಕ "ನನ್ನ

ತಂದೆ ಹಾರೂನ್, ಚಿಕ್ಕಪ್ಪ ಮೂಸಾ ಮತ್ತು ಪತಿ ಮುಹಮ್ಮದರೆಂದು ನೀನು ಅವರಿಗೆ ಬಿಸಿ ಉತ್ತರವನ್ನೇಕೆ ನೀಡಲಿಲ್ಲ"ವೆಂದು ಪ್ರಶ್ನಿಸಿದರು.

## ವಿಶಿಷ್ಟ ಗುಣಗಳು

ಹೃದಯವಂತಿಕೆ, ಸತ್ಯಸಂಧತೆ, ನ್ಯಾಯನಿಷ್ಠೆ, ವಿನಯ, ನಿಸ್ವಾರ್ಥತೆ, ಆತ್ಮ ಸಂಯಮ, ತಾಳ್ಮೆ, ಶಾಂತತೆ ಇತ್ಯಾದಿಗಳು ಹ. ಸಫಿಯ್ಯರ ವಿಶಿಷ್ಟ ಗುಣಗಳಾಗಿದ್ದವು. ಬುದ್ಧಿವಂತಿಕೆ ಮತ್ತು ವಿದ್ಯೆಯಲ್ಲಿಯೂ ಅವರು ಹಿಂದಿರಲಿಲ್ಲ. ಅನೇಕ ವಿಷಯಗಳನ್ನು ಅವರಿಂದ ಕೇಳಿ ತಿಳಿಯಲಿಕ್ಕಾಗಿ ಸ್ತ್ರೀ ಪುರುಷರು ಅವರ ಬಳಿಗೆ ಹೋಗುತ್ತಿದ್ದರು. ಕೆಲವಾರು ಹದೀಸ್‌ಗಳು ಸಫಿಯ್ಯರಿಂದ(ರ) ನಿವೇದಿಸಲ್ಪಟ್ಟಿವೆ.

ವಿಧ್ವಂಸಕರು ಖಲೀಫ ಉಸ್ಮಾನ್‌ರ(ರ) ಮನೆಯನ್ನು ಸುತ್ತುವರಿದು ಆಹಾರ ವಸ್ತುಗಳನ್ನು ತಡೆದಾಗ ಹಝ್ರತ್ ಸಫಿಯ್ಯರು(ರ) ಅವರ ನೆರವಿಗೆ ತಲಪಿದ್ದರು. ಅವರು ಹಸನ್‌ರ(ರ) ಮೂಲಕ ಉಸ್ಮಾನ್‌ರ(ರ) ಬಳಿಗೆ ಆಹಾರ ಪದಾರ್ಥಗಳನ್ನು ಕಳುಹಿಸಿ ಕೊಡುತ್ತಿದ್ದರು.

ಹಿಜರಿ 50ನೇ ವರ್ಷದಲ್ಲಿ ಹ. ಸಫಿಯ್ಯ(ರ) ಮರಣ ಹೊಂದಿದರು. ಅಗ ಅವರಿಗೆ 60 ವರ್ಷ ಪ್ರಾಯವಾಗಿತ್ತು. ತನ್ನ ಸೊತ್ತಿನ ಮೂರನೇ ಒಂದು ಭಾಗವನ್ನು ಸೋದರಳಿಯನಿಗೆ ನೀಡಬೇಕೆಂದು ವಸಿಯ್ಯತ್ (ಮರಣ ವಾಙ್ಮೂಲ) ಹೇಳಿದ್ದರು. ಆದರೆ ಸೋದರಳಿಯನು ಯಹೂದಿಯನಾಗಿದ್ದುದರಿಂದ ಅವರ ವಸಿಯ್ಯತನ್ನು ಈಡೇರಿಸಲು ಸಹಾಬಿವರ್ಯರು ಸ್ವಲ್ಪ ಹಿಂಜರಿದರು. ತರುವಾಯ ಆಯಿಶಾರ(ರ) ಆದೇಶದಂತೆ ಆ ವಸಿಯ್ಯತನ್ನು ಕಾರ್ಯಗತ ಗೊಳಿಸಿದರು. ಬಖೀಅ್‌ನ ಸಾರ್ವಜನಿಕ ಸ್ಮಶಾನದಲ್ಲಿ ಹ. ಸಫಿಯ್ಯರ(ರ) ಪಾರ್ಥಿವ ಶರೀರವನ್ನು ದಫನ ಮಾಡಲಾಯಿತು.

# ಹರ್ಝ್ರತ್ ಮೈಮೂನ(ರ)

ಮೊದಲು ಬರ್ರಾ ಎಂಬ ಹೆಸರಿತ್ತು. ಪ್ರವಾದಿಯ(ಸ) ವಿವಾಹದ ಬಳಿಕ ಮೈಮೂನ ಎಂದು ಬದಲಾಯಿಸಿದರು. ಮೈಮೂನರ ತಂದೆಯ ಹೆಸರು ಹಾರಿಸ್. ತಾಯಿಯ ಹೆಸರು ಹಿಂದ್. ಹಾರಿಸ್‌ರಿಗೆ ಒಟ್ಟು 16 ಹೆಣ್ಣು ಮಕ್ಕಳಿದ್ದರು. ಮೈಮೂನರ(ರ) ಸಹೋದರಿಯ ರಾದ ಉಮ್ಮು ಫಝ್ಲ್ ಮತ್ತು ಉಮ್ಮು ಸಲ್ಮ ಯಥಾಕ್ರಮವಾಗಿ ಅಬ್ಬಾಸ್(ರ) ಮತ್ತು ಹಮ್‌ಝಾರ(ರ) ಪತ್ನಿಯರಾಗಿದ್ದರು. ಖಾಲಿದ್ ಬಿನ್ ವಲೀದ್‌ರ(ರ) ಮಾತೆ ಲುಬಾಬ ಸುಶ್ರಾರು ಮೈಮೂನರ(ರ) ಸಹೋದರಿಯಾಗಿದ್ದರು.

ಪ್ರಥಮ ವಿವಾಹವು ಮಸ್‌ಊದ್ ಬಿನ್ ಅಮ್ರ್‌ರೊಂದಿಗೆ ನಡೆಯಿತು. ಅವರು ವಿವಾಹ ವಿಚ್ಛೇದನ ಪಡೆದರು ಅಥವಾ ಮರಣ ಹೊಂದಿದರೆಂದು ಹೇಳಲಾಗುತ್ತಿದೆ. ತರುವಾಯ ಅಬೂರಹಮ್ ಎಂಬೋರ್ವರೊಂದಿಗೆ ವಿವಾಹ ಜರಗಿತು.

ಅಬೂರಹಮ್ ನಿಧನರಾದಾಗ ಮೈಮೂನರನ್ನು(ರ) ಪ್ರವಾದಿವರ್ಯರಿಗೆ(ಸ) ವಿವಾಹ ಮಾಡಿಕೊಡಬೇಕೆಂದು ಅವರ ಕುಟುಂಬದವರು ಆಗ್ರಹಿಸಿದರು. ಉಮ್ಮು ಫಝ್ಲ್‌ರ ವಿನಂತಿಯಂತೆ ಅಬ್ಬಾಸ್(ರ) ವಿವಾಹ ವಿಷಯವನ್ನು ಪ್ರವಾದಿಯ(ಸ) ಮುಂದಿಟ್ಟರು. ಕುಟುಂಬದ ಸಂತೃಪ್ತಿ ಹಾಗೂ ಇಸ್ಲಾಮಿನ ಹಿತಾಸಕ್ತಿಯನ್ನು ಗಮನಿಸಿ ಪ್ರವಾದಿ(ಸ) ಅದಕ್ಕೆ ಒಪ್ಪಿದರು. ಅಷ್ಟರಲ್ಲೇ ಖೈಬರ್ ಯುದ್ಧವು ಆಸನ್ನವಾದುದರಿಂದ ವಿವಾಹವನ್ನು ಮುಂದೂಡಲಾಯಿತು.

## ಪ್ರವಾದಿ ಪತ್ನಿ

ಖೈಬರ್ ಯುದ್ಧ ಮುಗಿಯಿತು. ಹುದೈಬಿಯಾ ಒಪ್ಪಂದದ ಶರತ್ತಿನಂತೆ ಹಿಜರಿ ಏಳನೇ ವರ್ಷ ಪ್ರವಾದಿ(ಸ) ಮತ್ತು ಸಹಾಬಿಗಳು ಉಮ್ರಾಃ ನಿರ್ವಹಿಸಲಿಕ್ಕಾಗಿ ಮಕ್ಕಾಕ್ಕೆ ಹೊರಟರು. ಮಕ್ಕಾದಲ್ಲಿ ಪ್ರವಾದಿಯವರು(ಸ) ಮೈಮೂನರನ್ನು(ರ) ವಿವಾಹವಾದರು. ಕೇವಲ ಮೂರು ದಿನ ಮಕ್ಕಾದಲ್ಲಿ ತಂಗುವ ಅನುಮತಿಯಿತ್ತು. ಆದ್ದರಿಂದ ಮಕ್ಕಾದಲ್ಲಿ ಸಾಂಪ್ರದಾಯಿಕ ಮಿಲನ ಕಾರ್ಯಕ್ರಮ ನಡೆಯಲಿಲ್ಲ.

ಪ್ರವಾದಿ(ಸ) ಮಕ್ಕಾದಿಂದ ಹೊರಟು ಹತ್ತು ಮೈಲು ದೂರದಲ್ಲಿರುವ ಸರೀಫ್‌ನಲ್ಲಿ ತಂಗಿದರು. ಪೂರ್ವ ನಿರ್ಧಾರದಂತೆ ಮೈಮೂನರು(ರ) ಅಲ್ಲಿಗೆ ತಲಪಿ ಪರಸ್ಪರ ಮಿಲನ ವಾದರು. ಮರುದಿನ ಪ್ರವಾದಿಯವರು(ಸ) ಮೈಮೂನರನ್ನು(ರ) ಸಂಗಡ ಕರೆದುಕೊಂಡು ಮದೀನಾಕ್ಕೆ ಮರಳಿದರು.

## ವಿವಾಹದ ಪರಿಣಾಮ

ಕುರೈಶರು ಇಷ್ಟರ ತನಕವೂ ಪ್ರವಾದಿ(ಸ) ಮತ್ತು ಇಸ್ಲಾಮಿನ ಕಠಿಣ ಶತ್ರುಗಳಾಗಿದ್ದರು. ಮುಹಮ್ಮದ್‌ರಿಗೆ(ಸ) ಭಾರೀ ದ್ವೇಷವಿದೆಯೆಂದು ಅವರು ಭಾವಿಸಿದ್ದರು. ಆದರೆ ಕುರೈಶರೊಂದಿಗೆ ತನಗೆ ವೈಯಕ್ತಿಕವಾಗಿ ಯಾವ ರೋಷವೂ ಇಲ್ಲ. ಕೇವಲ ಅವರ ಅಂಧ ವಿಶ್ವಾಸಗಳ ವಿರುದ್ಧವೇ ದ್ವೇಷವಿರುವುದೆಂಬುದನ್ನು ಈ ವಿವಾಹದ ಮೂಲಕ ಪ್ರವಾದಿ(ಸ) ಬಹಿರಂಗಪಡಿಸಿದರು.

ಮೈಮೂನರ(ರ) ವಿವಾಹವು ಈ ನಿಟ್ಟಿನಲ್ಲಿ ಭಾರೀ ಪ್ರಯೋಜನ ನೀಡಿತು. ಉಮ್ಮು ಹಬೀಬರನ್ನು(ರ) ವಿವಾಹವಾದಾಗ ಅಬೂಸುಫ್‌ಯಾನ್ ಕುಟುಂಬದ ವೈರವು ತುಂಬಾ ಕಡಿಮೆಯಾಗಿತ್ತು. ಮೈಮೂನರ(ರ) ವಿವಾಹದಿಂದಲೂ ಸಾಮಾನ್ಯ ಅದೇ ಪರಿಣಾಮ ಉಂಟಾಯಿತು. ಸಹೋದರಿ ಪುತ್ರರಾಗಿದ್ದ ಖಾಲಿದ್ ಬಿನ್ ವಲೀದ್‌ರು ಈ ವಿವಾಹದ ಬಳಿಕ ಇಸ್ಲಾಮ್ ಸ್ವೀಕರಿಸಿ ಮದೀನಾಕ್ಕೆ ಹೋದರು.

## ವೈಶಿಷ್ಟ್ಯಗಳು

ಹಝ್ರತ್ ಮೈಮೂನರು(ರ) ಸದ್ಗುಣ ಸಂಪನ್ನೆ ಮತ್ತು ವಿವೇಕಮತಿಯಾಗಿದ್ದರು. ಧಾರ್ಮಿಕ ವಿಧಿನಿಷೇಧಗಳನ್ನು ಅಕ್ಷರಶಃ ಪಾಲಿಸುತ್ತಿದ್ದರು. ಮುಖ್ಯವಾಗಿ ಗೃಹ ವಿಷಯ ಗಳಲ್ಲಿ ಏನಾದರೂ ಪ್ರವಾದಿಚರ್ಯೆಗೆ ವಿರುದ್ಧವಾದುದನ್ನು ಕಂಡರೆ ಕೂಡಲೇ ಅದನ್ನು ತಿದ್ದಿಸುತ್ತಿದ್ದರು.

ಒಮ್ಮೆ ಮೈಮೂನರ(ರ) ಸೇವಕಿಯು ಇಬ್ನು ಅಬ್ಬಾಸ್‌ರ(ರ) ಮನೆಗೆ ಹೋದಳು. ಇಬ್ನು ಅಬ್ಬಾಸ್(ರ) ಮತ್ತು ಪತ್ನಿ ಉಮ್ಮು ಅಮ್ಮಾರರ(ರ) ಹಾಸಿಗೆಗಳು ಪ್ರತ್ಯಪ್ರತ್ಯೇಕವಾಗಿ ಹಾಸಿರುವುದನ್ನು ಕಂಡಳು. ಪತಿ-ಪತ್ನಿಯರು ಪರಸ್ಪರ ವಿರಸದಿಂದಿರುವರೆಂದು ಆಕೆ ಭಾವಿಸಿದಳು. ಆ ಬಗ್ಗೆ ವಿಚಾರಿಸಿದಾಗ ವಸ್ತುಸ್ಥಿತಿ ತಿಳಿಯಿತು. ಋತುಮತಿಯಾಗಿರುವಾಗ ಅವರು ಒಟ್ಟಿಗೆ ಮಲಗುವುದಿಲ್ಲ. ಸೇವಕಿಯು ಅಲ್ಲಿಂದ ಮರಳಿ ಬಂದ ಬಳಿಕ ಈ ಘಟನೆಯನ್ನು ಮೈಮೂನರಿಗೆ(ರ) ತಿಳಿಸಿದಳು. ಮೈಮೂನ(ರ) ತಕ್ಷಣವೇ ಸೇವಕಿಯನ್ನು ಇಬ್ನು ಅಬ್ಬಾಸ್‌ರ ಬಳಿಗೆ ಹೀಗೆ ಹೇಳಿ ಕಳುಹಿಸಿದರು: "ಋತುಮತಿಯಾಗಿದ್ದಾಗಲೂ ಇತರ

ಕಾಲಗಳಲ್ಲಿಯೂ ಪ್ರವಾದಿ(ಸ) ನಮ್ಮೊಂದಿಗೆ ಮಲಗುವ ರೂಢಿಯಿತ್ತು. ಇಬ್ನು ಅಬ್ಬಾಸ್‌ರ ಸಂಪ್ರದಾಯವು ಅದಕ್ಕೆ ವಿರುದ್ಧವಾಗಿದೆ."

ಮತ್ತೊಮ್ಮೆ ಇಬ್ನು ಅಬ್ಬಾಸ್‌ರು ಮೈಮೂನರನ್ನು(ರ) ಭೇಟಿಯಾದರು. ತಲೆ ಗೂದಲು ಚೆಲ್ಲಾಪಿಲ್ಲಿಯಾಗಿ ಹರಡಿತ್ತು. ಆ ಬಗ್ಗೆ ವಿಚಾರಿಸಿದಾಗ ಇಬ್ನು ಅಬ್ಬಾಸ್(ರ) ಹೀಗೆಂದರು: "ಪತ್ನಿಯೇ ನನ್ನ ತಲೆಗೆ ಎಣ್ಣೆ ಹಾಕಿ ಬಾಚುತ್ತಾಳೆ. ಈಗ ಪತ್ನಿಯು ಋತುಮತಿಯಾಗಿರುವುದರಿಂದ ತಲೆ ಬಾಚಿಲ್ಲ." ಮೈಮೂನರು(ರ) ಈ ತಪ್ಪು ತಿಳುವಳಿಕೆಯನ್ನು ದೂರಗೊಳಿಸಿದರು. "ನಾವು ಋತುಮತಿಯಾಗಿದ್ದಾಗಲೇ ಪ್ರವಾದಿ(ಸ) ನಮ್ಮ ಮಡಿಲಲ್ಲಿ ತಲೆಯಿಟ್ಟು ಮಲಗುತ್ತಿದ್ದರು. ಹಾಗೆಯೇ ಕುರ್‌ಆನ್ ಓದುತ್ತಿದ್ದರು. ಕೂದಲು ಬಾಚುವುದಕ್ಕೇನು ಅಡ್ಡಿ? ಋತುಸ್ರಾವ ಕೈಯಲ್ಲಲ್ಲವಷ್ಟೆ?"

ಮೈಮೂನರು(ರ) ಸ್ನೇಹ ಸಹಾನುಭೂತಿಗಳ ತುಂಬಿದ ಕೊಡವಾಗಿದ್ದರು. ಅನೇಕ ಗುಲಾಮ ಸ್ತ್ರೀಯರನ್ನು ಖರೀದಿಸಿ ವಿಮೋಚನೆಗೊಳಿಸಿದ್ದಾರೆ. ಅವರ ಈ ಸತ್ಕರ್ಮವನ್ನು ಪ್ರವಾದಿ(ಸ) ಪ್ರಶಂಸಿಸಿ ಅವರಿಗಾಗಿ ಪ್ರಾರ್ಥಿಸಿದ್ದಾರೆ.

ಮೈಮೂನರು(ರ) ಒಂದು ಕ್ಷಣವೂ ಸುಮ್ಮನಿರುವುದು ಕಾಣಿಸುತ್ತಿರಲಿಲ್ಲ. ಮನೆಗೆಲಸ, ಸುನ್ನತ್ ನಮಾಝ್ ಅಥವಾ ಇನ್ನಾವುದಾದರೂ ಕೆಲಸದಲ್ಲಿ ಅವರು ತಲ್ಲೀನರಾಗಿರುತ್ತಿದ್ದರು. ದೇವಭಕ್ತಿ ಮತ್ತು ಕುಟುಂಬ ಸಂಬಂಧ ಬೆಳೆಸುವುದರಲ್ಲಿ ಮೈಮೂನರು(ರ) ನಮ್ಮೆಲ್ಲರನ್ನು ಮೀರಿಸಿದ್ದರೆಂದು ಆಯಿಶಾರು(ರ) ಹೇಳಿದ್ದಾರೆ. ನಲ್ವತ್ತಾರು ಪ್ರವಾದಿ ವಚನಗಳನ್ನು ಮೈಮೂನರು(ರ) ವರದಿ ಮಾಡಿದ್ದಾರೆ.

## ಪರಲೋಕ ಪ್ರಾಪ್ತಿ

ಹಿಜರಿ 51ನೇ ವರ್ಷದಲ್ಲಿ ಮೈಮೂನರ(ರ) ಇಹಲೋಕವಾಸ ಕೊನೆಗೊಂಡಿತು. ವಿವಾಹದ ಬಳಿಕ ಪ್ರವಾದಿಯವರನ್ನು(ಸ) ಪ್ರಥಮವಾಗಿ ಭೇಟಿಯಾದ ಸರೀಫ್‌ನಲ್ಲಿಯೇ ಮೈಮೂನ(ರ) ನಿಧನರಾದರು. ಅಲ್ಲಿಯೇ ದಫನಗೊಂಡರು. ಇಬ್ನು ಅಬ್ಬಾಸ್‌ರು(ರ) ಜನಾಝ ನಮಾಝ್ ನಿರ್ವಹಿಸಿದರು. ಹಝ್ರತ್ ಮೈಮೂನರು(ರ) ಪ್ರವಾದಿವರ್ಯರ(ಸ) ಕೊನೆಯ ಪತ್ನಿಯಾಗಿದ್ದರು.

# ಪ್ರವಾದಿ ಪತ್ನಿಯರ ಜೀವನ ವಿಶ್ಲೇಷಣೆ

ಪ್ರವಾದಿವರ್ಯರ(ಸ) ನಿಧನದ ವೇಳೆ ಒಂಭತ್ತು ಮಂದಿ ಪತ್ನಿಯರು ಉಪಸ್ಥಿತರಿದ್ದರು. ಅವರು ವಿಭಿನ್ನ ಗುಣ-ಸ್ವಭಾವವನ್ನು ಹೊಂದಿದ್ದರು. ಎಲ್ಲರೂ ಉನ್ನತ ಕುಟುಂಬಗಳಲ್ಲಿ ಜನಿಸಿದವರು ಮತ್ತು ಉನ್ನತ ಜೀವನ ಮಟ್ಟದಲ್ಲಿದ್ದವರಾಗಿದ್ದರು. ಪ್ರವಾದಿಯ(ಸ) ಪತ್ನಿಯರೆಂಬ ನೆಲೆಯಲ್ಲಿ ಅವರ ಜೀವನವು ಸಾದ್ಯಂತ ಮಾದರೀ ಯೋಗ್ಯವಾಗಿತ್ತು. ಅವರು ವಿಶ್ವಾಸ ಮತ್ತು ದೇವಭಕ್ತಿಯ ಪ್ರತೀಕವಾಗಿದ್ದರು. ಅವರಿಗೆ ಜಗತ್ತಿನ ಸ್ತ್ರೀಯರಲ್ಲಿ ಅತ್ಯುನ್ನತ ಸ್ಥಾನವಿದೆ.

ಪೂರ್ವೋಕ್ತಿಗಳಿಂದ ಪ್ರವಾದಿಯ ಪತ್ನಿಯರೆಲ್ಲರೂ 'ಮಅ್‌ಸೂಮ್' (ಪಾಪ ವಿರಹಿತರು)ಗಳು ಅಥವಾ ಅವರಿಂದ ಯಾವ ತಪ್ಪುಗಳೂ ಸಂಭವಿಸುವುದಿಲ್ಲವೆಂದು ಭಾವಿಸಬೇಕಾಗಿಲ್ಲ. ಮಾನವರೆಂಬ ನೆಲೆಯಲ್ಲಿ ಅವರಿಂದಲೂ ಲೋಪದೋಷಗಳು ಸಂಭವಿಸಬಹುದು. ಅಲ್ಲಾಹನನ್ನು ಧಿಕ್ಕರಿಸಿ ಪ್ರವಾದಿಗಳನ್ನು ವಂಚಿಸಿದ ಪತ್ನಿಯರನ್ನೂ ಇತಿಹಾಸದಲ್ಲಿ ಕಾಣಬಹುದು. ಪ್ರವಾದಿ ನೂಹ್(ಅ) ಮತ್ತು ಪ್ರವಾದಿ ಲೂತ್‌ರ(ಅ) ನತದೃಷ್ಟ ಪತ್ನಿಯರ ಕುರಿತು ಕುರ್‌ಆನ್ ಸ್ಪಷ್ಟವಾಗಿ ಹೇಳಿದೆ. ಅವರಿಗೆ ಶಾಶ್ವತ ನರಕದ ಶಿಕ್ಷೆಯು ವಿಧಿಸಲ್ಪಟ್ಟಿದೆ. ಪ್ರವಾದಿಯ ಪತ್ನಿಯರು ಪಾಪವಿರಹಿತರಾಗಿರುತ್ತಿದ್ದರೆ ಹಾಗಾಗುತ್ತಿರಲಿಲ್ಲ. ಪ್ರಾಯಶಃ ಈ ರೀತಿ ಘೋರ ಪಾಪವೆಸಗಿದ ಪ್ರವಾದಿಗಳ ಪತ್ನಿಯರಲ್ಲಿ ಕೇವಲ ಅವರಿಬ್ಬರೇ ಇರಬಹುದು. ಇತಿಹಾಸದ ಇತರೆಲ್ಲ ಪ್ರವಾದಿಗಳ ಪತ್ನಿಯರು ಇಸ್ಲಾಮ್ ಮತ್ತು ಪ್ರವಾದಿಗಳ ಶಿಕ್ಷಣ ಬೋಧನೆಗಳಂತೆ ಮಾದರೀ ಯೋಗ್ಯ ಜೀವನವನ್ನು ಸಾಗಿಸಿದವರಾಗಿರುವರು. ಪ್ರವಾದಿ ಅಯ್ಯೂಬ್‌ರ(ಅ) ಪತ್ನಿಯ ಹೃದಯವಿದ್ರಾವಕ ಕಥೆಯು ಅದರ ಉಜ್ವಲ ಉದಾಹರಣೆ ಯಾಗಿದೆ. ಅತ್ಯಂತ ಕ್ಲಿಷ್ಟ ಸಂದರ್ಭಗಳಲ್ಲಿಯೂ ಅವರು ಪತಿಗೆ ನಿಷ್ಠರಾಗಿದ್ದು ಜೀವನವನ್ನು ಸಂಪೂರ್ಣವಾಗಿ ಪತಿಯ ಶುಶ್ರೂಷೆಗೆ ಮುಡಿಪಾಗಿಟ್ಟರು.

ಪ್ರವಾದಿ ಮುಹಮ್ಮದ್‌ರ(ಸ) ಪತ್ನಿಯರೂ ಪ್ರವಾದಿ(ಸ) ಮತ್ತು ಇಸ್ಲಾಮಿನ ಬಗ್ಗೆ ಅದೇ ರೀತಿಯ ಭಾವನೆಗಳನ್ನು ಹೊಂದಿದ್ದರು. ಏನಾದರೂ ಕ್ಷುಲ್ಲಕ ಲೋಪದೋಷಗಳು ಸಂಭವಿಸಿದ್ದರೆ, ಅದರಿಂದ ಅವರ ಶ್ರೇಷ್ಠತೆಗೆ ಕಳಂಕ ತಟ್ಟುವುದಿಲ್ಲ. ಈ ಮೂಲಭೂತ ವಾಸ್ತವಿಕತೆಯನ್ನು ತಿಳಿದುಕೊಂಡರೆ, ಅವರ ಕೌಟುಂಬಿಕ ಜೀವನದ ಕೆಲವೊಂದು ವಿರಸಗಳು

ನಮ್ಮ ಮಟ್ಟಿಗೆ ಗೌಣವಾಗುತ್ತವೆ. ಒಬ್ಬರಿಗೆ ಒಂದಕ್ಕಿಂತ ಹೆಚ್ಚು ಪತ್ನಿಯರಿದ್ದರೆ ಪರಸ್ಪರ ಮತ್ಸರ ಕಲಹಗಳುಂಟಾಗುವುದು ಅಸಂಭಾವ್ಯವಲ್ಲ. ಆದರೆ ಸಾಮಾನ್ಯ ಸ್ತ್ರೀಯರಲ್ಲಿ ಕಂಡು ಬರುವಂತಹ ಮರ್ಯಾದೆ ಮತ್ತು ಸಭ್ಯತೆಯ ಪರಿಧಿಯನ್ನು ಮೀರಿದ 'ಕಚ್ಚಾಟ' ಪ್ರವಾದಿಯ ಪತ್ನಿಯರಲ್ಲಿ ಸಂಭವಿಸಿಲ್ಲ.

## ಪ್ರವಾದಿ ಮತ್ತು ಪತ್ನಿಯರ ಪರಸ್ಪರ ಸಂಬಂಧ

ಪತಿ ಪತ್ನಿಯರ ಪರಸ್ಪರ ಸಂಬಂಧ ಮತ್ತು ವರ್ತನೆಗಳನ್ನು ಇಸ್ಲಾಮ್ ವಿವರಿಸಿದೆ. ಅದನ್ನು ಪ್ರವಾದಿ ಪತ್ನಿಯರು ತಮ್ಮ ಜೀವನದಲ್ಲಿ ಪ್ರಥಮವಾಗಿ ತೋರಿಸಿಕೊಟ್ಟರು. ಪ್ರವಾದಿ(ಸ) ಎಲ್ಲ ಪತ್ನಿಯರೊಂದಿಗೂ ಸಮಾನವಾಗಿ ವರ್ತಿಸುತ್ತಿದ್ದರು. ಯಾರೊಡನೆಯೂ ಪಕ್ಷಪಾತ ತೋರಿಸುತ್ತಿರಲಿಲ್ಲ. ಪ್ರವಾದಿವರ್ಯರಿಗೆ(ಸ) ಕೆಲವು ಪತ್ನಿಯರೊಡನಿದ್ದ ವಿಶೇಷ ಸ್ನೇಹವು ಅವರೊಂದಿಗೆ ಪಕ್ಷಪಾತದಿಂದ ವರ್ತಿಸಲು ಪ್ರೇರಕವಾಗಲಿಲ್ಲ. ಆ ಸ್ನೇಹದ ಕಾರಣವು ಕೇವಲ ಭಾವನಾತ್ಮಕವಾಗಿತ್ತು. ಖದೀಜ(ರ) ಮತ್ತು ಆಯಿಶಾರೊಂದಿಗೆ(ರ) ಪ್ರವಾದಿ ವರ್ಯರಿಗೆ(ಸ) ವಿಶೇಷ ಪ್ರೀತಿಯಿತ್ತು. ಖದೀಜರ(ರ) ಜೀವನಾವಧಿಯಲ್ಲಿ ಪ್ರವಾದಿ ಯವರಿಗೆ(ಸ) ಬೇರೆ ಪತ್ನಿಯರಿದ್ದಿರಲಿಲ್ಲ. ಆದ್ದರಿಂದ ಅವರ ಬಗೆಗಿನ ವಿಶೇಷ ಒಲವನ್ನು ಯಾರೂ ಟೀಕಿಸುವಂತಿಲ್ಲ. ಪ್ರವಾದಿ ಮತ್ತು ಇಸ್ಲಾಮಿಗಾಗಿ ಖದೀಜರು(ರ) ಮಾಡಿದ ಸೇವೆಯೇ ಪ್ರವಾದಿಯವರ(ಸ) ವಿಶೇಷ ಪ್ರೀತಿಗೆ ಕಾರಣವಾಗಿತ್ತು. ಒಮ್ಮೆ ಆಯಿಶಾರೊಡನೆ(ರ) ಪ್ರವಾದಿ(ಸ) ಹೇಳಿದರು: "ನನಗೆ ಅವರಿಗಿಂತ (ಖದೀಜರಿಗಿಂತ) ಉತ್ತಮ ಪತ್ನಿಯರು ದೊರೆತಿಲ್ಲ. ಎಲ್ಲರೂ ಕಾಫಿರರಾಗಿದ್ದಾಗ ಅವರು ಮುಸ್ಲಿಮರಾದರು. ಎಲ್ಲರೂ ನನ್ನನ್ನು ನಿಷೇಧಿಸಿದಾಗ ಅವರು ವಿಶ್ವಾಸವಿಟ್ಟರು. ಎಲ್ಲರೂ ಕೈ ಬಿಟ್ಟಾಗ ಕೇವಲ ಅವರೊಬ್ಬರೇ ಬೆಂಬಲಿಸಿದರು. ಅಲ್ಲಾಹನು ಅವರ ಮೂಲಕ ನನಗೆ ಸಂತಾನಗಳನ್ನು ದಯಪಾಲಿಸಿದನು."

ಆಯಿಶಾರೊಂದಿಗಿದ್ದ(ರ) ವಿಶೇಷ ಪ್ರೀತಿಗೆ ಅವರಲ್ಲಿದ್ದ ಬುದ್ಧಿವಂತಿಕೆ ಮತ್ತು ವಿದ್ವತ್ತು ಕಾರಣವಾಗಿತ್ತು. ಒಮ್ಮೆ ಪ್ರವಾದಿಯ(ಸ) ಪತ್ನಿಯರ ಪ್ರೇರಣೆಯಂತೆ ಝೈನಬರು(ರ) ಪ್ರವಾದಿರಿಗೆ(ಸ) ಆಯಿಶಾರೊಂದಿಗಿರುವ(ರ) ವಿಶೇಷ ಪ್ರೀತಿಯ ಬಗ್ಗೆ ಅವರ ಮುಂದೆಯೇ ಪ್ರಶ್ನಿಸಿದರು. ತರುವಾಯ ಆಯಿಶಾ(ರ) ಮತ್ತು ಝೈನಬರೊಳಗೆ(ರ) ಪರಸ್ಪರ ವಾಗ್ವಾದ ವುಂಟಾಯಿತು. ಆಯಿಶಾರು(ರ) ಝೈನಬರನ್ನು(ರ) ನಿರುತ್ತರಗೊಳಿಸಿದರು. ಎಲ್ಲವನ್ನೂ ಮೌನವಾಗಿ ಆಲಿಸುತ್ತಿದ್ದ ಪ್ರವಾದಿ(ಸ) "ಅವರು ಅಬೂಬಕರ್‌ರ ಮಗಳು" ಎಂದರು. ಅಂದರೆ ಬುದ್ಧಿವಂತಿಕೆಯಲ್ಲಿ ಅವರನ್ನು ಸೋಲಿಸಲು ಸಾಧ್ಯವಿಲ್ಲವೆಂದು ತಾತ್ಪರ್ಯ. ರೂಪ ಲಾವಣ್ಯಗಳಲ್ಲಿ ಝೈನಬ, ಹಫ್ಸ ಮತ್ತು ಸಫಿಯ್ಯರು ಆಯಿಶಾರಿಂದೇನೂ ಕಡಿಮೆ ಯಿರಲಿಲ್ಲ. ಯೌವನ ಮತ್ತು ಸೌಂದರ್ಯವನ್ನು ಹೋಲಿಸಿದರೆ ಬಾಲಕಿಯಾಗಿದ್ದ ಆಯಿಶಾರಿಗಿಂತ(ರ) ಪ್ರವಾದಿವರ್ಯರನ್ನು(ಸ) ಆಕರ್ಷಿಸಲು ಅವರಿಗೆ ಸಾಧ್ಯವಿತ್ತು.

ಸಾಮಾನ್ಯವಾಗಿ ಎಲ್ಲ ಪತ್ನಿಯರೊಡನೆಯೂ ಪ್ರವಾದಿಯವರಿಗೆ(ಸ) ಬಹಳ ಪ್ರೀತಿಯಿತ್ತು. ಪತ್ನಿಯರೆಂದು ಪ್ರವಾದಿ(ಸ) ಅವರನ್ನು ನಿರ್ಲಕ್ಷಿಸಲಿಲ್ಲ. ಬದಲಾಗಿ ಅವರೊಂದಿಗೆ ಗೌರವಾದರಗಳಿಂದ ವರ್ತಿಸಿದರು. "ಸಭ್ಯರು ಸ್ತ್ರೀಯರನ್ನು ಗೌರವಿಸುವರೆಂದೂ ನೀಚರು ಸ್ತ್ರೀಯರನ್ನು ನಿಂದಿಸುವರೆಂದೂ" ಪ್ರವಾದಿ(ಸ) ಹೇಳಿದ್ದಾರೆ. ಒಮ್ಮೆ ಪತ್ನಿಯರು ಸಂಚರಿಸುವ ಒಂಟೆಗಳನ್ನು ನಡೆಸುವವನೊಡನೆ ಪ್ರವಾದಿ(ಸ) ಹೇಳಿದರು: "ಮೆಲ್ಲ ಮೆಲ್ಲನೆ ಅಟ್ಟಿರಿ. ಅವರು ಸ್ಫಟಿಕ ಶೀಷೆಗಳು." ಏನಾದರೂ ಹೆಚ್ಚು ಕಮ್ಮಿಯಾದರೆ ಕೋಪ ವ್ಯಕ್ತ ಪಡಿಸುವುದಲ್ಲದೆ ಪತ್ನಿಯರನ್ನು ಅವರು ಎಂದೂ ಹೊಡೆದಿಲ್ಲ ಅಥವಾ ಹಿಂಸಿಸಿಲ್ಲ. ಮನೆ ಖರ್ಚಿಗೆ ಹೆಚ್ಚು ಹಣ ನೀಡಬೇಕೆಂದು ಹಠ ಹಿಡಿದಾಗ ಪ್ರವಾದಿ(ಸ) ತಮ್ಮ ಪತ್ನಿಯ ರೊಡನೆ ಒಂದು ತಿಂಗಳು ವಿರಸದಿಂದಿದ್ದರು. ಅದೊಂದು ಶಿಕ್ಷಾ ಕ್ರಮವಾಗಿತ್ತು.

ಪತ್ನಿಯರಿಗೆ ಪ್ರವಾದಿವರ್ಯರೊಡನೆ(ಸ) ಅತಿ ಪ್ರೇಮವಿತ್ತು. ಅವರು ಪ್ರವಾದಿಯ(ಸ) ಆಜ್ಞೆಗಳನ್ನು ಅಕ್ಷರಶಃ ಪಾಲಿಸುತ್ತಿದ್ದರು. ಅವರ ಪ್ರೀತಿ ಗಳಿಸಲಿಕ್ಕಾಗಿ ಪ್ರತಿಯೊಬ್ಬರೂ ಪೈಪೋಟಿ ನಡೆಸುತ್ತಿದ್ದರು. ಪ್ರವಾದಿಯ(ಸ) ಇಷ್ಟಾನಿಷ್ಟಗಳನ್ನು ವಿಶೇಷವಾಗಿ ಗಮನಿಸು ತ್ತಿದ್ದರು. "ಅಲ್ಲಾಹ್ ಅಲ್ಲದವರಿಗೆ ಸಾಷ್ಟಾಂಗವೆರಗಬಹುದಾಗಿದ್ದರೆ, ಪತ್ನಿಯು ಪತಿಗೆ ಸಾಷ್ಟಾಂಗವೆರಗಲು ನಾನು ಆಜ್ಞಾಪಿಸುತ್ತಿದ್ದನೆಂದು" ಪ್ರವಾದಿ(ಸ) ಹೇಳಿದ್ದಾರೆ. ಈ ಪ್ರವಾದಿ ವಚನದ ತಾತ್ಪರ್ಯವನ್ನು ಗ್ರಹಿಸಿ ಪತ್ನಿಯರು ಪ್ರವಾದಿವರ್ಯರೊಡನೆ(ಸ) ವರ್ತಿಸಿದ್ದರು.

## ಜೀವನ ವಿಧಾನ

ಪ್ರವಾದಿ(ಸ) ಮತ್ತು ಪತ್ನಿಯರ ಜೀವನವು ಸಂಪೂರ್ಣ ಸರಳ ಮತ್ತು ನಿರಾಡಂಬರ ವಾಗಿದ್ದಿತು. ಪ್ರವಾದಿಯವರು(ಸ) ಬಯಸಿದ್ದರೆ ಅವರಿಗೆ ಶ್ರೀಮಂತ ಹಾಗೂ ವರ್ಣ ರಂಜಿತ ಜೀವನವನ್ನು ಸುಲಭದಲ್ಲಿ ಸಾಗಿಸಬಹುದಾಗಿತ್ತು. ಆದರೆ ಆ ಪ್ರವಾದಿವರೇಣ್ಯರು ಬಡವರಾಗಿ ಬದುಕಿ ಬಡವರಾಗಿಯೇ ಮರಣ ಹೊಂದಲು ಆಶಿಸಿ, ಅದಕ್ಕಾಗಿ ಪ್ರಾರ್ಥಿಸಿದರು.

ಪ್ರವಾದಿ(ಸ) ಅವರು ಪತ್ನಿಯರೊಡನೆ ಸಮಾನ ರೀತಿಯಿಂದ ವರ್ತಿಸುತ್ತಿದ್ದರು. ಮನೆ ಖರ್ಚಿಗಾಗಿ ಎಲ್ಲರಿಗೂ ಸಮಾನ ಮೊತ್ತವನ್ನು ನೀಡುತ್ತಿದ್ದರು. ಪತ್ನಿಯರೆಲ್ಲರ ಬಳಿಯಿದ್ದ ಮನೆ ಸಾಮಗ್ರಿಗಳು ಸಾಮಾನ್ಯ ಸಮವಾಗಿದ್ದುವು. ಸಂಬಂಧಿಕರು ಅಥವಾ ಇನ್ನಾರಾದರೂ ನೀಡಿರುವುದರ ವಿನಾ ಯಾವ ಪತ್ನಿಯಲ್ಲಿಯೂ ಇತರರಿಗಿಂತ ಹೆಚ್ಚು ಆಹಾರ ಸಾಮಗ್ರಿಗಳಿರುತ್ತಿರಲಿಲ್ಲ. ದೊರಗು ಚಾಪೆಗಳಲ್ಲಿ ಅವರು ಮಲಗುತ್ತಿದ್ದರು. ಕೆಲವೊಮ್ಮೆ ಹಾಸಲು ಕಂಬಳಿಯೇನಾದರೂ ಇದ್ದಿರಲೂಬಹುದು.

ಪ್ರವಾದಿಯ(ಸ) ಪತ್ನಿಯರು ಆಭರಣಗಳನ್ನು ಧರಿಸುತ್ತಿರಲಿಲ್ಲ. ಹಿಂದೆ ತಮ್ಮಲ್ಲಿದ್ದ ಆಭರಣಗಳನ್ನೂ ಅವರು ದಾನ ಮಾಡಿದ್ದರು. ಸ್ವರ್ಗದಲ್ಲಿ ಆಭರಣ ಧರಿಸಬಯಸು ವವರು ಅವುಗಳನ್ನು ಇಲ್ಲಿ ಧರಿಸಬಾರದೆಂದು ಪ್ರವಾದಿ(ಸ) ಪತ್ನಿಯರನ್ನು ತಡೆದಿದ್ದರು.

ಪ್ರತಿಯೊಬ್ಬರಲ್ಲಿಯೂ ಒಂದು ಜತೆ ಉಡುಪಿಗಿಂತ ಅಧಿಕವಿರಲಿಲ್ಲ. ಕೊಳೆಯಾದರೆ ತೊಳೆದು ಪುನಃ ತೊಡುತ್ತಿದ್ದರು. ಸಾಮಾನ್ಯ ಸ್ತ್ರೀಯರಂತೆ ಅವರಿಗೆ ಆಭರಣ ಅಥವಾ ಬಟ್ಟೆಬರೆಗಳ ವ್ಯಾಮೋಹವಿರಲಿಲ್ಲ.

ಪ್ರವಾದಿಪತ್ನಿಯರ ಮನೆಗಳಲ್ಲಿ ಆಹಾರ ವಸ್ತುಗಳು ಅಧಿಕವಿರುವ ಮಾತಂತಿರಲಿ, ಅವರ ಅಗತ್ಯಕ್ಕೇ ಸಾಕಾಗುತ್ತಿರಲಿಲ್ಲ. ಆದರೂ ಯಾಚಕರು ಬಂದರೆ ಅಂದಿನ ಆಹಾರವನ್ನು ಅವರಿಗೆ ನೀಡಿ ಸ್ವಯಂ ಹಸಿವಿನಿಂದಿರುತ್ತಿದ್ದರು.

ಪ್ರವಾದಿ(ಸ) ಮತ್ತು ಪತ್ನಿಯರು ಎಷ್ಟೋ ಬಾರಿ ಹಸಿವಿನಿಂದಿರುತ್ತಿದ್ದರು. ಮನೆಯಲ್ಲಿ ಒಲೆ ಅಥವಾ ದೀಪ ಉರಿಸದೆ ತಿಂಗಳುಗಳೇ ಕಳೆದು ಹೋಗಿದ್ದುವು. ಆ ದಿನಗಳಲ್ಲಿ ಸ್ವಲ್ಪ ಖರ್ಜೂರ ಮತ್ತು ನೀರು ಸೇವಿಸಿ ಪ್ರವಾದಿ(ಸ) ಮತ್ತು ಪತ್ನಿಯರು ಬದುಕುತ್ತಿದ್ದರು.

ಅನಸ್(ರ) ಹೇಳುತ್ತಾರೆ: "ಮುಹಮ್ಮದರ ಆತ್ಮವು ಯಾರ ಹಸ್ತದಲ್ಲಿದೆಯೋ ಆತನಾಣೆ! ಮುಹಮ್ಮದರ ಕುಟುಂಬಕ್ಕೆ ಒಂದು ಸಾಅ್ ಖರ್ಜೂರ ಅಥವಾ ಆಹಾರ ಧಾನ್ಯಗಳು ದೊರೆಯದ ದಿನಗಳಿದ್ದುವು" ಎಂದು ಪ್ರವಾದಿ(ಸ) ಹೇಳಿರುವುದನ್ನು ನಾನು ಕೇಳಿದ್ದೇನೆ. ಅಂದು ಪ್ರವಾದಿವರ್ಯರಿಗೆ(ಸ) ಒಂಭತ್ತು ಪತ್ನಿಯರಿದ್ದರು.

ಪ್ರವಾದಿವರ್ಯರಿಗೆ(ಸ) ಸ್ಥಿರವಾದ ಆದಾಯ ಮಾರ್ಗಗಳಿರಲಿಲ್ಲ. ಅನುಯಾಯಿಗಳಿಂದ ದೊರೆಯುವ ಸೌಜನ್ಯ ಸಾಧನಗಳನ್ನು ಸ್ವಯಂ ಉಪಯೋಗಿಸದೆ, ದಾನ ಮಾಡಿ ಬಿಡುವ ರೂಢಿಯೇ ಹೆಚ್ಚು. 'ಗನೀಮತ್'ನಲ್ಲಿ ಒಂದು ಪಾಲು ಪ್ರವಾದಿಯವರಿಗೆ(ಸ) ದೊರೆಯುತ್ತಿತ್ತು. ಆದರೆ ಅದು ಸ್ಥಿರ ಆದಾಯವಾಗಿರಲಿಲ್ಲ. ಖೈಬರನ್ನು ಜಯಿಸಿದಾಗ ಅದರಿಂದ ದೊರೆತ ಆದಾಯದ ಒಂದು ಪಾಲನ್ನು ಪತ್ನಿಯರಿಗೆ ಮೀಸಲಿರಿಸಿದ್ದರು. ಉಮರ್ ಬಿನ್ ಖತ್ತಾಬ್‌ರ(ರ) ಆಡಳಿತ ಕಾಲದಲ್ಲಿ ಮುಸ್ಲಿಮರ ಆರ್ಥಿಕ ಸ್ಥಿತಿಯು ತುಂಬಾ ಉತ್ತಮವಾಗಿತ್ತು. ಸಾರ್ವಜನಿಕ ಸೊತ್ತಿನಲ್ಲಿ ಎಲ್ಲರಿಗೂ ಪಾಲು ನಿರ್ಣಯಿಸಿದಾಗ ಪ್ರವಾದಿಯ ಪತ್ನಿಯರಿಗೂ ಅದನ್ನು ನೀಡಲಾಯಿತು. ಅವರಿಗೆ ತಲಾ ಹನ್ನೆರಡು ಸಾವಿರ ದಿರ್ಹಮ್ ಪಾಲು ದೊರೆತಿತ್ತು. ಆದರೆ ಅವರ ನಿತ್ಯ ಜೀವನದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಅವರು ಪ್ರವಾದಿಯವರ(ಸ) ಕಾಲದ ಜೀವನ ಮಟ್ಟವನ್ನೇ ಮುಂದುವರಿಸಿದರು. ಅವರು ಹಾಗೆ ದೊರೆತ ಹಣದ ಸಿಂಹಪಾಲನ್ನು ಬಡವರಿಗೆ ದಾನ ಮಾಡಿ ಬಿಡುತ್ತಿದ್ದರು.

## ಭವನಗಳು

ಪ್ರವಾದಿ ಪತ್ನಿಯರ ಮನೆಗಳು ಮದೀನದ ಮಸ್ಜಿದುನ್ನಬವಿಯ ಬಳಿಯಿದ್ದುವು. ಮೊದಲು ಆಯಿಶಾ(ರ) ಮತ್ತು ಸೌದರಿಗಾಗಿ(ರ) ಎರಡು ಮನೆಗಳನ್ನು ನಿರ್ಮಿಸಲಾಯಿತು. ಹೊಸ ಪತ್ನಿಯರು ಬಂದ ಹಾಗೆಯೇ ಹೊಸ ಮನೆಗಳನ್ನು ನಿರ್ಮಿಸಲಾಗುತ್ತಿತ್ತು. ಹೀಗೆ

ಮಸೀದಿಗೆ ಸೇರಿ ಒಂಭತ್ತು ಮನೆಗಳನ್ನು ಕಟ್ಟಲಾಗಿತ್ತು. ಬಿಸಿಲಿನಲ್ಲಿ ಒಣಗಿಸಿದ ಇಟ್ಟಿಗೆ ಮತ್ತು ಖರ್ಜೂರದ ಕಾಂಡಗಳಿಂದ ಪ್ರವಾದಿ ಪತ್ನಿಯರ ಮನೆಗಳು ಕಟ್ಟಲ್ಪಟ್ಟಿದ್ದುವು. ಪ್ರತಿಯೊಂದು ಮನೆಯ ಉದ್ದ 10 ಮೊಳ ಮತ್ತು ಅಗಲ 7 ಮೊಳವಿತ್ತು. ಮೇಲ್ಛಾವಣಿಯು ಕೈಗೆಟಕುವಂತಿತ್ತು. ಖರ್ಜೂರದ ದಂಟು ಮತ್ತು ಸೋಗೆಗಳಿಂದ ಅದನ್ನು ಕಟ್ಟಲಾಗಿತ್ತು. ಬಾಗಿಲನ್ನು ಪರದೆ ಅಥವಾ ತಟ್ಟಿಯಿಂದ ಮುಚ್ಚುತ್ತಿದ್ದರು.

ಉಮ್ಮು ಸಲ್ಮ(ರ), ಉಮ್ಮು ಹಬೀಬ(ರ), ಹಫ್ಸ(ರ), ಜುವೈರಿಯ(ರ), ಮೈಮೂನ(ರ), ಝೈನಬ್ ಬಿಂತು ಜಹ್‌ಶ್(ರ) ಮುಂತಾದವರ ಮನೆಗಳು ಮಸೀದಿಯ ಒಂದು ಭಾಗದಲ್ಲಿ ಇದ್ದುವು. ಮನೆಯು ಮಸೀದಿಗೆ ಸೇರಿದ್ದುದರಿಂದ ಇಲ್‌ತಿಕಾಫಿನ ವೇಳೆ ಪ್ರವಾದಿ(ಸ) ಮಸೀದಿಯಿಂದ ತಲೆ ಹೊರಗೆ ಹಾಕಿದರೆ ಆಯಿಶಾರಿಗೆ(ರ) ಮನೆಯಲ್ಲಿ ಕುಳಿತು ಅವರ ತಲೆ ಬಾಚಲು ಸಾಧ್ಯವಾಗುತ್ತಿತ್ತು.

ಪ್ರವಾದಿಯ ಪತ್ನಿಯರ ನಿಧನದ ಬಳಿಕ ಆ ಮನೆಗಳು ಅವರ ಸಂಬಂಧಿಕರ ಅಧೀನದಲ್ಲಿತ್ತು. ಮುಆವಿಯಾರ(ರ) ಆಡಳಿತ ಕಾಲದಲ್ಲಿ ಅವರು ಅವುಗಳನ್ನು ಖರೀದಿಸಿ ಸರಕಾರದ ಸ್ವಾಮ್ಯಕ್ಕೊಳಪಡಿಸಿದರು. ಪ್ರವಾದಿ(ಸ), ಅಬೂಬಕರ್(ರ) ಮತ್ತು ಉಮರ್ ರವರ(ರ) ಸಮಾಧಿಗಳು ಆಯಿಶಾರ(ರ) ಮನೆಯಲ್ಲಿವೆ. ಉಳಿದ ಮನೆಗಳನ್ನು ಖಲೀಫ ಅಬ್ದುಲ್ ಮಲಿಕ್‌ರ ಮಸ್ಜಿದುನ್ನಬವಿಯ ವಿಸ್ತರಣಾ ವೇಳೆ ಅದರೊಂದಿಗೆ ಸೇರಿಸಿದರು.

## ಮಾದರಿ ಜೀವನ

ಪ್ರವಾದಿಯ ಪತ್ನಿಯರೆಂಬ ನೆಲೆಯಲ್ಲಿ ಸ್ವಯಂ ಒಳ್ಳೆಯವರಾಗಿರುವುದರೊಂದಿಗೆ ಸ್ತ್ರೀ ಜಗತ್ತಿನ ನೈಜ ಇಸ್ಲಾಮೀ ಜೀವನವನ್ನು ಪ್ರತ್ಯಕ್ಷ ತೋರಿಸುವುದೂ ಅವರ ಕರ್ತವ್ಯ ವಾಗಿದ್ದಿತು. ಆದ್ದರಿಂದಲೇ ಅವರ ದುಷ್ಕೃತ್ಯಗಳಿಗೆ ಇಮ್ಮಡಿ ಶಿಕ್ಷೆಯನ್ನೂ ಸುಕೃತ್ಯಗಳಿಗೆ ಇಮ್ಮಡಿ ಪ್ರತಿಫಲವನ್ನೂ ಕುರ್‌ಆನ್ ವಾಗ್ದಾನ ನೀಡಿದೆ. ಸ್ತ್ರೀಯರು ಮತ್ತು ಕುಟುಂಬ ಜೀವನಕ್ಕೆ ಸಂಬಂಧಿಸಿದ ಹೆಚ್ಚಿನ ವಿಷಯಗಳನ್ನು ಲೋಕವು ಅವರಿಂದಲೇ ತಿಳಿದು ಕೊಂಡಿದೆ. ಸ್ತ್ರೀಯರ ಬಗ್ಗೆ ಕುರ್‌ಆನ್‌ನಲ್ಲಿ ಹಲವು ವಿಷಯಗಳನ್ನು ಪ್ರಸ್ತಾಪಿಸಿರುವುದ ರೊಂದಿಗೆ, ಮಾದರಿ ಮಹಿಳೆಯರೆಂಬ ನೆಲೆಯಲ್ಲಿ ಪ್ರವಾದಿಯ ಪತ್ನಿಯರನ್ನು ವಿಶೇಷವಾಗಿ ಅಭಿಸಂಬೋಧಿಸುತ್ತಾ ಹೀಗೆ ಹೇಳಿದೆ:

"ಪ್ರವಾದಿಯೇ! ನೀವು ನಿಮ್ಮ ಪತ್ನಿಯರೊಡನೆ ಹೇಳಿರಿ: ನಿಮಗೆ ಐಹಿಕ ಜೀವನ ಮತ್ತು ಅದರ ಅಲಂಕಾರಗಳು ಬೇಕಿದ್ದರೆ ಬನ್ನಿ. ಸುಖಭೋಗ ವಸ್ತುಗಳನ್ನು ನೀಡಿ ನಿಮ್ಮನ್ನು ಅತ್ಯುತ್ತಮ ರೀತಿಯಲ್ಲಿ ವಿಮೋಚನೆಗೊಳಿಸುತ್ತೇನೆ. (ಅಥವಾ) ಅಲ್ಲಾಹ್, ಆತನ ಪ್ರವಾದಿ ಮತ್ತು ಪರಲೋಕವನ್ನು ನೀವು ಬಯಸುವುದಿದ್ದರೆ, ನಿಮ್ಮಲ್ಲಿ ಸತ್ಕಾರ್ಯ ಮಾಡುವವರಿಗೆ ಅಲ್ಲಾಹನು ಶ್ರೇಷ್ಠ ಪ್ರತಿಫಲವನ್ನು ಸಜ್ಜುಗೊಳಿಸಿದ್ದಾನೆ."

"ಪ್ರವಾದಿಯ ಪತ್ನಿಯರೇ, ನಿಮ್ಮಲ್ಲಾರಾದರೂ ಸ್ಪಷ್ಟ ದುಷ್ಕೃತ್ಯಗಳನ್ನು ಮಾಡಿದರೆ ಆಕೆಗೆ ಇಮ್ಮಡಿ ಶಿಕ್ಷೆ ನೀಡಲಾಗುವುದು. ಅದು ಅಲ್ಲಾಹನಿಗೆ ಸುಲಭ ಸಾಧ್ಯವಿದೆ."

"ನಿಮ್ಮಲ್ಲಾರಾದರೂ ಅಲ್ಲಾಹ್ ಮತ್ತು ಆತನ ಪ್ರವಾದಿಯನ್ನು ಅನುಸರಿಸಿ ಸತ್ಕಾರ್ಯವೆಸಗಿದರೆ ನಾವು ಆಕೆಗೆ ಇಮ್ಮಡಿ ಪ್ರತಿಫಲ ನೀಡುತ್ತೇವೆ. ಉತ್ತಮ ಆಹಾರ ವಸ್ತುಗಳನ್ನು ಆಕೆಗೆ ಸಜ್ಜುಗೊಳಿಸುತ್ತೇವೆ."

"ಪ್ರವಾದಿಯ ಪತ್ನಿಯರೇ, ನೀವು ಇತರ ಸ್ತ್ರೀಯರಂತಲ್ಲ. ನೀವು ಅಲ್ಲಾಹನನ್ನು ಭಯಪಡುವವರಾಗಿದ್ದರೆ (ಅನ್ಯರೊಡನೆ) ಮಾತನಾಡುವಾಗ ಸೌಮ್ಯಭಾವ ತೋರಬೇಡಿರಿ. ತನ್ನಿಮಿತ್ತ ಹೃದಯದಲ್ಲಿ ರೋಗವಿರುವವರಿಗೆ (ನಿಮ್ಮ ಬಗ್ಗೆ) ದುರ್ಭಾವನೆಗಳು ಮೂಡ ಬಹುದು. (ಸಂಭಾಷಣೆ ನಡೆಸುವಾಗ) ಒಳ್ಳೆಯ ವಿಷಯಗಳನ್ನು ಮಾತ್ರ ಮಾತಾಡಿರಿ."

"ನೀವು ಸ್ವ-ಮನೆಗಳಲ್ಲಿ ನಯ ವಿನಯಗಳಿಂದ ಇರಿ. ಹಳೆಯ ಅಜ್ಞಾನ ಕಾಲ ದಂತೆ (ಪರರ ಮುಂದೆ) ಸೌಂದರ್ಯ ಪ್ರದರ್ಶಿಸುತ್ತಾ ನಡೆಯಬೇಡಿರಿ. ನೀವು ನಮಾಝನ್ನು ಕ್ರಮಬದ್ಧವಾಗಿ ಸ್ಥಿರಗೊಳಿಸಿರಿ. ಝಕಾತ್ ನೀಡಿರಿ. ಅಲ್ಲಾಹ್ ಮತ್ತು ಆತನ ಪ್ರವಾದಿ ಯನ್ನು ಅನುಸರಿಸಿರಿ."

"ಪ್ರವಾದಿಯ ಕುಟುಂಬವೇ, ನಿಮ್ಮಿಂದ ಮ್ಲೇಚ್ಛತೆಯನ್ನು ದೂರಗೊಳಿಸಿ. ನಿಮ್ಮನ್ನು ಸಂಪೂರ್ಣ ಪರಿಶುದ್ಧಗೊಳಿಸಲು ಅಲ್ಲಾಹ್ ಬಯಸುತ್ತಾನೆ. ನಿಮ್ಮ ಮನೆಯಲ್ಲಿ ಪಠಿಸ ಲಾಗುವ ಅಲ್ಲಾಹನ ದೃಷ್ಟಾಂತಗಳನ್ನೂ ತತ್ವ ವಾಕ್ಯಗಳನ್ನೂ ಜ್ಞಾಪಿಸುತ್ತಲಿರಿ. ಖಂಡಿತ ವಾಗಿಯೂ ಅಲ್ಲಾಹ್ ಸರ್ವಜ್ಞನೂ ಸೂಕ್ಷ್ಮಜ್ಞನೂ ಆಗಿದ್ದಾನೆ."

## ಪ್ರವಾದಿಯ ಪುತ್ರಿಯರು

# ಹಝ್ರತ್ ಝೈನಬ್(ರ)

**ಹ.** ಝೈನಬ್(ರ) ಪ್ರವಾದಿಯವರ(ಸ) ಹಿರಿಯ ಮಗಳು. ಕಾಸಿಮ್ ಹಿರಿಯ ಪುತ್ರ. ಕಾಸಿಮ್ ಚಿಕ್ಕಂದಿನಲ್ಲಿಯೇ ನಿಧನರಾಗಿದ್ದರು. ಕಾಸಿಮ್‌ರ ಬಳಿಕ ಝೈನಬ್ ಹುಟ್ಟಿದರು. ಝೈನಬ್ ಕಾಸಿಮ್‌ರ ಅಕ್ಕನೆಂದೂ ಕೆಲವು ಇತಿಹಾಸಕಾರರು ಹೇಳಿದ್ದಾರೆ. ಪ್ರವಾದಿತ್ವ ದೊರೆಯುವುದಕ್ಕಿಂತ ಹತ್ತು ವರ್ಷಗಳ ಮುಂಚೆ ಝೈನಬ್ ಜನಿಸಿದ್ದರು. ಆಗ ಪ್ರವಾದಿವರ್ಯರಿಗೆ(ಸ) 30 ಮತ್ತು ಹ. ಖದೀಜರಿಗೆ 45 ವರ್ಷ ಪ್ರಾಯವಾಗಿದ್ದಿತು.

ದಾಂಪತ್ಯ ಜೀವನದಲ್ಲಿ ಅರಳಿದ ಪ್ರಥಮ ಮೊಗ್ಗು ಅಕಾಲದಲ್ಲಿ ಕಮರಿ ಹೋಯಿತು. ಕರುಣಾಳುವಾದ ಅಲ್ಲಾಹನು ಪುನಃ ದಯಪಾಲಿಸಿದ ಮುದ್ದು ಮಗಳು ಝೈನಬ್‌ಳನ್ನು ಪ್ರವಾದಿ(ಸ) ಮತ್ತು ಖದೀಜರು(ರ) ಬಹಳವಾಗಿ ಪ್ರೀತಿಸಿದರು. ಆದರೆ ಆ ಕುಟುಂಬ ಜೀವನವು ಚಿಗುರುವುದಕ್ಕಿಂತ ಮುಂಚಿತವಾಗಿಯೇ ಆ ಪ್ರಶಾಂತ ಜೀವನ ಸಾಗರದಲ್ಲಿ ಅನಿರೀಕ್ಷಿತ ಘಟನಾವಳಿಗಳ ಹೊಸ ತೆರೆಗಳೆದ್ದುವು. ಒಮ್ಮೆಯೂ ನಿಲ್ಲದ ಪ್ರಕ್ಷುಬ್ಧ ತೆರೆಗಳು ತರುವಾಯ ತ್ಯಾಗವೇ ಆ ಜೀವನ ನೌಕೆಯ ಚುಕ್ಕಾಣಿಯಾಯಿತು.

### ವಿವಾಹ

ಹಾಲ ಬಿಂತು ಖುವೈಲಿದ್ ಖದೀಜರ(ರ) ಸಹೋದರಿ. ಹಾಲರಿಗೆ ಅಬುಲ್ ಆಸ್ ಎಂಬೋರ್ವ ಮಗನಿದ್ದನು. ಯುವಕ ಅಬುಲ್ ಆಸ್ ಸಮರ್ಥ ಹಾಗೂ ಯೋಗ್ಯವಾದ ಸುಪ್ರಸಿದ್ಧ ವ್ಯಾಪಾರಿಯಾಗಿದ್ದರು. ಅಬುಲ್ ಆಸ್‌ರಿಗೆ ಝೈನಬ್‌ರನ್ನು ವಿವಾಹ ಮಾಡಿ ಕೊಡಬೇಕೆಂದು ಖದೀಜ ಬಯಸಿದರು. ಮುಹಮ್ಮದ್(ಸ) ಅದಕ್ಕೆ ಒಪ್ಪಿದರು. ಝೈನಬ್‌ರನ್ನು ಅಬುಲ್ ಆಸ್‌ರಿಗೆ ವಿವಾಹ ಮಾಡಿಕೊಟ್ಟರು. ಅಂದು ಝೈನಬ್ ಬಹಳ ಚಿಕ್ಕವ ರಾಗಿದ್ದರು. ಮುಹಮ್ಮದ್‌ರಿಗೆ(ಸ) ಪ್ರವಾದಿತ್ವ ಪದವಿ ದೊರೆತಿರಲಿಲ್ಲ.

ಪ್ರವಾದಿತ್ವ ದೊರೆತಾಗ ಝೈನಬ್ ಇಸ್ಲಾಮ್ ಸ್ವೀಕರಿಸಿದರು. ಆದರೆ ಪತಿಯು ಇಸ್ಲಾಮ್ ಸೇರಲಿಲ್ಲ. ಅವರು ಮುಶ್ರಿಕರಾಗಿಯೇ ಉಳಿದರು. ಮುಸ್ಲಿಮರು ಮತ್ತು ಕಾಫಿರರು ಪರಸ್ಪರ ವಿವಾಹ ಸಂಬಂಧವಿರಿಸಬಾರದೆಂಬ ನಿಯಮವಿದ್ದರೂ ಅಂದು ಆ ನಿಯಮವಿರಲಿಲ್ಲ. ಆದ್ದರಿಂದ ಪ್ರವಾದಿ(ಸ) ಝೈನಬ್ ಮತ್ತು ಅಬುಲ್ ಆಸ್‌ರ ದಾಂಪತ್ಯ ಸಂಬಂಧವನ್ನು ಬೇರ್ಪಡಿಸಲಿಲ್ಲ.

ಅಬುಲ್ ಆಸ್ ಮತ್ತು ಝೈನಬ್‌ರ ದಾಂಪತ್ಯ ಸಂಬಂಧವು ಮಾದರಿ ಯೋಗ್ಯವಾಗಿತ್ತು. ವೈರಿಗಳು ಪ್ರವಾದಿವರ್ಯರನ್ನೂ(ಸ) ಮುಸ್ಲಿಮರನ್ನೂ ಕಠೋರವಾಗಿ ಮರ್ದಿಸುತ್ತಿದ್ದ ಕಾಲ. ಝೈನಬ್‌ರು(ರ) ಮುಸ್ಲಿಮರ ಕಡೆಯಲ್ಲಿಯೂ ಅಬುಲ್ ಆಸ್‌ರು ವೈರಿಗಳ ಕಡೆಯಲ್ಲಿಯೂ ಇದ್ದರು. ಉಭಯತ್ರರೂ ತಂತಮ್ಮ ಕಡೆಯವರಿಗಾಗಿ ವಾದಿಸುತ್ತಿದ್ದರು. ಎಂದಾದರೊಂದು ದಿನ ಪತಿಯು ತನ್ನ ಪಕ್ಷಕ್ಕೆ ಸೇರಬಹುದೆಂದು ಝೈನಬ್‌ರು ಶುಭ ನಿರೀಕ್ಷೆಯಿರಿಸಿದ್ದರು. ಅಬುಲ್ ಆಸ್‌ರು ಮುಶ್ರಿಕರಾಗಿದ್ದರೂ ಆ ಪ್ರೇಮ ಬಂಧಿತ ದಾಂಪತ್ಯ ಜೀವನಕ್ಕೆ ಯಾವ ಲೋಪವೂ ತಟ್ಟಲಿಲ್ಲ. ಅಬುಲ್ ಆಸ್‌ರ ಉತ್ತಮ ನಡವಳಿಕೆಯನ್ನು ಪ್ರವಾದಿ(ಸ) ಮುಕ್ತ ಕಂಠದಿಂದ ಹೊಗಳಿದ್ದಾರೆ.

ಪ್ರವಾದಿಯವರೊಂದಿಗೆ(ಸ) ಎಲ್ಲ ಸಂಬಂಧಗಳನ್ನು ಕಡಿದು, ಅವರ ಪುತ್ರಿಯರ ವಿವಾಹ ವಿಚ್ಛೇದನ ಮಾಡಿಸಲು ಕುರೈಶಿ ನಾಯಕರು ನಿರ್ಧರಿಸಿದರು. ಆ ಪ್ರಕಾರ ಅವರು ಅಬುಲ್ ಆಸ್‌ರ ಬಳಿಗೆ ಬಂದರು. "ಅಬುಲ್ ಆಸ್, ಮುಹಮ್ಮದ್ ನಮ್ಮ ವೈರಿ. ಮುಹಮ್ಮದ್‌ನೊಂದಿಗೆ ನಾವು ಯಾವ ಸಂಬಂಧವನ್ನೂ ಇರಿಸಬಾರದು. ಆದ್ದರಿಂದ ಮುಹಮ್ಮದ್‌ನ ಪುತ್ರಿಯ ವಿವಾಹ ವಿಚ್ಛೇದನ ಮಾಡಿಬಿಡು." "ನನ್ನ ಪತ್ನಿಯನ್ನು ನಾನು ತೊರೆಯಲಾರೆ" ಅಬುಲ್ ಆಸ್ ಹೇಳಿದರು. "ನೀನು ಮೆಚ್ಚುವ ಕುರೈಶರ ಅತಿ ಸುಂದರಿಯಾದ ಯುವತಿಯನ್ನು ನಾವು ನಿನಗೆ ವಿವಾಹ ಮಾಡಿಸಿಕೊಡುತ್ತೇವೆ." ಕುರೈಶಿ ನಾಯಕರು ಆಶೆ ತೋರಿಸಿದರು. "ಅದೆಷ್ಟೇ ಸುಂದರಿಯಾಗಿದ್ದರೂ ನನ್ನ ಪತ್ನಿಯನ್ನು ತೊರೆದು ಬೇರೆ ಸ್ತ್ರೀಯನ್ನು ವಿವಾಹವಾಗಲು ನಾನು ಸಿದ್ಧನಿಲ್ಲ." ಅಬುಲ್ ಆಸ್ ಖಡಾಖಂಡಿತವಾಗಿ ಹೇಳಿದರು. ಕುರೈಶೀ ನಾಯಕರು ಪೆಚ್ಚರಾಗಿ ಮರಳಿ ಹೋದರು.

## ಮಾತೃ ವಿಯೋಗ

ಪ್ರವಾದಿತ್ವ ದೊರೆತ ಎಂಟು ವರ್ಷಗಳ ಬಳಿಕ ಪ್ರಿಯ ಮಾತೆ ನಿಧನರಾದರು. ಅದು ಪ್ರವಾದಿ ಕುಟುಂಬವನ್ನು ದುಃಖ ಸಾಗರದಲ್ಲಿ ಮುಳುಗಿಸಿತು. ಆಗ ಝೈನಬ್‌ರಿಗೆ(ರ) ಹದಿನೆಂಟು ವರ್ಷ ಪ್ರಾಯವಾಗಿತ್ತು. ಉಮ್ಮು ಕುಲ್ಸೂಮ್ ಮತ್ತು ಫಾತಿಮರು ಇನ್ನೂ ಚಿಕ್ಕವರು. ಫಾತಿಮರಿಗೆ ವಿವಾಹವಾಗಿರಲಿಲ್ಲ. ಅದಲ್ಲದೆ ವೈರಿಗಳ ಹಿಂಸೆಯೂ ದಿನೇ ದಿನೇ ಹೆಚ್ಚುತ್ತಿತ್ತು. ಈ ಹಂತದಲ್ಲಿ ತಂದೆಯ ಹಾಗೂ ಸಹೋದರಿಯರ ಏಕಾಧಾರವಾಗಿದ್ದ ತಾಯಿಯು ನಿಧನರಾಗಿದ್ದರು. ವೈರಿಗಳು ತಂದೆಯವರಿಗೆ ನೀಡುತ್ತಿದ್ದ ಹಿಂಸೆಗಳಿಂದ ಹಿರಿಯ ಮಗಳಾಗಿದ್ದ ಝೈನಬ್‌ರ ಮನಸ್ಸಿಗೆ ತುಂಬಾ ನೋವಾಗುತ್ತಿತ್ತು.

ಕೊನೆಗೆ ಪ್ರವಾದಿ(ಸ) ಮದೀನಕ್ಕೆ ಹಿಜ್ರಾ ಹೋದರು. ತಂಗಿಯರೂ ವಲಸೆ ಹೋದರು. ಆದರೆ ಝೈನಬ್‌ರನ್ನು ಅವರ ಪತಿ ಕುಟುಂಬದವರು ಬಿಡಲಿಲ್ಲ. ಅವರು ಪತಿ ಗೃಹದಲ್ಲಿಯೇ ಉಳಿಯಲು ನಿರ್ಬಂಧಿತರಾದರು.

ಬದ್ರ್ ಯುದ್ಧದಲ್ಲಿ ಅಬುಲ್ ಆಸ್‌ರು ಕುರೈಶರೊಂದಿಗೆ ಸೇರಿ ಮುಸ್ಲಿಮರ ವಿರುದ್ಧ ಹೋರಾಡಿದರು. ತಂದೆಯ ವಿರುದ್ಧ ಹೋರಾಡಲು ಪತಿಯು ಹೋಗುತ್ತಾರೆ! ಅದೂ ವಾಮ ಮಾರ್ಗದಲ್ಲಿ! ಝೈನಬ್‌ರ(ರ) ಹೃದಯವು ಅಲ್ಲೋಲ ಕಲ್ಲೋಲವಾಯಿತು. ಝೈನಬ್‌ರಿಗಾಗಿ(ರ) ಬದ್ರ್ ಯುದ್ಧದಲ್ಲಿ ಭಾಗವಹಿಸದಿರಲು ಅಬುಲ್ ಆಸ್‌ರಿಗೆ ಯಾವ ಅಭ್ಯಂತರವೂ ಇಲ್ಲ. ಆದರೆ ಅದೊಂದು ಅಪಮಾನ. ಕುರೈಶರ ಮುಂದೆ ತಲೆಯೆತ್ತಿ ನಡೆಯಲು ಸಾಧ್ಯವಿಲ್ಲ. ಅಬುಲ್ ಆಸ್‌ರು ಕುರೈಶರೊಡನೆ ಯುದ್ಧಕ್ಕೆ ಹೊರಟರು.

ಯುದ್ಧದಲ್ಲಿ ಕುರೈಶರು ಸೋತು ಹೋದರು. ಸುಮಾರು ಎಪ್ಪತ್ತು ಮಂದಿ ಹತರಾದರು. ಅಬುಲ್ ಆಸ್‌ರೂ ಬಂಧಿತರಾಗಿದ್ದರು. ಅವರನ್ನು ಬಿಡುಗಡೆಗೊಳಿಸಲಿಕ್ಕಾಗಿ ಮಕ್ಕಾದಲ್ಲಿರುವ ಅವರ ಸಂಬಂಧಿಕರು ಪರಿಹಾರ ಧನವನ್ನು ಕೊಟ್ಟು ಕಳುಹಿಸಿದರು. ಪತಿಯ ವಿಮೋಚನೆಗಾಗಿ ಝೈನಬ್‌ರೂ(ರ) ತಮ್ಮ ಬೆಲೆಬಾಳುವ ಸರವನ್ನು ಅಮ್ರ್ ಬಿನ್ ರಬೀಅ್‌ರ ಮೂಲಕ ಕಳುಹಿಸಿಕೊಟ್ಟರು. ಝೈನಬ್‌ರ(ರ) ವಿವಾಹ ವೇಳೆ ಖದೀಜರು(ರ) ಆ ಸರವನ್ನು ಕೊಡುಗೆ ನೀಡಿದ್ದರು. ಸರವನ್ನು ಕಂಡ ಪ್ರವಾದಿ(ಸ) ಭಾವಪರವಶವಾದರು. ಕಣ್ಣುಗಳು ಹನಿಗೂಡಿದುವು. ಖದೀಜರ(ರ) ಪಾವನ ಸ್ಮರಣೆಯು ಅವರನ್ನು ಕಾಡಿತು. ಆ ಸರವು ಮಗಳಿಗೆ ಮಾತೆಯ ಪ್ರೇಮದ ಪ್ರತೀಕ ಮತ್ತು ಸ್ಮಾರಕವಾಗಿತ್ತು. ಪ್ರವಾದಿ(ಸ) ಸಹಾಬರನ್ನು ನೋಡಿ ಹೇಳಿದರು: "ಇದು ಝೈನಬ್‌ರಿಗೆ ಖದೀಜರು ಬಹುಮಾನವಾಗಿ ನೀಡಿದ ಸರ. ನಿಮಗೆ ಒಪ್ಪಿಗೆಯಿದ್ದರೆ ಈ ಸರವನ್ನು ಅವರಿಗೇ ಮರಳಿಸಿರಿ." ಸಹಾಬಿಗಳು ನಿರಾಕರಿಸಲಿಲ್ಲ. ಸರವನ್ನು ಝೈನಬ್‌ರಿಗೆ(ರ) ಮರಳಿ ಕಳುಹಿಸಿದರು. ಮಕ್ಕಾಕ್ಕೆ ತಲುಪಿದೊಡನೆಯೇ ಝೈನಬ್‌ರನ್ನು ಕಳುಹಿಸಬೇಕೆಂಬ ಶರತ್ತಿನಲ್ಲಿ ಅಬುಲ್ ಆಸ್‌ರನ್ನು ಬಿಡುಗಡೆಗೊಳಿಸಿದರು.

ಅಬುಲ್ ಆಸ್ ಬಂಧನದಿಂದ ಮರಳುವಾಗ ಪ್ರವಾದಿವರ್ಯರು(ಸ) ಝೈದ್ ಬಿನ್ ಹಾರಿಸ್(ರ) ಮತ್ತು ಇನ್ನೊಬ್ಬರನ್ನು ಅವರೊಂದಿಗೆ ಕಳುಹಿಸಿದರು. ನೀವು ಬತನ್‌ಯಾಜಿನಲ್ಲಿ ಹೋಗಿ ತಂಗಬೇಕೆಂದೂ ಝೈನಬ್‌ರು ಅಲ್ಲಿಗೆ ತಲುಪಿದರೆ ಅವರನ್ನು ಮದೀನಕ್ಕೆ ಕರೆತರಬೇಕೆಂದೂ ಅವರಿಗೆ ಸೂಚನೆಯಿತ್ತರು. ಈರ್ವರೂ ಬತನ್‌ಯಾಜಿಗೆ ತಲಪಿ ಝೈನಬ್‌ರ ಆಗಮನವನ್ನು ಕಾದು ಕುಳಿತರು.

## ಕುರೈಶರ ಕಠೋರತೆ

ಅಬುಲ್ ಆಸ್ ಮಕ್ಕಾ ತಲಪಿದೊಡನೆಯೇ ಝೈನಬ್‌ರಿಗೆ ಮದೀನಕ್ಕೆ ಹೋಗುವ ಅನುಮತಿ ನೀಡಿದರು. ಇಸ್ಲಾಮಿಗಾಗಿ ಅವಿಶ್ವಾಸಿ ಪತಿಯನ್ನು ತೊರೆದು ಮದೀನಕ್ಕೆ ತೆರಳಲು ಝೈನಬ್(ರ) ಸಿದ್ಧರಾದರು. ಕುರೈಶರ ಕಣ್ಣಿಗೆ ಬೀಳದೆ ಹೋಗಬೇಕು. ಝೈನಬ್ ರಹಸ್ಯವಾಗಿ ಯಾತ್ರೆಯ ಸನ್ನಾಹ ಮಾಡುತ್ತಿರುವಾಗ ಹಿಂದ್ ಎಂಬ ಹೆಸರಿನ

ಓರ್ವ ಮಹಿಳೆಯು ಅಲ್ಲಿಗೆ ಬಂದರು. "ಝೈನಬ್! ತಂದೆಯ ಬಳಿಗೆ ಹೋಗುವಿರಾ?" ಹಿಂದ್ ಪ್ರಶ್ನಿಸಿದರು.

"ಈಗ ಅಂತಹ ಬಯಕೆಯಿಲ್ಲ." ಝೈನಬ್ ನುಣುಚಿಕೊಳ್ಳಲು ಪ್ರಯತ್ನಿಸಿದರು. "ನನ್ನ ಬಗ್ಗೆ ಸಂಶಯ ಬೇಡ. ಏನಾದರೂ ಅಗತ್ಯವಿದ್ದರೆ ಹೇಳಿ. ನಾನು ಪೂರೈಸುತ್ತೇನೆ. ನಾವು ಸ್ತ್ರೀಯರಲ್ಲವೇ? ಪುರುಷರಂತೆ ಕನಿಕರವಿಲ್ಲದವರೇ?" ಹಿಂದ್ ತನ್ನ ನಿಸ್ವಾರ್ಥತೆಯನ್ನು ಬಹಿರಂಗಪಡಿಸಿದರು. ಆದರೆ ಝೈನಬ್‌ರು(ರ) ಬಹಳ ಜಾಣ್ಮೆಯಿಂದ ವರ್ತಿಸಿದರು. ತಮ್ಮ ಗುಟ್ಟನ್ನು ರಟ್ಟು ಮಾಡಲಿಲ್ಲ.

ಸಿದ್ಧತೆಗಳು ಪೂರ್ಣಗೊಂಡ ಬಳಿಕ ಪತಿಯ ಸಹೋದರ ಕಿನಾನರೊಂದಿಗೆ ಮದೀನಕ್ಕೆ ಹೊರಟರು. ಪಯಣವು ಬಹಳ ಗುಪ್ತವಾಗಿತ್ತು. ಆದರೆ ಇದು ಕುರೈಶರಿಗೆ ಹೇಗೋ ತಿಳಿದು ಬಿಟ್ಟಿತು. ಕೆಲವಾರು ಕುರೈಶರು ಅವರನ್ನು ಹಿಂಬಾಲಿಸಿದರು. ದೀತುವಾ ಎಂಬ ಸ್ಥಳಕ್ಕೆ ತಲಪಿದಾಗ ಕುರೈಶರು ಅವರನ್ನು ಸುತ್ತುವರಿದರು. ಹುಬಾರ್ ಬಿನ್ ಅಸ್ವದ್ ಎಂಬೋರ್ವ ಕ್ರೂರ ಹೃದಯನು ಝೈನಬ್‌ರನ್ನು ಒಂಟೆಯ ಮೇಲಿನಿಂದ ಬಾಣದಿಂದ ಕೆಳಗೆ ಬೀಳಿಸಿದನು. ಝೈನಬ್(ರ) ಗರ್ಭಿಣಿಯಾಗಿದ್ದರು. ಬಿದ್ದಾಗ ಗರ್ಭವು ಛಿದ್ರವಾಯಿತು. ತೀವ್ರ ಗಾಯವಾಯಿತು. ಕುಪಿತರಾದ ಕಿನಾನರು ಬತ್ತಳಿಕೆಯಿಂದ ಬಾಣ ತೆಗೆದು ಬಿಲ್ಲಿಗೆ ಹೂಡಿದರು. ಹತ್ತಿರ ಬಂದರೆ ಕೊಂದು ಬಿಡುವೆನೆಂದು ಎಚ್ಚರಿಸಿದರು. ಅಕ್ರಮಿಗಳು ಹಿಂಜರಿದರು.

ಅಷ್ಟರಲ್ಲಿ ಅಬೂ ಸುಫ್‌ಯಾನ್ ಮತ್ತು ಪರಿವಾರವು ಅಲ್ಲಿಗೆ ಬಂದು ತಲಪಿತು. ಅಬೂ ಸುಫ್‌ಯಾನ್ ಕಿನಾನರೊಡನೆ ಹೇಳಿದರು: "ಮುಹಮ್ಮದನ ಕೈಯಿಂದ ನಮಗಾಗಿರುವ ಸೋಲು ಮತ್ತು ಅಪಮಾನ ನಿನಗೆ ತಿಳಿದಿದೆಯಷ್ಟೆ. ಇಂತಹ ಪರಿಸ್ಥಿತಿಯಲ್ಲಿ ಮುಹಮ್ಮದನ ಮಗಳನ್ನು ಬಹಿರಂಗವಾಗಿ ನಮ್ಮ ಅಧೀನದಿಂದ ತೆಗೆದುಕೊಂಡು ಹೋದರೆ ಜನರು ಅದನ್ನು ನಮ್ಮ ದೌರ್ಬಲ್ಯ ಮತ್ತು ಹೇಡಿತನವೆಂದು ಟೀಕಿಸಬಹುದು. ಮುಹಮ್ಮದನ ಮಗಳನ್ನು ತಡೆಯುವ ಯಾವ ಅಗತ್ಯವೂ ನಮಗಿಲ್ಲ. ಪರಿಸ್ಥಿತಿ ಶಾಂತವಾದರೆ ನೀವು ಆಕೆಯನ್ನು ರಹಸ್ಯವಾಗಿ ಕರೆದೊಯ್ಯಬಹುದು. ಅದರಿಂದ ನಾವು ಅಪಮಾನಿತರಾಗುವುದು ತಪ್ಪುವುದಲ್ಲವೇ?" ಅಬೂ ಸುಫ್‌ಯಾನ್‌ರ ಅಭಿಪ್ರಾಯವನ್ನು ಮನ್ನಿಸಿ ಕಿನಾನರು ಝೈನಬ್‌ರನ್ನು(ರ) ಮರಳಿ ಮನೆಗೆ ಕರೆದೊಯ್ದರು.

## ವಿರಹ ವೇದನೆ

ಕೆಲವು ದಿನಗಳ ನಂತರ ಗಲಭೆಯೆಲ್ಲವೂ ಕೊನೆಗೊಂಡ ಬಳಿಕ ಕಿನಾನ ಝೈನಬ್‌ರನ್ನು(ರ) ಕರೆದುಕೊಂಡು ರಹಸ್ಯವಾಗಿ ಮದೀನಕ್ಕೆ ಹೊರಟರು. ವೈರಿಗಳ ಕಣ್ಣಿಗೆ ಬೀಳದೆ ಅವರು ಬತನ್‌ಯಾಜ್‌ಗೆ ತಲಪಿದರು. ಅಲ್ಲಿ ಝೈದ್ ಬಿನ್ ಹಾರಿಸ್(ರ) ಮತ್ತು

ಸಂಗಡಿಗ ಕಾದು ನಿಂತಿದ್ದರು. ಝೈನಬ್‌ರನ್ನು(ರ) ಅವರಿಗೆ ವಹಿಸಿಕೊಟ್ಟು ಕಿನಾನ ಮಕ್ಕಾಕ್ಕೆ ಮರಳಿದರು. ಝೈದ್ ಮತ್ತು ಸಂಗಡಿಗರು ಝೈನಬ್‌ರನ್ನು(ರ) ಮದೀನಕ್ಕೆ ಕರೆದೊಯ್ದರು.

ಪತ್ನಿಯ ಅಗಲಿಕೆಯು ಅಬುಲ್ ಆಸ್‌ರನ್ನು ದುಃಖಿಕ್ಕೀಡು ಮಾಡಿತು. ಝೈನಬ್‌ರ(ರ) ಸ್ಮರಣೆಯು ಅವರ ಮನಸ್ಸನ್ನು ಪದೇ ಪದೇ ಕಾಡುತ್ತಿತ್ತು. ಇಸ್ಲಾಮ್ ಸ್ವೀಕರಿಸಿ ಮದೀನಕ್ಕೆ ವಲಸೆ ಹೋಗದೆ ಪತಿಯಾಗಿರಲು ಸಾಧ್ಯವಿಲ್ಲ. ಆದರೆ ಅದು ಅವಮರ್ಯಾದೆಯಲ್ಲವೇ?

ಒಮ್ಮೆ ಸಿರಿಯಕ್ಕೆ ಯಾತ್ರೆ ಹೋಗುತ್ತಿದ್ದಾಗ ದಾರಿ ಮಧ್ಯದಲ್ಲಿ ಝೈನಬ್‌ರ(ರ) ಸ್ಮರಣೆಯು ಅಬುಲ್ ಆಸ್‌ರನ್ನು ಬಹಳವಾಗಿ ಕಾಡಿತು. ಅವರು ಈ ರೀತಿ ಹಾಡಿದರು: "ಇರಮಿನಿಂದ ಹಾದು ಹೋಗುವಾಗ ನನ್ನ ಮನಸ್ಸು ಝೈನಬ್‌ರನ್ನು ಸ್ಮರಿಸಿತು. ಹರಮಿನಲ್ಲಿ ವಾಸವಾಗಿರುವ ಆ ಮಹಿಳಾರತ್ನದ ಜೀವನವು ಸದಾ ಹಚ್ಚಹಸುರಾಗಿರಲಿ. ಅಮೀನ್‌ರ ಮುದ್ದು ಮಗಳಿಗೆ ಅಲ್ಲಾಹನು ಉತ್ತಮ ಪ್ರತಿಫಲ ನೀಡಿ ಅನುಗ್ರಹಿಸಲಿ. ಪತ್ನಿಯರ ಸದ್ಗುಣಗಳನ್ನು ಉತ್ತಮ ಪತಿಯರು ಹೊಗಳುತ್ತಾರೆ."

## ಅಭಯಾರ್ಥಿ

ವ್ಯಾಪಾರಕ್ಕಾಗಿ ಸಿರಿಯಕ್ಕೆ ಹೋಗಿದ್ದ ಅಬುಲ್ ಆಸ್ ಮತ್ತು ಸಂಗಡಿಗರು ಮರಳಿ ಬರುತ್ತಿದ್ದರು. ಕುರೈಶರ ಸರಕುಗಳು ಅವರ ಬಳಿಯಿದ್ದುವು. ಅದು ಕುರೈಶರು ಪ್ರವಾದಿಯೊಂದಿಗೆ ಯುದ್ಧ ಸಾರಿದ ಕಾಲವಾಗಿತ್ತು. ವೈರಿಗಳ ವರ್ತಕ ತಂಡವು ಆ ಮಾರ್ಗವಾಗಿ ಹೋಗುತ್ತಿದೆ ಯೆಂದರಿತು ಝೈದ್ ಬಿನ್ ಹಾರಿಸ್‌ರ(ರ) ನಾಯಕತ್ವದಲ್ಲಿ ಒಂದು ಸಣ್ಣ ಸೇನೆಯು ಅತ್ತ ಹೊರಟಿತು. ಐಸ್ ಎಂಬ ಸ್ಥಳದಲ್ಲಿ ವರ್ತಕ ತಂಡವನ್ನು ಸಂಧಿಸಿದರು. ಝೈದ್ ಬಿನ್ ಹಾರಿಸ್(ರ) ಮತ್ತು ಅವರ ಸೇನೆಯು ವರ್ತಕ ತಂಡವನ್ನು ಬಂಧಿಸಿ ಅವರ ಸರಕುಗಳನ್ನು ವಶಪಡಿಸಿಕೊಂಡರು. ಅಬುಲ್ ಆಸ್‌ರು ಬಂಧನಕ್ಕೆ ಸಿಲುಕದೆ ಪಾರಾದರು. ಸರಕುಗಳನ್ನೆಲ್ಲ ಕಳೆದುಕೊಂಡು ಬರಿಗೈಯಲ್ಲಿ ಮಕ್ಕಾಕ್ಕೆ ಮರಳಲು ಅಬುಲ್ ಆಸ್‌ರಿಗೆ ಇಷ್ಟವಾಗಲಿಲ್ಲ. ಅವರು ಮದೀನಕ್ಕೆ ಓಡಿದರು. ಝೈನಬ್‌ರ ಮನೆಯಲ್ಲಿ ಅಭಯ ಪಡೆದರು.

ಪ್ರವಾದಿ(ಸ) ಪ್ರಭಾತ ನಮಾಝ್ ನಿರ್ವಹಿಸುತ್ತಿದ್ದರು. ಬೆಳಗಾಗಿರಲಿಲ್ಲ. ಝೈನಬ್‌ರು(ರ) ಗಟ್ಟಿಯಾಗಿ ಕೂಗಿ ಹೇಳಿದರು: "ಅಬುಲ್ ಆಸ್‌ರಿಗೆ ನಾನು ಅಭಯ ನೀಡಿದ್ದೇನೆ." (ವೈರಿಗೆ ಓರ್ವ ಮುಸ್ಲಿಮ್ ಅಭಯ ನೀಡಿದರೆ ಆತನನ್ನು ಇತರ ಮುಸ್ಲಿಮರು ಉಪದ್ರವಿಸಬಾರದು.) ನಮಾಝಿನ ಬಳಿಕ ಪ್ರವಾದಿ(ಸ) ಸಹಾಬರೊಡನೆ ಪ್ರಶ್ನಿಸಿದರು: "ನೀವೊಂದು ಶಬ್ದ ಕೇಳಿದಿರಾ?" "ನಾವು ಆಲಿಸಿದ್ದೇವೆ" ಸಹಾಬರು ಉತ್ತರಿಸಿದರು. "ನಾನೂ ನಿಮ್ಮಂತೆಯೇ ಅದನ್ನು ಪ್ರಥಮವಾಗಿ ಕೇಳುತ್ತಿದ್ದೇನೆ. ಈ ಮುಂಚೆ ನನಗೆ ಆ ವಿಷಯ ತಿಳಿದಿರಲಿಲ್ಲ" ಪ್ರವಾದಿ(ಸ) ಹೇಳಿದರು.

ಬೆಳಗಾತ ಝೈನಬ್‌ರು ಪ್ರವಾದಿಯ(ಸ) ಬಳಿಗೆ ಬಂದರು. ಅಬುಲ್ ಆಸ್‌ರ ಸಾಮಾನುಗಳನ್ನು ಹಿಂತಿರುಗಿಸಬೇಕೆಂದೂ ಶಿಫಾರಸು ಮಾಡಿದರು. ಝೈನಬ್‌ರ(ರ) ಪ್ರೇಮದಿಂದಾಗಿ ಅಬುಲ್ ಆಸ್‌ರಿಗೆ ಇಸ್ಲಾಮಿನೊಂದಿಗೆ ದ್ವೇಷವಿರಲಿಲ್ಲ. ಬದ್ರ್‌ನ ವರ್ತನೆಯೂ ಅವರನ್ನು ಆಕರ್ಷಿಸಿತ್ತು. ವಶಪಡಿಸಿಕೊಂಡಿರುವ ಸಾಮಾನುಗಳನ್ನು ಮರಳಿಸಿದರೆ ಅಬುಲ್ ಆಸ್‌ರನ್ನು ಇಸ್ಲಾಮಿಗೆ ಆಕರ್ಷಿಸಬಹುದೆಂದು ಪ್ರವಾದಿ(ಸ) ಊಹಿಸಿದ್ದರು. ಮಗಳ ಶಿಫಾರಸ್ಸಿನಂತೆ ಅಬುಲ್ ಆಸ್‌ರ ಸಾಮಾನುಗಳನ್ನು ಹಿಂತಿರುಗಿಸಬೇಕೆಂದು ಪ್ರವಾದಿ(ಸ) ಝೈದ್‌ರಿಗೆ(ರ) ಆಜ್ಞಾಪಿಸಿದರು. ಅಬುಲ್ ಆಸ್‌ರೊಡನೆ ಸ್ನೇಹದಿಂದ ವರ್ತಿಸುವಂತೆ ಹಾಗೂ ಅವರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸುವಂತೆ ಝೈನಬ್‌ರಿಗೆ(ರ) ಉಪದೇಶಿಸಿದರು. ಆದರೆ ಪತ್ನಿಯೆಂಬ ನೆಲೆಯಲ್ಲಿ ಒಡನಾಡಲು ಅನುಮತಿಸಬಾರದೆಂದೂ ಎಚ್ಚರಿಕೆ ನೀಡಿದರು.

## ಪುನಃ ಪತಿಯೊಂದಿಗೆ

ವಸ್ತು ಒಡವೆಗಳೆಲ್ಲ ಮರಳಿ ದೊರೆತ ಬಳಿಕ ಅಬುಲ್ ಆಸ್ ಮಕ್ಕಾಕ್ಕೆ ಮರಳಿದರು. ಕುರೈಶರ ವಸ್ತುಗಳನ್ನು ಅವರಿಗೆ ಮರಳಿಸಿದರು. ಲೆಕ್ಕ ಚುಕ್ತಾಗೊಳಿಸಿದರು. ದಿನಗಳುರುಳಿದುವು. ಅದೊಂದು ದಿನ ಕುರೈಶರೊಡನೆ ಹೀಗೆಂದರು: "ನಿಮ್ಮ ಪೈಕಿ ಯಾರಿಗಾದರೂ ನನ್ನಿಂದ ಯಾವ ಋಣವಾದರೂ ಸಲ್ಲಲಿಕ್ಕಿದೆಯೇ?" 'ಇಲ್ಲ' ಕುರೈಶರು ಹೇಳಿದರು. "ನೀವು ಸಭ್ಯ ಮತ್ತು ಪ್ರಾಮಾಣಿಕರಾಗಿದ್ದೀರಿ. ಅಲ್ಲಾಹನು ನಿಮಗೆ ಪ್ರತಿಫಲವನ್ನು ನೀಡಲಿ." "ಹಾಗಿದ್ದರೆ ಆಲಿಸಿರಿ. ನಾನು ಇಸ್ಲಾಮ್ ಧರ್ಮವನ್ನು ಸ್ವೀಕರಿಸುತ್ತೇನೆ." ಅಬುಲ್ ಆಸ್‌ರು ಗಟ್ಟಿಯಾಗಿ ಪವಿತ್ರ ವಾಕ್ಯವನ್ನು ಉಚ್ಚರಿಸಿದರು, "ನಾನು ಪ್ರವಾದಿವರ್ಯರ(ಸ) ಸಮ್ಮುಖದಲ್ಲಿ ಇಸ್ಲಾಮ್ ಸ್ವೀಕರಿಸದಿರುವುದಕ್ಕೆ ಬೇರೆ ಯಾವ ಕಾರಣವೂ ಇದ್ದಿರಲಿಲ್ಲ. ಒಂದು ವೇಳೆ ನಾನು ಹಾಗೆ ಮಾಡಿದ್ದರೆ ನಿಮ್ಮ ಹಣ ಕಬಳಿಸಲಿಕ್ಕಾಗಿ ನಾನು ಇಸ್ಲಾಮ್ ಸ್ವೀಕರಿಸಿದೆನೆಂದು ನೀವು ಆರೋಪಿಸಬಹುದು. ಈಗ ನಾನು ನಿಮ್ಮ ಎಲ್ಲ ಲೆಕ್ಕಗಳನ್ನೂ ಚುಕ್ತಗೊಳಿಸಿದ್ದೇನೆ. ಇನ್ನು ಇಸ್ಲಾಮ್ ಸ್ವೀಕರಿಸಲು ಯಾವ ಅಡ್ಡಿಯೂ ಇಲ್ಲ."

ಕುರೈಶರು ಮುಖ ಮುಖ ನೋಡುತ್ತಿದ್ದಂತೆಯೇ ಅಬುಲ್ ಆಸ್ ಅಲ್ಲಿಂದ ಹೊರಟು ಹೋದರು. ತಕ್ಷಣವೇ ಮದೀನಕ್ಕೆ ವಲಸೆ ಹೋದರು. ಪ್ರವಾದಿವರ್ಯರು(ಸ) ಅಬುಲ್ ಆಸ್‌ರನ್ನು ಸ್ವಾಗತಿಸಿ ಝೈನಬ್‌ರನ್ನು(ರ) ಪುನಃ ಅವರಿಗೆ ವಹಿಸಿಕೊಟ್ಟರು. ಸುದೀರ್ಘ ಕಾಲದ ಅಗಲಿಕೆಯ ಬಳಿಕ ಅಬುಲ್ ಆಸ್ ಮತ್ತು ಝೈನಬ್(ರ) ಪುನಃ ಸತಿಪತಿಯಾದರು.

## ಸಂತಾನಗಳು

ಅಬುಲ್ ಆಸ್‌ರಿಗೆ ಝೈನಬ್‌ರಲ್ಲಿ(ರ) ಎರಡು ಮಕ್ಕಳು ಹುಟ್ಟಿದರು. ಅಲಿ ಮತ್ತು ಉಮಾಮ. ಅಲಿ ಪ್ರವಾದಿಯವರ(ಸ) ಸಂರಕ್ಷಣೆಯಲ್ಲಿ ಬೆಳೆದರು. ಮಕ್ಕಾ ವಿಜಯದ ವೇಳೆ ಪ್ರವಾದಿಯವರ(ಸ) ಒಂಟೆಯ ಮೇಲೆ ಅಲಿಯವರೂ ಇದ್ದರು. ಅಬುಲ್ ಆಸ್‌ರ ಜೀವನಾವಧಿಯಲ್ಲಿಯೇ ಅಲೀ ನಿಧನ ಹೊಂದಿದರೆಂದೂ ಯರ್ಮೂಕ್ ಯುದ್ಧದಲ್ಲಿ ಮರಣ ಹೊಂದಿದರೆಂದೂ ಎರಡು ಅಭಿಪ್ರಾಯಗಳಿವೆ.

ಪ್ರವಾದಿಗೆ(ಸ) ಉಮಾಮರೊಡನೆ ಬಹಳ ಪ್ರೀತಿಯಿತ್ತು. ಪ್ರವಾದಿ(ಸ) ನಮಾಝ್ ಮಾಡುವಾಗ ಉಮಾಮರು ಅವರ ಭುಜದ ಮೇಲೆ ಹತ್ತಿ ಆಡುತ್ತಿದ್ದರು. ಫಾತಿಮರು(ರ) ನಿಧನರಾದ ಬಳಿಕ ಅಲೀ ಬಿನ್ ಅಬೀತಾಲಿಬ್‌ರು(ರ) ಉಮಾಮರನ್ನು ವಿವಾಹವಾಗಿದ್ದರು. ಅಲೀಯವರು(ರ) ಹುತಾತ್ಮ ಅವರ ಕೊನೆಯ ಹೇಳಿಕೆಯಂತೆ(ವಸಿಯ್ಯತ್) ಮುಗೀರ ಬಿನ್ ನೌಫಲ್‌ರು ಉಮಾಮರನ್ನು ವಿವಾಹವಾದರು.

## ನಿಧನ

ಮಕ್ಕಾದಿಂದ ಮದೀನಕ್ಕೆ ಹೊರಟಾಗ ವೈರಿಗಳ ಆಕ್ರಮಣದಿಂದಾಗಿ ಒಂಟೆಯ ಮೇಲಿಂದ ಕೆಳಗೆ ಬಿದ್ದು ಗರ್ಭವು ಛಿದ್ರವಾಗಿ ಗಾಯಗೊಂಡ ಬಳಿಕ ಝೈನಬ್‌ರು ರೋಗಪೀಡಿತರಾಗಿದ್ದರು. ತರುವಾಯ ಆರೋಗ್ಯ ಉತ್ತಮವಾಗಲಿಲ್ಲ. ಅಬುಲ್ ಆಸ್ ಮದೀನಕ್ಕೆ ಬಂದು ಎರಡು ವರ್ಷ ಪೂರ್ಣವಾಗುವುದರೊಳಗೆ ಹ. ಝೈನಬ್(ರ) ನಿಧನರಾದರು. ಅದು ಹಿಜರಿ ಎಂಟನೇ ವರ್ಷ. ಆಗ ಅವರಿಗೆ ಸುಮಾರು 31 ವರ್ಷ ಪ್ರಾಯವಾಗಿತ್ತು. ಉಮ್ಮು ಐಮನ್, ಸೌದ ಮತ್ತು ಉಮ್ಮು ಸಲ್ಮರು ಅವರ ಕಳೇಬರದ ಸ್ನಾನ ಮಾಡಿಸಿದರು. ಪ್ರವಾದಿ(ಸ) ಮತ್ತು ಅಬುಲ್ ಆಸ್ ಕಳೇಬರವನ್ನು ಸಮಾಧಿಯೊಳಕ್ಕೆ ಇಳಿಸಿದರು. ಪ್ರವಾದಿಯ(ಸ) ಮುಖದಲ್ಲಿ ವಿಷಾದ ಆವರಿಸಿತ್ತು. ಸಮಾಧಿಗೆ ಇಳಿಸುತ್ತಿರುವಾಗ ಶೋಕಭರಿತರಾಗಿ ಪ್ರವಾದಿ(ಸ) ಪ್ರಾರ್ಥಿಸಿದರು: "ಅಲ್ಲಾಹನೇ, ಝೈನಬಳ ಕಷ್ಟಗಳನ್ನು ನಿವಾರಿಸು. ಆಕೆಯ ಸಮಾಧಿಯನ್ನು ವಿಶಾಲಗೊಳಿಸು."

ಕೆಲವೇ ಕಾಲದ ಬಳಿಕ ಝೈನಬ್‌ರ(ರ) ಪತಿ ಅಬುಲ್ ಆಸ್‌ರೂ ನಿಧನರಾದರು.

# ಹರ್ಝ್ರತ್ ರುಕಿಯ್ಯ ಮತ್ತು ಉಮ್ಮು ಕುಲ್ಸೂಮ್(ರ)

ಹರ್ಝ್ರತ್ ರುಕಿಯ್ಯ(ರ) ಪ್ರವಾದಿಯವರ(ಸ) ದ್ವಿತೀಯ ಪುತ್ರಿ. ಪ್ರವಾದಿತ್ವ ದೊರೆಯುವುದಕ್ಕಿಂತ ಏಳು ವರ್ಷ ಮುಂಚೆ ರುಕಿಯ್ಯ ಜನಿಸಿದರು. ರುಕಿಯ್ಯರ(ರ) ಜನನ ವೇಳೆ ಪ್ರವಾದಿವರ್ಯರಿಗೆ(ಸ) ಮೂವತ್ತಮೂರು ಮತ್ತು ಖದೀಜರಿಗೆ(ರ) ನಲ್ವತ್ತೆಂಟು ವರ್ಷ ಪ್ರಾಯವಾಗಿತ್ತು.

ಬಾಲ್ಯದಲ್ಲಿಯೇ ರುಕಿಯ್ಯರ ವಿವಾಹ ನಡೆಯಿತು. ಪ್ರವಾದಿಯ(ಸ) ಚಿಕ್ಕಪ್ಪ ಅಬೂಲಹಬ್‌ರ ಹಿರಿಯ ಪುತ್ರ ಉತ್ಬರನ್ನು ವರನಾಗಿ ಆರಿಸಲಾಗಿತ್ತು. ಸುಂದರಿ ಹಾಗೂ ಸುಶೀಲೆಯಾಗಿರುವ ರುಕಿಯ್ಯರನ್ನು ವಿವಾಹವಾಗಬೇಕೆಂದು ಉಸ್ಮಾನ್ ಬಿನ್ ಅಫ್ಫಾನ್ ಬಯಸಿದ್ದರು. ಉತ್ಬರಿಗೆ ಅವರನ್ನು ವಿವಾಹ ಮಾಡಿ ಕೊಡಲಾಯಿತೆಂದರಿತು ಅವರು ಬಹಳ ದುಃಖಿತರಾಗಿದ್ದರು.

## ವಿವಾಹ ವಿಚ್ಛೇದನ ಮತ್ತು ಮರುವಿವಾಹ

ಪ್ರವಾದಿತ್ವದ ಪ್ರಾರಂಭದ ಮೂರು ವರ್ಷಗಳಲ್ಲಿ ಪ್ರವಾದಿವರ್ಯರು(ಸ) ಗುಪ್ತವಾಗಿ ಇಸ್ಲಾಮೀ ಪ್ರಚಾರ ನಡೆಸುತ್ತಿದ್ದರು. ಬಹಿರಂಗವಾಗಿ ಇಸ್ಲಾಮಿನ ಪ್ರಚಾರ ಮಾಡುವ ಹಾಗೂ ಹತ್ತಿರದ ಸಂಬಂಧಿಕರಿಗೆ ಪ್ರಥಮವಾಗಿ ಎಚ್ಚರಿಕೆ ನೀಡುವ ಆಜ್ಞೆಯಾದಾಗ ಪ್ರವಾದಿವರ್ಯರು(ಸ) ಗೋತ್ರದವರನ್ನು ಸಫಾ ಬೆಟ್ಟದ ಬಳಿ ಒಂದುಗೂಡಿಸಿದರು. ಅವರೊಡನೆ ಪ್ರಶ್ನಿಸಿದರು: "ಈ ಬೆಟ್ಟದಾಚೆ ಒಂದು ಸೇನೆಯಿದೆ. ಅದು ನಿಮ್ಮನ್ನು ಆಕ್ರಮಿಸಲು ಹೊಂಚು ಹಾಕುತ್ತಿದೆಯೆಂದು ನಾನು ಹೇಳಿದರೆ ನೀವು ನಂಬುವಿರಾ?" ಎಲ್ಲರೂ ಒಕ್ಕೊರಳಿನಿಂದ ಹೇಳಿದರು: "ಖಂಡಿತವಾಗಿಯೂ ನಾವು ಅದನ್ನು ನಂಬುತ್ತೇವೆ. ಯಾಕೆಂದರೆ ನೀವು ನಮ್ಮೊಡನೆ ಒಮ್ಮೆಯೂ ಸುಳ್ಳು ಹೇಳಿಲ್ಲ." ಆಗ ಪ್ರವಾದಿ(ಸ) ಹೀಗೆಂದರು: "ಅಲ್ಲಾಹನು ಏಕನು. ಆತನಿಗೆ ಸಹಭಾಗಿಗಳಿಲ್ಲ. ಕೇವಲ ಆತನನ್ನೇ ನೀವು ಆರಾಧಿಸಿರಿ. ನೀವು ಅದರಿಂದ ಹಿಂದೆ ಸರಿದರೆ ಅಲ್ಲಾಹನ ಕಠೋರ ಶಿಕ್ಷೆಯು ನಿಮ್ಮ ಮೇಲೆ ಬಂದೆರಗುವುದೆಂದು ನಾನು ಎಚ್ಚರಿಕೆ ನೀಡುತ್ತೇನೆ."

ಇದನ್ನು ಕೇಳಿ ಅಬೂಲಹಬ್ ರೋಷಾಕುಲರಾದರು. "ನೀನು ನಾಶವಾಗು. ಇದಕ್ಕಾಗಿ ನೀನು ನಮ್ಮನ್ನು ಕರೆದೆಯಾ?" ಎಂದು ಕೇಳಿದನು. ಆತ ಪ್ರವಾದಿಯವರನ್ನು(ಸ) ಶಪಿಸಿದನು. ಈ ಘಟನೆಯ ಬಳಿಕ ಅಬೂಲಹಬ್ ಮತ್ತು ಆತನ ಪತ್ನಿ ಉಮ್ಮು ಜಮೀಲಳನ್ನು ಹಳಿಯುವ 'ತಬ್ಬತ್' ಸೂರಃ ಅವತೀರ್ಣಗೊಂಡಿತು. ಉಮ್ಮು ಜಮೀಲ್ ಕೋಪದಿಂದ ಕಿಡಿ ಕಿಡಿಯಾದಳು. ಮಾರಿಯಂತೆ ಆ ಸ್ತ್ರೀಯು ಮಗನ ಬಳಿಗೆ ಧಾವಿಸಿದಳು. "ಎಲೈ ಉತ್ಬಾ, ನೀನು ಮುಹಮ್ಮದನ ಪುತ್ರಿ ರುಕಿಯ್ಯಳನ್ನು ವಿವಾಹ ವಿಚ್ಛೇದನ ಮಾಡದಿದ್ದರೆ ನನ್ನ ಜೀವನವು ಹರಾಮ್. ಅದರಲ್ಲಿ ಯಾವ ಸಂದೇಹವೂ ಇಲ್ಲ."

ಮುಹಮ್ಮದರ ಹೆಣ್ಮಕ್ಕಳನ್ನು ವಿವಾಹ ವಿಚ್ಛೇದಿಸಬೇಕೆಂದು ಅತ್ತ ಕುರೈಶರೂ ನಿರ್ಧರಿಸಿದರು. ಮುಹಮ್ಮದರ ಪುತ್ರಿಗೆ ತಲಾಕ್ ಹೇಳಿದರೆ, ಯಾವ ಕುರೈಶಿ ತರುಣಿಯನ್ನು ಬೇಕಿದ್ದರೂ ವಿವಾಹ ಮಾಡಿಸಿಕೊಡಲು ಸಿದ್ಧವೆಂದು ಕುರೈಶರು ಉತ್ಬಾರೊಡನೆ ಹೇಳಿದರು. ಸಈದ್ ಬಿನ್ ಆಸ್‌ರ ಮಗಳನ್ನು ವಿವಾಹ ಮಾಡಿಕೊಟ್ಟರೆ ರುಕಿಯ್ಯರಿಗೆ ತಲಾಕ್ ಹೇಳಲು ತಾನು ಸಿದ್ಧವೆಂದು ಉತ್ಬಾ ಒಪ್ಪಿದರು. ಸರ್ವ ವಿಧದಿಂದ ಪ್ರವಾದಿವರ್ಯರನ್ನು(ಸ) ಪೀಡಿಸುವುದೇ ಕುರೈಶರ ಉದ್ದೇಶವಾಗಿತ್ತು. ಅದಕ್ಕಾಗಿ ಎಷ್ಟು ಬೆಲೆ ತೆರಲೂ ಅವರು ಸಿದ್ಧರಿದ್ದರು.

ದೌರ್ಭಾಗ್ಯವಶಾತ್, ಉತ್ಬಾ ಪ್ರವಾದಿಯ ಪುತ್ರಿ ರುಕಿಯ್ಯರನ್ನು ವಿವಾಹ ವಿಚ್ಛೇದನಗೊಳಿಸಿದರು. ಸಈದ್ ಬಿನ್ ಆಸ್‌ರ ಮಗಳನ್ನು ವಿವಾಹವಾದರು. ರುಕಿಯ್ಯರ ನಿಕಾಹ್ ಮಾತ್ರ ಜರಗಿತ್ತು. ಅವರ ಗೃಹಪ್ರವೇಶವಾಗಿರಲಿಲ್ಲ.

ಪ್ರವಾದಿವರ್ಯರು(ಸ) ರುಕಿಯ್ಯರನ್ನು(ರ) ಉಸ್ಮಾನ್‌ರಿಗೆ(ರ) ವಿವಾಹ ಮಾಡಿ ಕೊಟ್ಟರು. ಉಸ್ಮಾನ್‌ರ(ರ) ಅಭಿಲಾಷೆಯು ಈಡೇರಿತು. ಅವರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದ್ದರು. ಉಸ್ಮಾನ್‌ರು(ರ) ಓರ್ವ ಶ್ರೀಮಂತ ವ್ಯಾಪಾರಿಯಾಗಿದ್ದರು. ಸೌಮ್ಯತೆ ಮತ್ತು ಕೋಮಲ ಮನಸ್ಸಿನ ಪರ್ಯಾಯವೆಂದೂ ಅವರನ್ನು ವರ್ಣಿಸಬಹುದಾಗಿದೆ.

## ವಲಸೆ

ಶ್ರೀಮಂತ ಬಡವನೆಂಬ ವ್ಯತ್ಯಾಸವಿಲ್ಲದೆ ಇಸ್ಲಾಮಿನಲ್ಲಿ ಪ್ರವೇಶಿಸಿದವರೆಲ್ಲರೂ ವೈರಿಗಳ ಕ್ರೂರ ಹಿಂಸೆಗಳಿಗೆ ಗುರಿಯಾದರು. ಉಸ್ಮಾನ್‌ರು(ರ) ಅತ್ಯಧಿಕ ಕ್ರೌರ್ಯವನ್ನು ಎದುರಿಸಬೇಕಾಯಿತು. ಕೊನೆಗೆ ಮರ್ದಿತ ಮುಸ್ಲಿಮರಿಗೆ ಅಬಿಸೀನಿಯಾಕ್ಕೆ ವಲಸೆ ಹೋಗಲು ಪ್ರವಾದಿ(ಸ) ಒಪ್ಪಿಗೆ ನೀಡಿದರು. ಪ್ರಥಮವಾಗಿ ಹನ್ನೊಂದು ಪುರುಷರು ಮತ್ತು ನಾಲ್ವರು ಸ್ತ್ರೀಯರು ಅಬಿಸೀನಿಯಕ್ಕೆ ವಲಸೆ ಹೋದರು. ಹ. ಉಸ್ಮಾನ್(ರ) ಮತ್ತು ಪತ್ನಿ ರುಕಿಯ್ಯರೂ(ರ) ಅವರಲ್ಲಿದ್ದರು.

ಅವರು ಜಿದ್ದಾ ಬಂದರಿನಲ್ಲಿ ಅಬಿಸೀನಿಯಕ್ಕೆ ಹಡಗು ಹತ್ತಿದರು. ಕುರೈಶರು ಅವರನ್ನು ಹಿಂಬಾಲಿಸಿ ಬಂದರಿಗೆ ತಲಪಿದರೂ ಪ್ರಯೋಜನವಾಗಲಿಲ್ಲ. ಹಡಗು ತೀರವನ್ನು ಬಿಟ್ಟಿತ್ತು. ಅಬಿಸೀನಿಯದ ನಜ್ಜಾಶಿ ರಾಜರು ಅವರಿಗೆ ಅಭಯ ನೀಡಿದರು. ಅಬಿಸೀನಿಯದಲ್ಲಿ ಅಭಯ ಪಡೆದಿರುವ ಮುಸ್ಲಿಮರನ್ನು ಮರಳಿ ಕರೆಸಲಿಕ್ಕಾಗಿ ಕುರೈಶರು ಹಲವು ಪಾರಿತೋಷಕ ಗಳಿಂದ ಒಂದು ತಂಡವನ್ನು ನಜ್ಜಾಶಿ ರಾಜನ ಬಳಿಗೆ ಕಳುಹಿಸಿದರು. ಆದರೆ ನಜ್ಜಾಶಿ ರಾಜನು ಅವರ ಪಾರಿತೋಷಕಗಳನ್ನು ಸ್ವೀಕರಿಸಲಿಲ್ಲ. ಹಾಗೆಯೇ ಮುಸ್ಲಿಮರನ್ನು ಮರಳಿ ಕಳುಹಿಸಲೂ ಒಪ್ಪಲಿಲ್ಲ.

ಕೆಲವು ಕಾಲದ ಬಳಿಕ ಪ್ರವಾದಿ(ಸ) ಮತ್ತು ಕುರೈಶರು ಒಪ್ಪಂದ ಮಾಡಿ ಕೊಂಡಿದ್ದಾರೆಂಬ ಸುಳ್ಳು ವದಂತಿಯನ್ನು ಕೇಳಿ ಉಸ್ಮಾನ್(ರ) ಮತ್ತು ರುಕಿಯ್ಯ(ರ) ಹಾಗೂ ಕೆಲವು ಮುಸ್ಲಿಮರು ಮಕ್ಕಾಕ್ಕೆ ಮರಳಿದರು. ಆದರೆ ಮಕ್ಕಾದ ಸ್ಥಿತಿಯು ಇನ್ನಷ್ಟು ಹದಗೆಟ್ಟಿತ್ತು. ಅಲ್ಲಿ ನೆಮ್ಮದಿಯಿಂದ ಜೀವಿಸಲು ಸಾಧ್ಯವಿರಲಿಲ್ಲ. ಆದ್ದರಿಂದ ಅವರು ಪುನಃ ಅಬಿಸೀನಿಯಕ್ಕೆ ಮರಳಿದರು.

ಹಲವು ಸಮಯದ ತನಕ ಪ್ರವಾದಿಯವರಿಗೆ(ಸ) ರುಕಿಯ್ಯ(ರ) ಮತ್ತು ಉಸ್ಮಾನ್‌ರ(ರ) ಬಗ್ಗೆ ಯಾವ ವಿವರವೂ ದೊರೆಯಲಿಲ್ಲ. ಅವರು ಬಹಳ ಕಳವಳ ಗೊಂಡಿದ್ದರು. ಒಮ್ಮೆ ಅಬಿಸೀನಿಯದ ಓರ್ವ ಸ್ತ್ರೀಯು ಮಕ್ಕಾಕ್ಕೆ ಬಂದಾಗ ಪ್ರವಾದಿ ವರ್ಯರು(ಸ) ಆಕೆಯೊಡನೆ ರುಕಿಯ್ಯ(ರ) ಮತ್ತು ಉಸ್ಮಾನ್‌ರ(ರ) ಬಗ್ಗೆ ವಿಚಾರಿಸಿದರು. ಅವರನ್ನು ತಾನು ತಿಳಿದಿರುವೆನೆಂದೂ ಅವರು ಸುಖವಾಗಿರುವರೆಂದೂ ಆಕೆ ತಿಳಿಸಿದಳು. ಆ ಸ್ತ್ರೀಯ ಮಾತಿನಿಂದ ಪ್ರವಾದಿಯವರಿಗೆ(ಸ) ಸಮಾಧಾನವಾಯಿತು. ಅವರು ಹೀಗೆಂದರು: ಉಸ್ಮಾನ್ ಮತ್ತು ರುಕಿಯ್ಯರನ್ನು ಅಲ್ಲಾಹ್ ಅನುಗ್ರಹಿಸಲಿ. ಉಸ್ಮಾನ್‌ರು ಪ್ರವಾದಿ ಇಬ್ರಾಹೀಮ್ ಮತ್ತು ಪ್ರವಾದಿ ಲೂತ್‌ರ ಬಳಿಕ ಅಲ್ಲಾಹನ ಮಾರ್ಗದಲ್ಲಿ ಮರ್ದಿಸಲ್ಪಟ್ಟು ಸಪತ್ನೀಕವಾಗಿ ದೇಶ ತೊರೆದ ಪ್ರಥಮ ವ್ಯಕ್ತಿಯಾಗಿದ್ದಾರೆ.

ಪ್ರವಾದಿವರ್ಯರು(ಸ) ಮದೀನಕ್ಕೆ ಹಿಜ್ರತ್ ಹೋದಾಗ ರುಕಿಯ್ಯ(ರ) ಪತಿ ಯೊಂದಿಗೆ ಮಕ್ಕಾಕ್ಕೆ ಬಂದು ತಕ್ಷಣವೇ ಮದೀನಕ್ಕೆ ತೆರಳಿದರು.

## ದುಃಖ ಮತ್ತು ಸಂತೋಷ

ಮಕ್ಕಾಕ್ಕೆ ತಲಪಿದ ಕೆಲವೇ ಸಮಯದಲ್ಲಿ ರುಕಿಯ್ಯರು(ರ) ರೋಗಪೀಡಿತರಾದರು. ಪ್ರವಾದಿಯವರು(ಸ) ಬದ್ರ್‌ಗೆ ಹೋಗುವ ಸಿದ್ಧತೆ ನಡೆಸುತ್ತಿದ್ದರು. ರೋಗ ಉಲ್ಬಣ ಗೊಂಡುದರಿಂದ ಪ್ರವಾದಿಯವರು(ಸ) ಉಸ್ಮಾನ್‌ರನ್ನು(ರ) ಮದೀನದಲ್ಲಿಯೇ ಉಳಿಸಿ ಬದ್ರ್‌ಗೆ ತೆರಳಿದರು. ಆದುದರಿಂದ ಉಸ್ಮಾನ್‌ರಿಗೆ(ರ) ಬದ್ರ್‌ಗೆ ಹೋಗಲಾಗಲಿಲ್ಲ.

ಹಿಜರಿ ಎರಡನೆಯ ವರ್ಷದ ರಮಝಾನ್ ತಿಂಗಳಲ್ಲಿ ಬದ್ರ್ ಯುದ್ಧ ನಡೆಯಿತು. ಆಗಲೇ ಪ್ರವಾದಿವರ್ಯರ(ಸ) ಪ್ರಿಯ ಪುತ್ರಿಯೂ ದಿವಂಗತರಾದರು. ಬದ್ರ್ ವಿಜಯದ ಸುವಾರ್ತೆಯೊಂದಿಗೆ ಆಗಮಿಸಿದ ಝೈದ್ ಬಿನ್ ಹಾರಿಸ್‌ರು(ರ) ಹ. ರುಕಿಯ್ಯರನ್ನು(ರ) ದಫನ ಮಾಡುವ ಶೋಕ ಮೂಕ ದೃಶ್ಯವನ್ನು ಕಂಡರು. ಆ ವೇಳೆ ಬದ್ರ್‌ನಲ್ಲಿದ್ದುದರಿಂದ ಪ್ರವಾದಿಯವರಿಗೆ(ಸ) ಮಗಳನ್ನೊಮ್ಮೆ ಕೊನೆಯ ಬಾರಿಗೆ ನೋಡಲಾಗಲಿಲ್ಲ.

ಮರಣ ವೇಳೆ ಹಝ್ರತ್ ರುಕಿಯ್ಯರಿಗೆ(ರ) 22 ವರ್ಷ ಪ್ರಾಯವಾಗಿತ್ತು. ಉಸ್ಮಾನ್‌ರಿಗೆ(ರ) ರುಕಿಯ್ಯರಿಂದ(ರ) ಅಬ್ದುಲ್ಲ ಎಂಬ ಗಂಡು ಮಗು ಜನಿಸಿತ್ತು. ಮಾತೆಯು ಮರಣಗೊಂಡಾಗ ಮಗುವಿಗೆ ನಾಲ್ಕು ವರ್ಷವಾಗಿತ್ತು. ಹಿಜರಿ ನಾಲ್ಕನೇ ವರ್ಷದಲ್ಲಿ ಆ ಮಗುವೂ ತಾಯಿಯನ್ನು ಹಿಂಬಾಲಿಸಿತು.

## ಹ. ಉಮ್ಮು ಕುಲ್ಸೂಮ್(ರ)

ರುಕಿಯ್ಯರ(ರ) ನಿಧನದ ಬಳಿಕ ಉಸ್ಮಾನ್‌ರು(ರ) ಬಹಳ ದುಃಖಿತರಾದರು. ಅವರು ಸದಾ ಚಿಂತಾಮಗ್ನರಾಗಿರುತ್ತಿದ್ದರು. ಪ್ರವಾದಿವರ್ಯರೊಂದಿಗಿನ(ಸ) ವಿಶೇಷ ಸಂಬಂಧವು ಕಡಿದು ಹೋಯಿತೆಂದು ಅವರು ಪರಿತಪಿಸಿದರು.

ಹ. ಉಮರ್‌ರ(ರ) ಪುತ್ರಿ ಹಫ್ಸರು(ರ) ವಿಧವೆಯಾಗಿದ್ದರು. ಹಫ್ಸರನ್ನು(ರ) ಉಸ್ಮಾನ್‌ರಿಗೆ(ರ) ವಿವಾಹ ಮಾಡಿಕೊಡಬೇಕೆಂದು ಉಮರ್‌ರು(ರ) ಬಯಸಿದರು. ಈ ಸುದ್ದಿಯನ್ನು ಉಸ್ಮಾನ್‌ರಿಗೆ(ರ) ತಿಳಿಸಿದರು. ಹಫ್ಸರು(ರ) ವಿಧವೆಯಾದಾಗ ಪ್ರವಾದಿ ವರ್ಯರು(ಸ) ಅವರ ಬಗ್ಗೆ ಮಾತನಾಡುತ್ತಿದ್ದುದನ್ನು ಉಸ್ಮಾನ್(ರ) ಆಲಿಸಿದ್ದರು. ಆದ್ದರಿಂದ ಅವರು ಉಮರ್‌ರಿಗೆ(ರ) ಯಾವ ಉತ್ತರವನ್ನೂ ನೀಡಲಿಲ್ಲ. ಉಸ್ಮಾನ್(ರ) ಮತ್ತು ಹಫ್ಸಾರ(ರ) ಪುನರ್ವಿವಾಹ ಸಮಸ್ಯೆಯು ಎದುರು ಬಂದಾಗ ಪ್ರವಾದಿ(ಸ) ಹೇಳಿದರು: "ಉಸ್ಮಾನ್‌ರಿಗೆ ಹಫ್ಸರಿಗಿಂತ ಉತ್ತಮ ಪತ್ನಿಯನ್ನೂ ಹಫ್ಸರಿಗೆ ಉಸ್ಮಾನ್‌ರಿಗಿಂತ ಉತ್ತಮ ಪತಿಯನ್ನೂ ನೀಡಲು ನಾನು ಬಯಸಿದ್ದೇನೆ."

ಹಿಜರಿ 3ನೇ ವರ್ಷದ ಶಅಬಾನ್ ತಿಂಗಳಲ್ಲಿ ಪ್ರವಾದಿಯವರು(ಸ) ರುಕಿಯ್ಯರ(ರ) ತಂಗಿ ಉಮ್ಮು ಕುಲ್ಸೂಮ್‌ರನ್ನು(ರ) ಹ. ಉಸ್ಮಾನ್‌ರಿಗೆ(ರ) ವಿವಾಹ ಮಾಡಿಕೊಟ್ಟರು. ಹಫ್ಸರನ್ನು(ರ) ಪ್ರವಾದಿ(ಸ) ವಿವಾಹವಾದರು. ಇದರಿಂದ ಉಸ್ಮಾನ್(ರ) ಮತ್ತು ಉಮರ್‌ರಿಗೆ(ರ) ಸಂಪೂರ್ಣ ತೃಪ್ತಿಯಾಯಿತು. ಪ್ರವಾದಿ ಕುಟುಂಬದಲ್ಲಿ ಪುನಃ ಸ್ಥಾನ ದೊರೆತ ಬಗ್ಗೆ ಉಸ್ಮಾನ್‌ರು(ರ) ಬಹಳವಾಗಿ ಸಂತೋಷಪಟ್ಟರು.

ಉಮ್ಮು ಕುಲ್ಸೂಮ್‌ರ ಪ್ರಥಮ ವಿವಾಹವು ಅಬೂ ಲಹಬರ ಇನ್ನೋರ್ವ ಪುತ್ರ ಉತ್ಯೈಬಃರೊಂದಿಗೆ ಜರಗಿತ್ತು. ಆಗ ರುಕಿಯ್ಯರನ್ನು(ರ) ಉತ್ಬಃ ವಿವಾಹವಾಗಿದ್ದರು.

ಪ್ರವಾದಿ(ಸ) ಇಸ್ಲಾಮಿ ಪ್ರಚಾರ ಆರಂಭಿಸಿದಾಗ ಅಣ್ಣನಂತೆಯೇ ಉತೈಬರೂ ಕುರೈಶರ ಒತ್ತಾಯಕ್ಕೆ ಮಣಿದು ವಿವಾಹ ವಿಚ್ಛೇದನ ಮಾಡಿದರು. ಉತೈಬರೊಡನೆ ಉಮ್ಮು ಕುಲ್ಸೂಮ್‌ರ(ರ) ನಿಕಾಹ್ ಮಾತ್ರ ಜರಗಿತ್ತು. ಅವರ ಮಿಲನ ಕಾರ್ಯ ಜರಗಲಿಲ್ಲ.

ಮರು ವಿವಾಹದ ಬಳಿಕ ಉಮ್ಮು ಕುಲ್ಸೂಮ್‌ರು(ರ) ಕೇವಲ ಆರು ವರ್ಷ ಬದುಕಿದ್ದರು. ಹಿಜರಿ 9ನೇ ಶಅಬಾನ್ ತಿಂಗಳಲ್ಲಿ ಅವರು ಈ ಲೋಕಕ್ಕೆ ಶಾಶ್ವತ ವಿದಾಯ ಕೋರಿದರು. ಮರಣ ವೇಳೆ ಅವರ ಪ್ರಾಯವು 27 ವರ್ಷ ಮೀರಿರಲಿಲ್ಲ. ಉಮ್ಮು ಕುಲ್ಸೂಮ್‌ರನ್ನು(ರ) ದಫನ ಮಾಡುವಾಗ ಪ್ರವಾದಿವರ್ಯರ ಕಣ್ಣುಗಳಿಂದ ಕಣ್ಣೀರು ಧಾರೆ ಧಾರೆಯಾಗಿ ಹರಿಯಿತು.

ಉಮ್ಮು ಕುಲ್ಸೂಮ್ ನಿಧನರಾದಾಗ ಪ್ರವಾದಿ(ಸ) ಹೇಳಿದರು: "ನನಗೆ ಇನ್ನೂ ಹೆಣ್ಣು ಮಕ್ಕಳಿರುತ್ತಿದ್ದರೆ, ಖಂಡಿತವಾಗಿಯೂ ಒಬ್ಬೊಬ್ಬರನ್ನೇ ಉಸ್ಮಾನ್‌ರಿಗೆ(ರ) ವಿವಾಹ ಮಾಡಿಕೊಡುತ್ತಿದ್ದೆ." ಪ್ರವಾದಿವರ್ಯರ(ಸ) ಈರ್ವರು ಪುತ್ರಿಯರನ್ನು ವರಿಸಿದ ಉಸ್ಮಾನ್‌ರನ್ನು(ರ) 'ದುನ್ನೂರೈನ್' (ಎರಡು ಪ್ರಕಾಶಗಳ ವ್ಯಕ್ತಿ) ಎಂದು ಕರೆಯಲಾಗುತ್ತದೆ. ಉಸ್ಮಾನ್‌ರಿಗೆ(ರ) ಉಮ್ಮು ಕುಲ್ಸೂಮ್‌ರಲ್ಲಿ(ರ) ಮಕ್ಕಳು ಹುಟ್ಟಿಲ್ಲ.

□□□

# ಹರ್ಝ್ರತ್ ಫಾತಿಮ(ರ)

ಹ. ಫಾತಿಮರು(ರ) ಪ್ರವಾದಿಯ(ಸ) ಅತಿ ಕಿರಿಯ ಪುತ್ರಿ. ಫಾತಿಮರಿಗೆ(ರ) ಝುಹ್ರಾ, ಬತೂಲ್, ಸಾಕಿಯ, ರಾಸಿಯ ಎಂಬ ಉಪನಾಮಗಳಿವೆ. ಫಾತಿಮರ(ರ) ಜನನ ವೇಳೆಯ ಕುರಿತು ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಕುರೈಶರು ಕಅಬಾದ ಜೀರ್ಣೋದ್ಧಾರ ಮಾಡಿದ ಕಾಲದಲ್ಲಿ ಫಾತಿಮ(ರ) ಹುಟ್ಟಿದರೆಂದು ಕೆಲವರು ಹೇಳುತ್ತಾರೆ. ಪ್ರವಾದಿತ್ವದ ಒಂದನೇ ವರ್ಷದಲ್ಲಿ ಜನಿಸಿದರೆಂದು ಕೆಲವರು ಹೇಳುತ್ತಾರೆ. ಪ್ರವಾದಿತ್ವಕ್ಕಿಂತ ಒಂದು ವರ್ಷ ಮೊದಲು ಜನಿಸಿದರೆಂಬ ಅಭಿಪ್ರಾಯವೂ ಇದೆ.

## ಬಾಲ್ಯ ಕಾಲ

ಫಾತಿಮರು(ರ) ಶಿಸ್ತುಬದ್ಧ ಮತ್ತು ಗೌರವಾರ್ಹ ಸ್ವಭಾವವನ್ನು ಹೊಂದಿದ್ದರು. ಫಾತಿಮರ ಹವ್ಯಾಸವು ಸಾಮಾನ್ಯ ಮಕ್ಕಳ ಹವ್ಯಾಸಕ್ಕಿಂತ ಭಿನ್ನವಾಗಿತ್ತು. ಅನಿಯಂತ್ರಿತ ಆಟೋಟ ಗಲಾಟೆ ಗದ್ದಲಗಳು ಫಾತಿಮರ ಗುಣವಾಗಿರಲಿಲ್ಲ. ಆಟದ ಬಗ್ಗೆಯೂ ಫಾತಿಮರಿಗೆ ವಿಶೇಷ ಆಸಕ್ತಿಯಿರಲಿಲ್ಲ. ಅಕ್ಕಂದಿರು ಆಡುವಾಗ ಫಾತಿಮರು ಅದನ್ನು ಗಮನಿಸದೆ ತಾಯಿಯ ಬಳಿಯೇ ಸೇರಿರುತ್ತಿದ್ದರು. ಫಾತಿಮರ ವಿಧೇಯತೆ ಮತ್ತು ಶಿಸ್ತು ಪ್ರವಾದಿವರ್ಯರಿಗೆ(ಸ) ತುಂಬಾ ಹಿಡಿಸಿತ್ತು.

ಪ್ರೌಢೆಯಾದಾಗ ಮಕ್ಕಾದ ವಾತಾವರಣವು ಕಲುಷಿತವಾಗಿತ್ತು. ವೈರಿಗಳು ಪ್ರವಾದಿವರ್ಯರನ್ನೂ(ಸ) ಮುಸ್ಲಿಮರನ್ನೂ ಪೈಶಾಚಿಕವಾಗಿ ಮರ್ದಿಸುತ್ತಿದ್ದರು. ಒಮ್ಮೆ ಪ್ರವಾದಿಯವರು(ಸ) ಕಅಬಾದ ಬಳಿ ನಮಾಝ್ ಮಾಡುತ್ತಿದ್ದರು. ಕುರೈಶೀ ನಾಯಕರೂ ಅಲ್ಲಿದ್ದರು. ಆಗ ಪ್ರವಾದಿಯ(ಸ) ಬದ್ಧ ವೈರಿಯಾಗಿದ್ದ ಅಬೂಜಹಲ್ ಹೀಗೆಂದನು: 'ಮುಹಮ್ಮದರು ಸುಜೂದ್‌ಗೆ ಹೋಗುವಾಗ ಒಂಟೆಯ ಕರುಳನ್ನು ಕೊರಳ ಮೇಲೆ ಹಾಕಬೇಕು. ನೋಡಲಿಕ್ಕೆ ಬಹಳ ಸ್ವಾರಸ್ಯಕರವಾಗಿರಬಹುದು. ಅದಕ್ಕೆ ಯಾರಾದರೂ ಸಿದ್ಧರಿದ್ದಾರೆಯೇ?' ಉಖ್ಬ ಬಿನ್ ಅಬೀ ಮುಈತ್ ಎಂಬೋರ್ವ ದುಷ್ಟನು ಓಡಿಹೋಗಿ ಒಂಟೆಯ ಕರುಳನ್ನು ತಂದನು. ಪ್ರವಾದಿವರ್ಯರು(ಸ) ಸುಜೂದ್‌ಗೆ ಹೋಗುವ ಸಮಯ ನೋಡಿ ಅದನ್ನು ಅವರ ಕೊರಳಿಗೆ ಹಾಕಿದನು. ಪ್ರವಾದಿವರ್ಯರಿಗೆ(ಸ) ತಲೆ ಎತ್ತಲಾಗಲಿಲ್ಲ.

ಇದನ್ನು ನೋಡಿ ಖುರೈಶರು ಬಿದ್ದು ಬಿದ್ದು ನಕ್ಕರು. ಈ ಸುದ್ದಿ ತಿಳಿದ ಪುಟ್ಟ ಫಾತಿಮರು ಓಡೋಡಿ ಬಂದು ಬಹಳ ಕಷ್ಟದಿಂದ ಪ್ರಿಯ ತಂದೆಯ ಕೊರಳಿನಿಂದ ಆ ಕರುಳು ಮಾಲೆಯನ್ನು ತೆಗೆದು ಹಾಕಿದರು.

## ವಿವಾಹ

ಪ್ರವಾದಿ(ಸ) ಮತ್ತು ಕುಟುಂಬದವರು ಮದೀನಾದಲ್ಲಿ ನೆಲೆಸಿದರು. ಎರಡು ವರ್ಷಗಳ ಬಳಿಕ ಫಾತಿಮರಿಗೆ(ರ) ವಿವಾಹ ಪ್ರಸ್ತಾಪ ಬಂತು. ಮೊದಲು ಅಬೂಬಕರ್ ಸಿದ್ದೀಕ್‌ರು(ರ) ವಿವಾಹ ಪ್ರಸ್ತಾಪವನ್ನು ಮಂಡಿಸಿದ್ದರು. ಅನಂತರ ಉಮರ್ ಬಿನ್ ಖತ್ತಾಬ್‌ರೂ ವಿವಾಹ ಪ್ರಸ್ತಾಪವನ್ನು ಸಲ್ಲಿಸಿದರು. ಆಗ ಅಬೂಬಕರ್(ರ) ಮತ್ತು ಉಮರ್‌ರಿಗೆ(ರ) ಪತ್ನಿಯರಿದ್ದರು. ಕೆಲವರು ಅಲಿಯವರನ್ನು(ರ) ಪ್ರೋತ್ಸಾಹಿಸಿದರು. ಆದರೆ ಅಲಿಯವರಿಗೆ(ರ) ವಿವಾಹ ವೆಚ್ಚಕ್ಕೆ ಬೇಕಾದ ಹಣದ ಅಡಚಣೆಯಿತ್ತು. ಮೊದಮೊದಲು ಸ್ವಲ್ಪ ಅಂಜಿದರಾದರೂ ಕೊನೆಗೆ ಪ್ರವಾದಿಯವರನ್ನು(ಸ) ಕೇಳಲು ನಿರ್ಧರಿಸಿದರು.

ಪ್ರವಾದಿವರ್ಯರು(ಸ) ಅವರ ವಿನಂತಿಯನ್ನು ನಿರಾಕರಿಸಲಿಲ್ಲ. ಮಹ್ರ್(ವಿವಾಹಧನ) ನೀಡಲು ಏನಾದರೂ ಸಾಧನವಿದೆಯೇ ಎಂದು ಪ್ರಶ್ನಿಸಿದರು. ನನ್ನ ಬಳಿ ಕೇವಲ ಒಂದು ಕುದುರೆ ಮತ್ತು ಒಂದು ಸೈನಿಕ ಉಡುಪು ಇದೆಯೆಂದು ಅಲಿ( ) ಹೇಳಿದರು. ಸೈನಿಕ ಉಡುಪನ್ನು ಪ್ರವಾದಿವರ್ಯರೇ(ಸ) ಅವರಿಗೆ ನೀಡಿದ್ದರು. ಆ ಉಡುಪನ್ನು ಮಾರಿ ಖರ್ಚು ನಿರ್ವಹಿಸುವಂತೆ ಪ್ರವಾದಿ(ಸ) ಹೇಳಿದರು. ಸೈನಿಕ ಉಡುಪನ್ನು ಸುಮಾರು ಐನೂರು ದಿರ್ಹಮ್‌ಗಳಿಗೆ ಉಸ್ಮಾನ್‌ರು(ರ) ಖರೀದಿಸಿದರು. ಪ್ರವಾದಿವರ್ಯರು(ಸ) ಫಾತಿಮರ(ರ) ಬಳಿ ಹೋಗಿ ವಿಚಾರಿಸಿದರು. "ಅಲೀ ನಿನ್ನನ್ನು ವಿವಾಹವಾಗ ಬಯಸಿದ್ದಾರೆ. ನಿನಗೆ ಒಪ್ಪಿಗೆಯೇ?" ಫಾತಿಮ(ರ) ಮೌನ ತಾಳಿದರು. ಮೌನವು ಸಮ್ಮತಿಯಾಗಿತ್ತು. ಹಿಜರಿ ಎರಡನೆಯ ವರ್ಷದಲ್ಲಿ ಫಾತಿಮ(ರ) ಮತ್ತು ಅಲೀಯವರ(ರ) ವಿವಾಹ ನೆರವೇರಿತು.

ಅಲೀಯವರಿಗೆ(ರ) ಸ್ವಂತ ಮನೆಯಿರಲಿಲ್ಲ. ಒಂದು ಮನೆಯನ್ನು ಬಾಡಿಗೆಗೆ ಪಡೆಯುವಂತೆ ಪ್ರವಾದಿ(ಸ) ಆದೇಶಿಸಿದರು. ಅಲೀಯವರು(ರ) ಹಾರಿಸ್ ಬಿನ್ ನುಅ್‌ಮಾನ್‌ರ ಮನೆಯನ್ನು ಬಾಡಿಗೆಗೆ ಪಡೆದು ಫಾತಿಮರನ್ನು(ರ) ಅಲ್ಲಿಗೆ ಕರೆದೊಯ್ದರು. ಪತಿಗೃಹಕ್ಕೆ ಹೋಗುವಾಗ ಪ್ರವಾದಿವರ್ಯರು(ಸ) ಹಾಸಿಗೆ, ಚರ್ಮದ ಚೀಲ, ಮಂಚ, ಕಡೆಯುವ ಕಲ್ಲು ಮುಂತಾದ ಗೃಹೋಪಕರಣಗಳನ್ನು ಮಗಳಿಗೆ ನೀಡಿದರು.

## ಗೃಹಿಣಿ

ಪತಿಯ ಮನೆಯಲ್ಲಿ ವಾಸ ಆರಂಭಿಸುವುದರೊಂದಿಗೆ ಫಾತಿಮರು(ರ) ಗೃಹ ನಾಯಕಿಯಾದರು. ಹೊಸ ಜವಾಬ್ದಾರಿಕೆಗಳು ಕೂಡಿಕೊಂಡುವು. ಒಂಟಿಯಾಗಿ ಮನೆ

ನಿರ್ವಹಿಸಿ ಅಭ್ಯಾಸವಿಲ್ಲ. ಮನೆಕೆಲಸವೆಲ್ಲವನ್ನು ಸ್ವಯಂ ನಿರ್ವಹಿಸಬೇಕಾಗಿತ್ತು. ನೆರವಿಗೆ ಜನರಿಲ್ಲ. ಓರ್ವ ಸೇವಕ ಅಥವಾ ಸೇವಕಿಯನ್ನು ನೇಮಿಸುವಷ್ಟು ಆರ್ಥಿಕ ತಾಕತ್ತಿಲ್ಲ. ಮಕ್ಕಳ ಜನನದಿಂದ ಹೊಣೆ ಹೆಚ್ಚಿತು. ಫಾತಿಮರು(ರ) ಮನೆಯ ಒಳಗಿನ ಕೆಲಸಗಳನ್ನು ಮಾಡುವಾಗ ಅಲೀಯವರು(ರ) ಹೊರಗಿನಿಂದ ನೀರು ತಂದು ಕೊಡುತ್ತಿದ್ದರು. ಕಡೆಯುವ ಹಾಗೂ ಹೊಗೆ ತುಂಬಿದ ಒಲೆಯನ್ನು ಉರಿಸಿ ಅಭ್ಯಾಸವಿಲ್ಲದ ಫಾತಿಮರ(ರ) ಕೈಗಳಲ್ಲಿ ಗುಳ್ಳೆಗಳೆದ್ದು ಮುಖವು ಕಪ್ಪಿಡುತ್ತಿತ್ತು.

ಒಮ್ಮೆ ಅಲೀಯವರು(ರ) ಫಾತಿಮರೊಡನೆ(ರ) ಹೇಳಿದರು: "ಪ್ರವಾದಿಯ(ಸ) ಬಳಿ ತುಂಬಾ ಗುಲಾಮರಿದ್ದಾರೆ. ನೀನು ಹೋಗಿ ಒಬ್ಬರನ್ನು ನಮಗೆ ಕೊಡುವಂತೆ ಹೇಳು." ಫಾತಿಮರು(ರ) ತಂದೆಯ ಬಳಿಗೆ ಹೋದರು ನಾಚಿಕೆಯಿಂದ ಏನೂ ಹೇಳಲಾಗಲಿಲ್ಲ. ಪ್ರಶ್ನಿಸಿದಾಗ ಸುಮ್ಮನೆ ಬಂದೆ ಎಂದು ಹೇಳಿದರು. ನಾಚಿಕೆಯಿಂದ ನನಗೆ ಕೇಳಲಾಗಲಿಲ್ಲ ವೆಂದು ಫಾತಿಮ(ರ) ಮರಳಿ ಬಂದು ಅಲೀಯವರಿಗೆ(ರ) ತಿಳಿಸಿದರು. ಹಾಗಿದ್ದರೆ ನಾವಿಬ್ಬರೂ ಒಟ್ಟಿಗೆ ಹೋಗೋಣವೆಂದು ಅಲೀ(ರ) ಮತ್ತು ಫಾತಿಮ(ರ) ಪ್ರವಾದಿಯ ಬಳಿಗೆ ಹೊರಟರು. "ಓರ್ವ ದಾಸಿಯನ್ನು ನಮಗೆ ಕೊಡಬೇಕು. ಮನೆಕೆಲಸವನ್ನು ಮಾಡಿ ಫಾತಿಮ ತುಂಬಾ ಬಳಲಿದ್ದಾಳೆ" ಅಲೀ(ರ) ಹೇಳಿದರು. ಆದರೆ ಪ್ರವಾದಿ(ಸ) ಈ ಮನವಿಯನ್ನು ಸ್ವೀಕರಿಸಲಿಲ್ಲ. ದಾಸಿಯರಿದ್ದರೂ ನೀವು ಹಕ್ಕುದಾರರಲ್ಲವೆಂದು ಹೇಳಿ ಪ್ರವಾದಿ(ಸ) ಅವರೀರ್ವರನ್ನೂ ಮರಳಿ ಕಳುಹಿಸಿದರು.

ಅಲೀ(ರ) ಮತ್ತು ಫಾತಿಮರು(ರ) ಮಲಗುವ ಸಿದ್ಧತೆಯಲ್ಲಿದ್ದರು. ಪ್ರವಾದಿ(ಸ) ಮನೆಗೆ ಬಂದರು. "ನೀವು ನನ್ನೊಡನೆ ಕೆಲವು ಅಗತ್ಯಗಳನ್ನು ಹೇಳಿದ್ದೀರಲ್ಲವೇ? ನಾನು ಅದಕ್ಕಿಂತ ಉತ್ತಮವಾದುದನ್ನು ನಿಮಗೆ ಹೇಳಿ ಕೊಡುತ್ತೇನೆ" ಎಂದು ಹೇಳಿದರು. "ನೀವು ಮಲಗುವ ವೇಳೆ ಸುಬ್‌ಹಾನಲ್ಲಾಹ್, ಅಲ್‌ಹಮ್ದುಲಿಲ್ಲಾಹ್, ಅಲ್ಲಾಹು ಅಕ್ಬರ್ ಎಂಬ ದಿಕ್ರ್‌ಗಳನ್ನು ತಲಾ 33 ಬಾರಿ ಹೇಳಿರಿ. ಅದು ನೀವು ಅಪೇಕ್ಷೆ ಪಟ್ಟಿರುವುದಕ್ಕಿಂತ ಎಷ್ಟೋ ಉತ್ತಮವಾಗಿದೆ." ನಿಮ್ಮ ಕೆಲಸವನ್ನು ನೀವೇ ಮಾಡಬೇಕು. ಇಲ್ಲಿನ ಸುಖದ ಬಗ್ಗೆ ಆಲೋಚಿಸುವ ಬದಲಾಗಿ ಪರಲೋಕ ಸುಖದ ಬಗ್ಗೆ ಆಲೋಚಿಸಬೇಕು. ಅದಕ್ಕೆ ಬೇಕಾದ ಮಾರ್ಗವನ್ನು ಕಂಡು ಹಿಡಿಯಬೇಕು. ಈ ಘಟನೆಯ ಮೂಲಕ ಪ್ರವಾದಿಯವರು(ಸ) ಪ್ರಸ್ತುತ ನೀತಿಯನ್ನು ಅವರಿಗೆ ಕಲಿಸಿದರು.

ಒಮ್ಮೆ ಫಾತಿಮರು(ರ) ರೋಗಪೀಡಿತರಾದರು. ಪ್ರವಾದಿವರ್ಯರು(ಸ) ಕ್ಷೇಮ ಸಮಾಚಾರ ತಿಳಿಯಲು ಅಲ್ಲಿಗೆ ಹೋದರು. ಆಗ ಫಾತಿಮ(ರ) ಹೇಳಿದರು "ನೋವು ಸಂಪೂರ್ಣ ಗುಣವಾಗಿಲ್ಲ. ನನ್ನ ಮನೆಯಲ್ಲಿ ಯಾವ ಆಹಾರವೂ ಇಲ್ಲವೆಂಬ ಚಿಂತೆಯೂ ನನ್ನನ್ನು ಕಾಡುತ್ತಿದೆ." ಪ್ರವಾದಿ(ಸ) ಮಗಳನ್ನು ಸಮಾಧಾನ ಪಡಿಸುತ್ತಾ ಹೀಗೆಂದರು: "ಮಗಳೇ! ಜಗತ್ತಿನ ಸ್ತ್ರೀಯರ ನಾಯಕತ್ವ ಪದವಿಯು ನಿನಗಿದೆ. ಅವರು ನಿನ್ನ

ಮಾದರಿಯನ್ನು ಅವಲಂಬಿಸಬೇಕಾಗಿದೆ. ಇಂತಹ ಸನ್ನಿವೇಶಗಳಲ್ಲಿ ಸಹನೆ ಮತ್ತು ತಾಳ್ಮೆ ವಹಿಸಬೇಕು. ಪತಿಯೊಂದಿಗೆ ಯಾವ ಮನಸ್ತಾಪವನ್ನೂ ಮಾಡಬೇಡ. ಹಣ ಕಡಿಮೆಯಿದ್ದರೂ ಧರ್ಮದ ದೃಷ್ಟಿಯಲ್ಲಿ ಅತ್ಯುತ್ತಮವಾದ ಪತಿಯನ್ನೇ ನಾನು ನಿನಗೆ ಆಯ್ಕೆ ಮಾಡಿದ್ದೇನೆ."

ಒಮ್ಮೆ ಅಲೀಯವರು(ರ) ಫಾತಿಮರಿಗೆ(ರ) ಒಂದು ಬಂಗಾರದ ಸರವನ್ನು ಬಹುಮಾನ ನೀಡಿದರು. ಫಾತಿಮರು ಬಂಗಾರದ ಸರವನ್ನು ಧರಿಸಿರುವುದು ಪ್ರವಾದಿಯವರಿಗೆ(ಸ) ಹಿಡಿಸಲಿಲ್ಲ. "ಪ್ರವಾದಿಯ ಪುತ್ರಿಯು ಬೆಂಕಿಯ ಸರವನ್ನು ಧರಿಸಿರುವರೆಂದು ಜನರಾಡಿಕೊಳ್ಳಲಿಕ್ಕಾಗಿ ನೀನು ಈ ಸರವನ್ನು ಧರಿಸಿದೆಯಾ?" ಪ್ರವಾದಿವರ್ಯರು(ಸ) ಫಾತಿಮರಿಗೆ(ರ) ಉಪದೇಶಿಸಿದರು. ಆ ಬಳಿಕ ಫಾತಿಮ(ರ) ಅದನ್ನು ಧರಿಸಲಿಲ್ಲ.

ಫಾತಿಮರೊಂದಿಗೆ(ರ) ಪ್ರವಾದಿಯವರಿಗೆ(ಸ) ಅತಿಯಾದ ಪ್ರೀತಿಯಿದ್ದರೂ ಮಗಳು ಐಹಿಕ ಸುಖಭೋಗವನ್ನು ಆದಷ್ಟು ಅನುಭವಿಸಬೇಕೆಂಬ ಆಗ್ರಹವಿರಲಿಲ್ಲ. ಮಗಳಿಗೆ ಧಾರಾಳ ಸುಖ ಸವಲತ್ತುಗಳನ್ನು ಅವರು ಒದಗಿಸಿ ಕೊಡಬಹುದಾಗಿತ್ತು. ಆದರೆ ಮಗಳು ತನ್ನಂತೆಯೇ ಸರಳ ಜೀವನ ನಡೆಸಿ, ಲೋಕಕ್ಕೆ ಮಾದರಿಯಾಗಬೇಕೆಂದು ಪ್ರವಾದಿ ಬಯಸಿದ್ದರು.

## ಹಿತವಿರಸ

ಅಲೀ(ರ) ಮತ್ತು ಫಾತಿಮರ(ರ) ದಾಂಪತ್ಯ ಸಂಬಂಧವು ಬಹಳ ಪ್ರೇಮಮಯವಾಗಿತ್ತು. ಪ್ರವಾದಿವರ್ಯರು(ಸ) ಅವರ ಬಗ್ಗೆ ಸದಾ ಗಮನವಿರಿಸುತ್ತಿದ್ದರು. ಫಾತಿಮರೊಡನೆ ಪ್ರೀತಿಯಿಂದ ವರ್ತಿಸಬೇಕೆಂದು ಅಲೀಯವರಿಗೂ(ರ) ಪತಿಯನ್ನು ಗೌರವಿಸಿ ವಿಧೇಯಳಾಗಿರಬೇಕೆಂದು ಫಾತಿಮರಿಗೂ(ರ) ಉಪದೇಶಿಸುತ್ತಿದ್ದರು. ಏನಾದರೂ ವಿರಸವುಂಟಾದರೆ ಪ್ರವಾದಿಯವರು(ಸ) ಮಧ್ಯೆ ಪ್ರವೇಶಿಸಿ ಸಮಸ್ಯೆ ಬಗೆಹರಿಸುತ್ತಿದ್ದರು.

ಒಮ್ಮೆ ಕಾರಣಾಂತರದಿಂದ ಅಲೀಯವರಿಗೆ(ರ) ಫಾತಿಮರೊಡನೆ(ರ) ಕೋಪ ಬಂತು. ಫಾತಿಮರು(ರ) ಪ್ರವಾದಿಯ ಬಳಿ ಹೋಗಿ ದೂರಿಕೊಂಡರು. ಫಾತಿಮರ(ರ) ಹಿಂದೆ ಅಲೀಯವರೂ(ರ) ಹೋದರು. ಫಾತಿಮರ(ರ) ದೂರನ್ನು ಆಲಿಸಿದ ಪ್ರವಾದಿ(ಸ) ಹೀಗೆಂದರು: "ಪತಿ-ಪತ್ನಿಯರ ಪರಸ್ಪರ ಸಂಬಂಧದಲ್ಲಿ ಕೆಲವೊಮ್ಮೆ ಹಾಗೆಲ್ಲಾ ಸಂಭವಿಸಬಹುದು. ಪತಿಯ ಮಾತು ವರ್ತನೆಗಳೆಲ್ಲವೂ ಪತ್ನಿಗೆ ಇಷ್ಟವಿರಬೇಕೆಂಬ ನಿರ್ಬಂಧವೇನೂ ಇಲ್ಲ. ಆದ್ದರಿಂದ ಆ ಬಗ್ಗೆ ದೂರಿಕೊಳ್ಳಬೇಕಾಗಿಲ್ಲ." ಅಲೀಯವರು(ರ) ದೂರ ನಿಂತು ಈ ಮಾತುಗಳನ್ನು ಆಲಿಸುತ್ತಿದ್ದರು. ಪ್ರವಾದಿವರ್ಯರ(ಸ) ಉಪದೇಶವನ್ನು ಕೇಳಿ ಅವರಿಗೆ ತೀವ್ರ ದುಃಖವಾಯಿತು. ತಾನು ಪತ್ನಿಯೊಂದಿಗೆ ಸ್ವಲ್ಪ ಕ್ರೂರವಾಗಿ ವರ್ತಿಸಿದೆನೆಂದು ಅವರಿಗೆ ತೋಚಿತು. ಇನ್ನು ಮುಂದೆ ನಾನು ನಿನ್ನೊಡನೆ ರೇಗಾಡುವುದಿಲ್ಲ ವೆಂದು ಹೇಳಿ ಅವರು ಫಾತಿಮರನ್ನು ಸಂತೋಷಗೊಳಿಸಿದರು.

## ವಿವಾಹ ಪ್ರಸ್ತಾಪ

ಒಮ್ಮೆ ಬನೂ ಹಿಶಾಮ್ ಕುಟುಂಬದವರು ಅಬೂಜಹಲ್‌ನ ಪುತ್ರಿ ಜುವೈರಿಯ ರನ್ನು ಅಲೀಯವರಿಗೆ(ರ) ವಿವಾಹ ಮಾಡುವ ಪ್ರಸ್ತಾಪ ಮಾಡಿದರು. ಆಗ ಮಕ್ಕಾ ವಿಜಯ ವಾಗಿತ್ತು. ಮಕ್ಕಾ ವಿಜಯದ ಬಳಿಕ ಅವರೆಲ್ಲರೂ ಇಸ್ಲಾಮ್ ಸ್ವೀಕರಿಸಿದ್ದರು. ಪ್ರವಾದಿ ವರ್ಯರಿಗೆ(ಸ) ಒಪ್ಪಿಗೆಯಿದ್ದರೆ ತಾನು ವಿವಾಹವಾಗುವುದಾಗಿ ಅಲೀ(ರ) ಹೇಳಿದರು. ಅಬೂಜಹಲ್‌ನ ಕುಟುಂಬದವರು ಪ್ರವಾದಿಯ ಬಳಿ ಬಂದು ಅನುಮತಿ ಕೇಳಿದರು. ಅಲೀ(ರ) ಇನ್ನೊಂದು ವಿವಾಹವಾಗುವರೆಂದು ತಿಳಿದ ಫಾತಿಮರು ಕಳವಳಗೊಂಡು ತಕ್ಷಣವೇ ಪ್ರವಾದಿ(ಸ) ಬಳಿ ಹೋಗಿ ದೂರು ನೀಡಿದರು. "ನಿಮ್ಮ ಮಕ್ಕಳನ್ನು ಯಾರಾದರೂ ಉಪದ್ರವಿಸಿದರೆ ನೀವು ಕೋಪಿಸುವುದಿಲ್ಲವೆಂದು ಜನರು ಹೇಳುತ್ತಾರೆ. ಇದೋ ಅಲೀಯವರು(ರ) ಅಬೂಜಹಲ್‌ರ ಪುತ್ರಿಯನ್ನು ವಿವಾಹವಾಗುವುದರಲ್ಲಿದ್ದಾರೆ." ಫಾತಿಮ ಹೇಳಿದರು. ಆಗ ಪ್ರವಾದಿಯವರು(ಸ) ವೇದಿಕೆಯೇರಿ ಭಾಷಣ ಮಾಡಿದರು:

"ಬನೂ ಹಿಶಾಮ್ ಕುಟುಂಬದವರು ಅವರ ಮಗಳನ್ನು ಅಲೀ ಬಿನ್ ಅಬೀತಾಲಿಬ್ ರಿಗೆ ವಿವಾಹ ಮಾಡಿಕೊಡಲಿಕ್ಕಾಗಿ ನನ್ನ ಅನುಮತಿ ಕೇಳಿದ್ದಾರೆ. ನಾನು ಅನುಮತಿ ನೀಡಲಾರೆ. ಬೇಕಿದ್ದರೆ ಅಬೂತಾಲಿಬ್‌ರ ಮಗನು ನನ್ನ ಮಗಳ ವಿವಾಹ ವಿಚ್ಛೇದನಗೊಳಿಸಿ ಅವರ ಮಗಳನ್ನು ವಿವಾಹವಾಗಬಹುದು. ಫಾತಿಮ ನನ್ನ ದೇಹದ ಭಾಗವಾಗಿದ್ದಾಳೆ. ಅವಳ ದುಃಖವು ನನ್ನ ದುಃಖ. ಅವಳ ಕಳವಳವು ನನ್ನ ಕಳವಳವಾಗಿದೆ. ನಾನು ಹಲಾಲನ್ನು ಹರಾಮ್ ಅಥವಾ ಹರಾಮನ್ನು ಹಲಾಲ್‌ಗೊಳಿಸುವುದಿಲ್ಲ. ಆದರೆ ಅಲ್ಲಾಹನ ಪ್ರವಾದಿಯ ಪುತ್ರಿಗೂ ಅಲ್ಲಾಹನ ವೈರಿಯ ಪುತ್ರಿಗೂ ಸಾಮರಸ್ಯದಿಂದ ಬಾಳಲು ಸಾಧ್ಯವಿಲ್ಲ. ಅಬುಲ್ ಆಸ್‌ರಿಗೆ ನಾನು ನನ್ನ ಮಗಳನ್ನು ವಿವಾಹ ಮಾಡಿಕೊಟ್ಟೆ. ಆಗ ಅವರು ನಾನು ಬೇರೆ ವಿವಾಹವಾಗುವುದಿಲ್ಲವೆಂದು ನನ್ನೊಡನೆ ಹೇಳಿದ್ದರು. ಅದನ್ನು ಅವರು ಪಾಲಿಸಿದ್ದರು."

ಅಬೂಜಹಲ್‌ನ ಪುತ್ರಿಯನ್ನು ವಿವಾಹವಾಗುವುದು ಪ್ರವಾದಿಯವರಿಗೆ(ಸ) ಇಷ್ಟವಿಲ್ಲ ವೆಂದರಿತ ಅಲೀಯವರು(ರ) ತನ್ನ ಆಲೋಚನೆಯನ್ನು ಕೈಬಿಟ್ಟರು. ಅಲೀ(ರ) ಯುವಕ ರಾಗಿದ್ದರು. ಫಾತಿಮರೂ(ರ) ಯುವತಿ. ಅಲೀ(ರ) ವಿವಾಹವಾಗ ಬಯಸಿದ್ದ ಆ ಸ್ತ್ರೀಯೂ ಯುವತಿಯೇ. ಅಬೂಜಹಲ್‌ನು ಪ್ರವಾದಿ(ಸ) ಮತ್ತು ಇಸ್ಲಾಮಿನ ಬದ್ಧ ವೈರಿಯಾ ಗಿದ್ದನು. ಅವನು ಬದ್ರ್ ಯುದ್ಧದಲ್ಲಿ ವಧಿಸಲ್ಪಟ್ಟನು. ಅದರ ಸೇಡು ತೀರಿಸಲಿಕ್ಕಾಗಿ ಅಬೂಜಹಲ್‌ನ ಕುಟುಂಬದವರು ಸಮಯ ಕಾಯುತ್ತಿದ್ದರು. ಮಕ್ಕಾ ವಿಜಯದ ಬಳಿಕ ಗತ್ಯಂತರವಿಲ್ಲದೆ ಅವರು ಇಸ್ಲಾಮ್ ಧರ್ಮ ಸ್ವೀಕರಿಸಿದ್ದರು. ಈ ಹಿನ್ನೆಲೆಯಲ್ಲಿ ಪ್ರಸ್ತುತ ವಿವಾಹದಿಂದ ಭಾರೀ ತೊಂದರೆಯಾದೀತೆಂದು ಪ್ರವಾದಿ(ಸ) ಮನಗಂಡಿದ್ದರು. ಅದಲ್ಲದೆ ಅಲೀಯವರನ್ನು(ರ) ಪ್ರವಾದಿವರ್ಯರೇ(ಸ) ಪೋಷಿಸಿ ಬೆಳೆಸಿದ್ದರು. ಅಲೀಯ(ರ) ಬಗ್ಗೆ

ಪ್ರವಾದಿಯವರಿಗೆ(ಸ) ವಿಶೇಷ ಹಕ್ಕು ಮತ್ತು ಆಸ್ಥೆಯಿತ್ತು. ವಿವಾಹಿತರಾಗಿದ್ದ ಅಬೂಬಕರ್(ರ) ಮತ್ತು ಉಮರ್‌ರಿಗೆ(ರ) ಫಾತಿಮರನ್ನು ವಿವಾಹ ಮಾಡಿಕೊಡದೆ, ಅವಿವಾಹಿತರಾಗಿದ್ದ ಅಲೀಯವರಿಗೆ(ರ) ಉಭಯತ್ರರ ಹಿತಾಕಾಂಕ್ಷೆಯಿಂದಲೇ ವಿವಾಹ ಮಾಡಿಕೊಟ್ಟಿದ್ದರು.

## ಪಿತೃವಿಯೋಗ

ಪ್ರವಾದಿವರ್ಯರ(ಸ) ವಿಯೋಗವು ಫಾತಿಮರ(ರ) ಜೀವನದಲ್ಲಿ ಸಂಭವಿಸಿದ ಅತಿ ದಾರುಣ ಘಟನೆಯಾಗಿತ್ತು. ಫಾತಿಮರ(ರ) ವಿನಾ ಪ್ರವಾದಿವರ್ಯರ(ಸ) ಇತರ ಪುತ್ರ ಪುತ್ರಿಯರೆಲ್ಲರೂ ಅವರ ಜೀವನಾವಧಿಯಲ್ಲಿಯೇ ನಿಧನರಾಗಿದ್ದರು. ಆದ್ದರಿಂದಲೇ ಪ್ರವಾದಿಯವರಿಗೆ(ಸ) ಫಾತಿಮರಲ್ಲಿ(ರ) ಬಹಳ ಪ್ರೀತಿಯಿತ್ತು. ಫಾತಿಮರ(ರ) ಮಟ್ಟಿಗೆ ಮಾತೆ ಸಹೋದರ ಸಹೋದರಿಯರೆಲ್ಲರೂ ಮರಣ ಹೊಂದಿರುವಂತಹ ಸ್ಥಿತಿಯಲ್ಲಿ, ತಂದೆಯೇ ಅವರ ಸರ್ವಾವಲಂಬವಾಗಿದ್ದರು.

ಪ್ರವಾದಿ(ಸ) ರೋಗಗ್ರಸ್ತರಾಗಿ ಮಲಗಿದ್ದಾಗ ಶೋಕತಪ್ತೆಯಾಗಿದ್ದ ಫಾತಿಮರು(ರ) ಶುಶ್ರೂಷೆಗಾಗಿ ಅವರ ಬಳಿಯಿದ್ದರು. ಪ್ರವಾದಿಯವರು(ಸ) ಮರಣಾಸನ್ನರಾಗಿದ್ದಾಗ ಫಾತಿಮರನ್ನು(ರ) ಬಳಿ ಕರೆದು ಅವರ ಕಿವಿಯಲ್ಲಿ ಏನೋ ಉಸುರಿದರು. ಆಗ ಫಾತಿಮರು(ರ) ಅತ್ತರು. ಪುನಃ ಏನೋ ಹೇಳಿದಾಗ ನಕ್ಕುಬಿಟ್ಟರು. ಆಯಿಶಾರೂ(ರ) ಸೇರಿದಂತೆ ಅಲ್ಲಿದ್ದವರಿಗೆ ಈ ಅಳು ಮತ್ತು ನಗುವಿನ ಗುಟ್ಟು ಅರ್ಥವಾಗಲಿಲ್ಲ. ಪ್ರವಾದಿವರ್ಯರ(ಸ) ನಿಧನದ ಬಳಿಕ ಆಯಿಶಾ(ರ) ಈ ಬಗ್ಗೆ ಫಾತಿಮರೊಡನೆ(ರ) ವಿಚಾರಿಸಿದರು. ಫಾತಿಮ(ರ) ಹೇಳಿದರು: "ಈ ವರ್ಷ ಜಿಬ್ರೀಲ್ ವಾಡಿಕೆ ಮೀರಿ ಎರಡು ಬಾರಿ ಕುರ್‌ಆನ್ ಓದಿ ತಿಳಿಸಿರುವರು. ಆದ್ದರಿಂದ ಈ ರೋಗದಲ್ಲಿಯೇ ನಾನು ಮರಣ ಹೊಂದುವೆನೆಂದು ಭಾವಿಸಬೇಕಾಗಿದೆ" ಎಂದಾಗ ನಾನು ಅತ್ತೆ. "ನನ್ನ ಕುಟುಂಬದವರ ಪೈಕಿ ನೀನು ನನ್ನನ್ನು ಪ್ರಥಮವಾಗಿ ಸೇರುವೆ. ನೀನು ಸ್ವರ್ಗದ ಸ್ತ್ರೀಯರ 'ಸಯ್ಯಿದಃ' (ನಾಯಕಿ) ಆಗಿರುವೆಯೆಂದು ಹೇಳಿದಾಗ ನಾನು ನಕ್ಕೆನು."

## ವಿಶಿಷ್ಟ ಗುಣಗಳು

ಪ್ರವಾದಿಯ(ಸ) ಶಿಕ್ಷಣದಲ್ಲಿ ಬೆಳೆದುದರಿಂದ ಫಾತಿಮರಲ್ಲಿ ಎಲ್ಲ ವಿಶಿಷ್ಟ ಗುಣಗಳೂ ಸಮ್ಮಿಳಿತವಾಗಿದ್ದುವು. ಭಯಭಕ್ತಿ, ಸಹನೆ, ತ್ಯಾಗ ಮನೋಭಾವ, ಲಜ್ಜೆ ಮುಂತಾದ ಗುಣಗಳು ಫಾತಿಮರಲ್ಲಿ(ರ) ಗಮನಾರ್ಹವಾಗಿದ್ದುವು. ದೇಹಾಕೃತಿ ಮತ್ತು ಸ್ವಭಾವದಲ್ಲಿ ಅವರಿಗೆ ಪ್ರವಾದಿಯವರೊಂದಿಗೆ(ಸ) ತುಂಬಾ ಹೋಲಿಕೆಯಿತ್ತು. ಪ್ರವಾದಿ ಯವರಂತೆಯೇ(ಸ) ಸಭ್ಯ ಹಾಗೂ ಸ್ಪಷ್ಟ ಶೈಲಿಯಲ್ಲಿ ಮಾತನಾಡುತ್ತಿದ್ದರು. ಪತಿಯಾಗಿದ್ದ ಅಲೀಯವರು(ರ) ಉನ್ನತ ಸಾಹಿತಿ ಮತ್ತು ಕವಿಯಾಗಿದ್ದರು. ಫಾತಿಮರಿಗೆ(ರ) ಕವಿತೆಯಲ್ಲಿ

ತುಂಬಾ ಆಸಕ್ತಿಯಿತ್ತು. ಪ್ರವಾದಿವರ್ಯರು(ಸ) ನಿಧನರಾದಾಗ ಅಲೀ(ರ) ರಚಿಸಿದ್ದ ಒಂದು ಕವಿತೆಯನ್ನು ಹಾಡಿ ಫಾತಿಮರು(ರ) ತನ್ನ ಮನೋವೇದನೆಯನ್ನು ತೋಡಿ ಕೊಂಡಿದ್ದರು.

ಬುದ್ಧಿವಂತಿಕೆ, ಧೈರ್ಯ, ದೃಢಚಿತ್ತತೆ ಎಂಬೀ ಗುಣಗಳು ಫಾತಿಮರಲ್ಲಿ(ರ) ಅಭಿವ್ಯಕ್ತವಾಗಿದ್ದುವು. ಉಹುದ್ ಯುದ್ಧದಲ್ಲಿ ಪ್ರವಾದಿಯ(ಸ) ಮುಂದಿನ ಹಲ್ಲು ಮುರಿದು, ಹಣೆ ಮತ್ತು ತುಟಿಗಳಿಗೆ ಗಾಯವಾದಾಗ ಫಾತಿಮರೇ(ರ) ಅವರ ಶುಶ್ರೂಷೆ ನಡೆಸಿದ್ದರು. ಗಾಯ ತೊಳೆದು ರಕ್ತ ಸೋರುವುದನ್ನು ನಿಲ್ಲಿಸುವ ಪ್ರಯತ್ನವು ಸಫಲ ವಾಗಲಿಲ್ಲ. ಕೊನೆಗೆ ಒಂದು ಚಾಪೆಯನ್ನು ಹೊತ್ತಿಸಿ ಅದರ ಬೂದಿಯನ್ನು ಗಾಯಕ್ಕೆ ಹಾಕಿ ಕಟ್ಟಿದಾಗ ರಕ್ತ ಸೋರುವುದು ನಿಂತಿತು.

## ಮಕ್ಕಳು

ಫಾತಿಮರಿಗೆ(ರ) ಹಸನ್, ಹುಸೈನ್, ಮುಹ್‌ಸಿನ್, ಝೈನಬ್, ಉಮ್ಮು ಕುಲ್ಸೂಮ್ ಎಂಬ ಐವರು ಮಕ್ಕಳಿದ್ದರು. ಮುಹ್‌ಸಿನ್ ಚಿಕ್ಕಂದಿನಲ್ಲಿಯೇ ನಿಧನರಾಗಿದ್ದರು. ಹಸನ್‌ರು(ರ) ತಂದೆ ಅಲೀಯವರ(ರ) ಬಳಿಕ ಖಲೀಫರಾಗಿ ಬೈಅತ್ ಮಾಡಲ್ಪಟ್ಟರೂ ಅನಂತರ ಅದರಿಂದ ಹಿಂದೆ ಸರಿದರು. ವೈರಿಗಳ ಪ್ರೇರಣೆಯಿಂದ ಪತ್ನಿಯು ಅವರಿಗೆ ವಿಷವುಣಿಸಿ ಕೊಂದರೆಂದು ಹೇಳಲಾಗುತ್ತಿದೆ. ಹುಸೈನ್‌ರು(ರ) ಯಝೀದ್‌ನ ವಿರುದ್ಧ ಹೋರಾಡಿ ಕರ್ಬಲಾದಲ್ಲಿ ಹುತಾತ್ಮರಾದರು. ಝೈನಬ್‌ರು ಅಬ್ದುಲ್ಲಾ ಬಿನ್ ಜಅ್‌ಫರ್ ರನ್ನೂ ವಿವಾಹವಾದರು. ದಾರುಣ ಕರ್ಬಲಾ ಘಟನೆಯನ್ನು ಅವರು ಕಣ್ಣಾರೆ ಕಂಡರು. ಉಮ್ಮು ಕುಲ್ಸೂಮ್‌ರ ಪ್ರಥಮ ವಿವಾಹವು ಉಮರ್ ಬಿನ್ ಖತ್ತಾಬ್‌ರೊಂದಿಗೆ ಜರಗಿತ್ತು. ಉಮರ್‌ರ(ರ) ಹತ್ಯೆಯ ಬಳಿಕ ಉಮ್ಮು ಕುಲ್ಸೂಮ್‌ರು ಔನು ಬಿನ್ ಜಅ್‌ಫರ್‌ರನ್ನೂ ಅವರ ನಿಧನಾನಂತರ ಮುಹಮ್ಮದ್ ಬಿನ್ ಜಅ್‌ಫರ್‌ರನ್ನೂ ವಿವಾಹವಾದರು.

## ನಿಧನ

ಹ. ಫಾತಿಮರು(ರ) ಹಿಜರಿ ಹನ್ನೊಂದನೇ ರಮಝಾನ್ ತಿಂಗಳಲ್ಲಿ ನಿಧನರಾದರು. ಆಗ ಪ್ರವಾದಿ(ಸ) ನಿಧನರಾಗಿ ಆರು ತಿಂಗಳು ಕಳೆದಿತ್ತು. ನಿಧನ ವೇಳೆ ಫಾತಿಮರಿಗೆ(ರ) 24 ಯಾ 25 ವರ್ಷ ಪ್ರಾಯವಾಗಿತ್ತು. ಪ್ರವಾದಿಯ(ಸ) ಪುತ್ರಿಯರೆಲ್ಲರೂ ಯೌವನ ದಲ್ಲಿಯೇ ನಿಧನರಾಗಿದ್ದರು. ಫಾತಿಮರು(ರ) ವಿಶೇಷ ರೋಗ ಬಾಧಿತರಾಗಿದ್ದರೆಂಬ ಬಗ್ಗೆ ಚಾರಿತ್ರಿಕ ಉಲ್ಲೇಖಗಳಿಲ್ಲ.

□□□

# ಹಝ್ರತ್ ಅಸ್ಮಾ(ರ)

ಅಸಾಮಾನ್ಯ ಕೆಚ್ಚು, ಅಸದೃಶ ಮನೋದಾರ್ಢ್ಯ ಮತ್ತು ಅಚಂಚಲ ಸತ್ಯವಿಶ್ವಾಸದ ಸಾಕಾರವಾಗಿದ್ದ ಹ. ಅಸ್ಮಾ(ರ) ಹಿಜರಿಗಿಂತ 25 ವರ್ಷಗಳ ಹಿಂದೆ ಪವಿತ್ರ ಮಕ್ಕಾದಲ್ಲಿ ಜನಿಸಿದರು. ಅವರು ಅಬೂಬಕರ್‌ರ(ರ) ಪುತ್ರಿ ಮತ್ತು ಆಯಿಶಾ ಸಿದ್ದೀಖರ(ರ) ಸಹೋದರಿ. ಅಸ್ಮಾರು ಇಸ್ಲಾಮ್ ಸ್ವೀಕರಿಸಿದವರಲ್ಲಿ 18ನೆಯವರಾಗಿದ್ದರು. ಹ. ಅಸ್ಮಾರನ್ನು(ರ) ಗೌರವ ಸೂಚಕವಾಗಿ "ದಾತುನ್ನಿತ್ವಾಖೈನ್" ಎಂದು ಕರೆಯಲಾಗುತ್ತದೆ. ಆಯಿಶಾ(ರ) ಮತ್ತು ಅಸ್ಮಾರು ಮಲತಾಯಿ ಮಕ್ಕಳು, ಆಸ್ಮಾರ ಮಾತೆಯ ಹೆಸರು ಖುತೈಲ ಮತ್ತು ಆಯಿಶಾರ ತಾಯಿ ಉಮ್ಮುರೂಮಾನ್. ಉಮ್ಮುರೂಮಾನ್ ಆರಂಭದಲ್ಲಿಯೇ ಇಸ್ಲಾಮ್ ಸ್ವೀಕರಿಸಿದರು. ಖುತೈಲ ಇಸ್ಲಾಮ್ ಸ್ವೀಕರಿಸಿದ ಬಗ್ಗೆ ಚರಿತ್ರೆಯಲ್ಲಿ ಉಲ್ಲೇಖಗಳಿಲ್ಲ.

## ವಿವಾಹ

ಹ. ಅಸ್ಮಾರನ್ನು(ರ) ಝುಬೈರ್ ಬಿನ್ ಅವ್ವಾಮ್‌ರು ವಿವಾಹವಾಗಿದ್ದರು. ಪ್ರವಾದಿ ಸೋದರತ್ತೆಯ ಪುತ್ರರಾದ ಹ. ಝುಬೈರ್‌ರು ಅಗ್ರಗಣ್ಯ ಸಹಾಬಿಗಳ ಗುಂಪಿಗೆ ಸೇರಿದ್ದಾರೆ. ಅವರು ಅಸಾಮಾನ್ಯ ಶೌರ್ಯ ಮತ್ತು ಯುದ್ಧ ನೈಪುಣ್ಯದ ವ್ಯಕ್ತಿಯಾಗಿದ್ದರು. ಅವರು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದಾರೆ. ಝುಬೈರ್ ಬಿನ್ ಅವ್ವಾಮ್‌ರು ಅಬಿಸೀನಿಯಾಕ್ಕೆ ವಲಸೆ ಹೋದವರಲ್ಲಿ ಮೊದಲಿಗರು. ಸ್ವರ್ಗ ಪ್ರವೇಶಿಸುವವರೆಂದು ಪ್ರವಾದಿ(ಸ) ಸುವಾರ್ತೆ ನೀಡಿದ ಹತ್ತು ಮಂದಿಯಲ್ಲಿ ಝುಬೈರ್‌ರೂ ಸೇರಿದ್ದಾರೆ. ಇದರಿಂದ ಅವರ ಶ್ರೇಷ್ಠತೆಯನ್ನು ಚೆನ್ನಾಗಿ ಗ್ರಹಿಸಬಹುದು. ಅವರು ಜಮಲ್ ಯುದ್ಧದಲ್ಲಿ ಆಯಿಶಾರ(ರ) ಕಡೆಯಲ್ಲಿದ್ದರು. ಜಮಲ್ ಯುದ್ಧ ಮುಗಿದು ಮರಳುವಾಗ ಅವರು ಮೋಸದಿಂದ ಕೊಲ್ಲಲ್ಪಟ್ಟರು.

ಹ. ಝುಬೈರ್‌ರಿಗೆ(ರ) ಅಸ್ಮಾರಲ್ಲಿ(ರ) 5 ಗಂಡು ಮತ್ತು 3 ಹೆಣ್ಮಕ್ಕಳು ಹುಟ್ಟಿದ್ದಾರೆ. ಅಬ್ದುಲ್ಲಾ, ಉರ್‌ವ, ಮುಂದಿರ್, ಆಸಿಮ್, ಮುಹಾಜಿರ್, ಖದೀಜತುಲ್ ಕುಬ್ರಾ, ಉಮ್ಮುಲ್ ಹಸನ್ ಮತ್ತು ಆಯಿಶಾ.

## ಇಬ್ನು ಝುಬೈರ್

ಅಬ್ದುಲ್ಲಾರು ಇಬ್ನು ಝುಬೈರ್ ಎಂದೇ ಖ್ಯಾತರಾಗಿದ್ದಾರೆ. ಅಬ್ದುಲ್ಲಾ ಮುಸ್ಲಿಮರು ಮದೀನಾಕ್ಕೆ ವಲಸೆ ಹೋದ ಬಳಿಕ ಹುಟ್ಟಿದ ಮೊದಲ ಮಗು. ಅಬ್ದುಲ್ಲಾರ ಜನನದಿಂದ ಮುಸ್ಲಿಮರು ಬಹಳ ಸಂತೋಷ ಪ್ರಕಟಿಸಿದ್ದರು. ಯಾಕೆಂದರೆ ಯಹೂದಿಯರು ಮಾಟ ಮಾಡಿದುದರಿಂದ ಮುಸ್ಲಿಮರಿಗೆ ಮಕ್ಕಳಾಗುವುದಿಲ್ಲವೆಂದು ವೈರಿಗಳು ಪ್ರಚಾರ ಮಾಡಿದ್ದರು. ಆ ಕುಪ್ರಚಾರವು ಸುಳ್ಳೆಂಬುದನ್ನು ಅಬ್ದುಲ್ಲಾರ ಜನನವು ಸಾಬೀತು ಪಡಿಸಿತು.

ಇಸ್ಲಾಮೀ ಇತಿಹಾಸದಲ್ಲಿ ಇಬ್ನು ಝುಬೈರ್‌ರಿಗೆ(ರ) ಅದ್ವಿತೀಯ ಸ್ಥಾನವಿದೆ. ಅವರು ಅಕ್ರಮ ಮತ್ತು ಅನ್ಯಾಯವನ್ನು ಸೈರಿಸದ ವೀರ ಕೇಸರಿಯಾಗಿದ್ದರು. ಮುಆವಿಯರ ಬಳಿಕ ಯಝೀದ್ ಖಿಲಾಫತ್ ವಹಿಸಿಕೊಂಡಾಗ ಇಬ್ನು ಝುಬೈರ್‌ರು(ರ) ಅದನ್ನು ಅಂಗೀಕರಿಸಲಿಲ್ಲ. ಯಝೀದ್‌ನ ಖಿಲಾಫತ್ ಸಿಂಧುವಲ್ಲ. ಜನರನ್ನು ಬಲಾತ್ಕಾರವಾಗಿ ಬೈಅತ್ ಮಾಡಿಸಲಾಗಿದೆಯೆಂದು ಅವರು ಸಾರಿದರು. ಅವರು ಯಝೀದ್‌ನ ಖಿಲಾಫತ್ತನ್ನು ಅಂಗೀಕರಿಸದೆ, ಮಕ್ಕಾದಲ್ಲಿ ಖಿಲಾಫತ್ ಸ್ಥಾಪಿಸಿ, ಜನರು ಅವರಿಗೆ ಖಲೀಫರೆಂದು ನಿಷ್ಠೆ(ಬೈಅತ್) ಘೋಷಿಸಿದರು.

ಯಝೀದ್‌ನ ನಿಧನಾನಂತರ ಅಬ್ದುಲ್ ಮಲಿಕ್ ಬಿನ್ ಮರ್ವಾನ್ ಖಿಲಾಫತ್ ಸ್ಥಾನ ವಹಿಸಿಕೊಂಡರು. ಅಬ್ದುಲ್ ಮಲಿಕ್ ಆಡಳಿತ ವಹಿಸಿಕೊಂಡಾಗ ಅವರ ಗವರ್ನರ ರಾಗಿದ್ದ ಹಜ್ಜಾಜ್ ಬಿನ್ ಯೂಸುಫ್ ಇಬ್ನು ಝುಬೈರ್‌ರ ವಿರುದ್ಧ ಯುದ್ಧ ಘೋಷಿಸಿದರು. ಯುದ್ಧ ಪ್ರವೀಣ ಮತ್ತು ಕ್ರೂರಿಯಾಗಿದ್ದ ಹಜ್ಜಾಜ್ ಮಕ್ಕಾವನ್ನು ಸುತ್ತುವರಿದು ತೀವ್ರ ಆಕ್ರಮಣ ನಡೆಸಿದರು. ಆ ಆಕ್ರಮಣದಿಂದ ಪವಿತ್ರ ಕಅಬಾಕ್ಕೆ ಭಾರೀ ಹಾನಿಯಾಯಿತು. ಸುಮಾರು ಆರು ತಿಂಗಳವರೆಗೆ ನಡೆದ ಈ ಯುದ್ಧದಲ್ಲಿ ಇಬ್ನು ಝುಬೈರ್‌ರ(ರ) ಸೇನೆಯು ಸೋತು, ಅವರು ಹುತಾತ್ಮರಾದರು.

## ಎರಡು ಪಟ್ಟಿಯವಳು

ಪ್ರವಾದಿ(ಸ) ಮತ್ತು ಅಬೂಬಕರ್‌ರು(ರ) ಮದೀನಕ್ಕೆ ವಲಸೆ ಹೋಗುವುದಕ್ಕಿಂತ ಮುಂಚೆ ಮಕ್ಕಾದ ಸಮೀಪದ ಬೆಟ್ಟದ ಗುಹೆಯೊಂದರಲ್ಲಿ ಕೆಲವಾರು ದಿನ ಅಡಗಿ ಕುಳಿತಿದ್ದರು. ವೈರಿಗಳು ಪ್ರವಾದಿಯವರನ್ನು(ಸ) ವಧಿಸಲು ಸಂಚು ಹೂಡಿದ ರಾತ್ರಿ ಪ್ರವಾದಿವರ್ಯರು(ಸ) ಅಲೀಯವರನ್ನು(ರ) ತಮ್ಮ ಹಾಸಿಗೆಯಲ್ಲಿ ಮಲಗಿಸಿ ಅದ್ಭುತ ರೀತಿಯಲ್ಲಿ ಪಾರಾದರು. ಮನೆ ಸುತ್ತುವರಿದ ವೈರಿಗಳು ಬೆಳಿಗ್ಗೆ ಎದ್ದು ನೋಡಿದಾಗ ಪ್ರವಾದಿಯ(ಸ) ಹಾಸಿಗೆಯಲ್ಲಿ ಅಲೀಯವರನ್ನು(ರ) ಕಂಡರು. ಪ್ರವಾದಿ(ಸ) ಅಲ್ಲಿಂದ ಪಾರಾಗಿರುವರೆಂದು ತಿಳಿದು ವೈರಿಗಳು ಅವರನ್ನು ಹುಡುಕಲಿಕ್ಕಾಗಿ ನಾನಾ ಕಡೆಗಳಿಗೆ

ತೆರಳಿದರು. ಮುಹಮ್ಮದ್‌ರನ್ನು(ಸ) ಹಿಡಿದು ತರುವವರಿಗೆ ನೂರು ಒಂಟೆ ಬಹುಮಾನ ನೀಡುವುದಾಗಿ ಘೋಷಿಸಿದರು. ವೈರಿಗಳು ಗುಹಾದ್ವಾರದ ಬಳಿ ಹಲವು ಬಾರಿ ಬಂದರೂ ಅವರಿಗೆ ಗುಹೆಯೊಳಗೆ ಇಣುಕುವ ಬುದ್ಧಿ ಬರಲಿಲ್ಲ! ಹೀಗೆ ಅಲ್ಲಾಹನು ಪ್ರವಾದಿ(ಸ) ಮತ್ತು ಅಬೂಬಕರ್‌ರನ್ನು(ರ) ರಕ್ಷಿಸಿದನು.

ರಾತ್ರಿ ವೇಳೆ ಅಸ್ಮಾ(ರ) ಯಾರಿಗೂ ತಿಳಿಯದಂತೆ ಪ್ರವಾದಿ(ಸ) ಮತ್ತು ಅಬೂಬಕ್ಕರ್ ರಿಗೆ(ರ) ಆಹಾರ ಸರಬರಾಜು ಮಾಡುತ್ತಿದ್ದರು. ಅಬೂಬಕರ್‌ರ(ರ) ಪುತ್ರ ಅಬ್ದುಲ್ಲಾ ಅಂದು ಇಸ್ಲಾಮ್ ಸ್ವೀಕರಿಸದಿದ್ದರೂ ಪ್ರವಾದಿ(ಸ) ಮತ್ತು ತಂದೆಗೆ ಹಲವು ರೀತಿಯಿಂದ ನೆರವಾದರು. ರಾತ್ರಿ ವೇಳೆ ಆಡುಗಳನ್ನು ಅಟ್ಟಿಕೊಂಡು ಹೋಗಿ ಹಾಲು ಕರೆದು ಕೊಡುತ್ತಿದ್ದರು. ವೈರಿಗಳ ತೀರ್ಮಾನಗಳನ್ನು ಪ್ರವಾದಿಯವರಿಗೆ(ಸ) ತಿಳಿಸುತ್ತಿದ್ದರು. ಪ್ರವಾದಿ(ಸ) ಮತ್ತು ಅಬೂಬಕರ್(ರ) ಮದೀನಕ್ಕೆ ತೆರಳುವ ಸಿದ್ಧತೆಗಳೆಲ್ಲವೂ ಪೂರ್ಣಗೊಂಡಿತು. ಅಸ್ಮಾರು(ರ) ಕೆಲವಾರು ದಿನಗಳಿಗೆ ಬೇಕಾದ ಆಹಾರ ಪದಾರ್ಥ ಗಳನ್ನು ಗುಹೆಗೆ ತಲುಪಿಸಿದರು. ಆಹಾರ ಪದಾರ್ಥ ಮತ್ತು ನೀರಿನ ಚರ್ಮ ಪಾತ್ರೆಯನ್ನು ಕಟ್ಟಲು ಹಗ್ಗ ದೊರೆಯಲಿಲ್ಲ. ಅಸ್ಮಾರು(ರ). ಸೊಂಟಕ್ಕೆ ಕಟ್ಟಿದ್ದ ಪಟ್ಟಿಯನ್ನು ತೆಗೆದು ಅದನ್ನು ಇಬ್ಭಾಗವಾಗಿ ಸೀಳಿ ಅದರಿಂದಲೇ ಆಹಾರದ ಪೊಟ್ಟಣ ಮತ್ತು ನೀರಿನ ಪಾತ್ರೆಯನ್ನು ಕಟ್ಟಿದರು. ಸಂದರ್ಭೋಚಿತವಾಗಿ ವರ್ತಿಸುವ ಅಸ್ಮಾರ(ರ) ಸಾಮರ್ಥ್ಯವನ್ನು ನೋಡಿ ಪ್ರವಾದಿಯವರಿಗೆ(ಸ) ತುಂಬಾ ಸಂತೋಷವಾಯಿತು. ಅವರು ಅಸ್ಮಾರನ್ನು(ರ) 'ದಾತುನ್ನಿತ್ವಾಖೈನ್' ಎಂದು ಪ್ರಶಂಸಿಸಿದರು. ಅರ್ಥಾತ್ ಎರಡು ಪಟ್ಟಿಯುಳ್ಳವಳು. ತರುವಾಯ ಅದು ಅವರ ಬಿರುದಾಯಿತು.

## ಒಂದು ಉಪಾಯ

ಇಸ್ಲಾಮ್ ಸ್ವೀಕರಿಸಿದ ವೇಳೆ ಹ. ಅಬೂಬಕರ್‌ರಲ್ಲಿ(ರ) ಲಕ್ಷಕ್ಕೂ ಮಿಕ್ಕಿ ದಿರ್ಹಮ್‌ಗಳಿದ್ದವು. ಅದರಲ್ಲಿ ಹೆಚ್ಚಿನ ಅಂಶವನ್ನು ಅವರು ಇಸ್ಲಾಮಿನ ಹಾದಿಯಲ್ಲಿಯೇ ವ್ಯಯಿಸಿದ್ದರು. ಮದೀನಕ್ಕೆ ಹಿಜ್ರ ಹೋಗುವಾಗ ಅವರ ಬಳಿ ಕೇವಲ 1500 ದಿರ್ಹಮ್ ಗಳಿದ್ದುವು. ಅಸ್ಮಾ(ರ) ಅವೆಲ್ಲವನ್ನು ಅಬೂಬಕರ್‌ರಿಗೆ(ರ) ನೀಡಿದರು. ಅಬೂಬಕರ್(ರ) ಊರು ಬಿಟ್ಟ ಸುದ್ದಿ ತಿಳಿದ ವಯೋವೃದ್ಧ ತಂದೆ ಅಬೂ ಕುಹಾಫರು ಮನೆಗೆ ಬಂದರು. ಆ ವೃದ್ಧರು ಇಸ್ಲಾಮ್ ಸ್ವೀಕರಿಸಿರಲಿಲ್ಲ. "ಅಬೂಬಕರ್ ಹೋದ. ಜೊತೆಗೆ ನಾಣ್ಯಗಳನ್ನು ಕೊಂಡು ಹೋದನಲ್ಲವೇ? ಮಕ್ಕಳು ಬದುಕುವುದು ಹೇಗೆ?" ದುಃಖದಿಂದ ಆ ವೃದ್ಧರು ಪ್ರಶ್ನಿಸಿದರು. ಅಸ್ಮಾರು(ರ) ಒಂದು ಚೀಲದಲ್ಲಿ ಚಿಕ್ಕ ಚಿಕ್ಕ ಕಲ್ಲುಗಳನ್ನು ತುಂಬಿಸಿ ಹಣ ಇರಿಸುವ ಸ್ಥಳದಲ್ಲಿ ಇಟ್ಟಿದ್ದರು. ವೃದ್ಧರು ಬಂದು ವಿಚಾರಿಸಬಹುದೆಂದು ಅವರು ಮೊದಲೇ ಊಹಿಸಿದ್ದರು. ವೃದ್ಧರ ಕೈಹಿಡಿದು ಚೀಲವನ್ನು ಮುಟ್ಟಿಸುತ್ತಾ "ತಂದೆಯು ನಮಗಾಗಿ ಬಿಟ್ಟು ಹೋಗಿದ್ದಾರೆ" ಎಂದು ಹೇಳಿ ಸಮಾಧಾನ ಪಡಿಸಿದರು.

## ಬಡತನದ ಜೀವನ

ವಿವಾಹದ ಬಳಿಕ ಅಸ್ಮಾರ(ರ) ಕುಟುಂಬ ಜೀವನವು ಬಹಳ ಕಷ್ಟಗಳಿಂದ ತುಂಬಿತ್ತು. ಅವೆಲ್ಲವನ್ನು ಅಸ್ಮಾರು(ರ) ಸಂತೋಷ ಮತ್ತು ತ್ಯಾಗ ಮನೋಭಾವದಿಂದ ಅನುಭವಿಸಿದರು. ಮನೆಗೆಲಸ ಮತ್ತು ಹೊಣೆಗಾರಿಕೆಗಳ ಬಗ್ಗೆ ಅಸ್ಮಾ(ರ) ಹೀಗೆನ್ನುತ್ತಾರೆ:

"ನನ್ನ ವಿವಾಹವಾದಾಗ ಝುಬೈರ್ ಬಿನ್ ಅವ್ವಾಮ್‌ರ ಬಳಿ ಸಂಪತ್ತಾಗಲೀ ಸೇವಕರಾಗಲೀ ಇದ್ದಿರಲಿಲ್ಲ. ಒಂದು ಒಂಟೆ ಮತ್ತು ಒಂದು ಕುದುರೆ ಇತ್ತು. ಅವುಗಳನ್ನು ಸಾಕುವ ಹೊಣೆ ನನ್ನ ಮೇಲಿತ್ತು. ಪ್ರವಾದಿಯವರು(ಸ) ಝುಬೈರ್‌ರಿಗೆ ಒಂದು ಖರ್ಜೂರದ ತೋಟದ ಅರ್ಧ ಭಾಗವನ್ನು ಧಾನವಾಗಿ ನೀಡಿದ್ದರು. ಅದು ಮದೀನಾದಿಂದ ಕೆಲವಾರು ಮೈಲು ದೂರದಲ್ಲಿತ್ತು. ನಾನು ದಿನನಿತ್ಯ ಅಲ್ಲಿ ಹೋಗಿ ಖರ್ಜೂರ ಬೀಜವನ್ನು ಸಂಗ್ರಹಿಸಿ ಅದನ್ನು ತಲೆಯಲ್ಲಿ ಹೊತ್ತು ತಂದು ಹುಡಿ ಮಾಡಿ ಕುದುರೆಗೆ ತಿನ್ನಿಸುತ್ತಿದ್ದೆ. ಸೇವಕರಾರೂ ಇಲ್ಲದಿದ್ದುದರಿಂದ ಮನೆಗೆ ಬೇಕಾದ ನೀರನ್ನು ತರುವ ಕೆಲಸವನ್ನೂ ನಾನೇ ಮಾಡುತ್ತಿದ್ದೆ. ನನಗೆ ರೊಟ್ಟಿ ತಯಾರಿಸುವ ಪರಿಸ್ಥಿತಿಯಿರಲಿಲ್ಲ. ನೆರೆಮನೆಯ ಅನ್ಸಾರೀ ಸ್ತ್ರೀಯರು ನನಗೆ ರೊಟ್ಟಿ ಮಾಡಲು ನೆರವಾಗುತ್ತಿದ್ದರು. ಆ ಸ್ತ್ರೀಯರು ನೆರೆಕರೆಯವರಿಗೆ ನೆರವಾಗುವ ಬಗ್ಗೆ ಬಹಳ ಕಾಳಜಿ ಹೊಂದಿದ್ದರು.

ಅದೊಂದು ದಿನ ವಾಡಿಕೆಯಂತೆ ನಾನು ಖರ್ಜೂರದ ಬೀಜವನ್ನು ತಲೆಯಲ್ಲಿ ಹೊತ್ತುಕೊಂಡು ಬರುತ್ತಿದ್ದೆ. ದಾರಿಯಲ್ಲಿ ಪ್ರವಾದಿ(ಸ) ಮತ್ತು ಕೆಲವು ಸಂಗಡಿಗರು ಭೇಟಿಯಾದರು. ನನ್ನ ಅವಸ್ಥೆ ನೋಡಿ ಪ್ರವಾದಿಯವರಿಗೆ(ಸ) ಕನಿಕರವಾಯಿತು. ಅವರು ಒಂಟೆ ನಿಲ್ಲಿಸಿ ಅದರ ಮೇಲೇರುವಂತೆ ತಿಳಿಸಿದರು. ಆದರೆ ನಾಚಿಕೆಯಿಂದ ನಾನು ಹತ್ತಲಿಲ್ಲ. ಮನೆಗೆ ತಲಪಿ ಈ ವಿಷಯವನ್ನು ಪತಿಗೆ ತಿಳಿಸಿದೆ." "ನೀನು ಖರ್ಜೂರದ ಬೀಜವನ್ನು ತಲೆಯಲ್ಲಿ ಹೊತ್ತು ನಡೆಯುತ್ತಿರುವ ಬಗ್ಗೆ ನನಗೆ ವ್ಯಸನವಾಗುತ್ತಿದೆ. ಆದರೆ ಏನು ಮಾಡಲಿ" ಎಂದು ಅವರು ವಿಷಾದಿಸಿದರು.

ಕೆಲವು ದಿನಗಳ ಬಳಿಕ ಪತಿಯು ನನಗೊಂದು ಸೇವಕನನ್ನು ಕರೆ ತಂದರು. ಆದ್ದರಿಂದ ಕುದುರೆಗೆ ಮೇವು ಒದಗಿಸುವ ನನ್ನ ಕೆಲಸ ಹಗುರವಾಯಿತು. ಮನೆಗೆಲಸ ದಲ್ಲಿಯೂ ಸ್ವಲ್ಪ ಆರಾಮವಾಯಿತು.

## ಉತ್ಕೃಷ್ಟ ಗುಣ

ತಾಳ್ಮೆ, ಸಹನೆ, ಧೈರ್ಯ, ದೃಢ ವಿಶ್ವಾಸ, ಔದಾರ್ಯ, ದೇವಭಕ್ತಿಯೇ ಮುಂತಾದ ಉತ್ತಮ ಗುಣಗಳನ್ನು ಅಸ್ಮಾ(ರ) ಹೊಂದಿದ್ದರು. ಏನಾದರೂ ಸಮಸ್ಯೆ ಉದ್ಭವಿಸಿದರೆ, ಆ ಬಗ್ಗೆ ಪ್ರವಾದಿಯವರೊಡನೆ(ಸ) ವಿಚಾರಿಸಿ ಧಾರ್ಮಿಕ ನೀತಿ ನಿಯಮಗಳನ್ನು ತಿಳಿದು ಕೊಂಡ ಬಳಿಕವೇ ಕಾರ್ಯೋನ್ಮುಖರಾಗುತ್ತಿದ್ದರು. ಒಮ್ಮೆ ಅಸ್ಮಾರ(ರ) ಮಾತೆಯು ಅವರಿಗೆ ತುಂಬಾ ಉಡುಗೊರೆಗಳನ್ನು ತಂದರು. ಮಾತೆ ಇಸ್ಲಾಮ್ ಸ್ವೀಕರಿಸಿರಲಿಲ್ಲ.

ಅಸ್ಮಾ(ರ) ತಕ್ಷಣವೇ ಪ್ರವಾದಿಯ ಬಳಿಗೆ ಜನ ಕಳುಹಿಸಿದರು. ತನ್ನ ಮಾತೆಯು ಮೂರ್ತಿ ಆರಾಧಕಳಾಗಿದ್ದು, ಅವರಿಗೆ ಮನೆಯಲ್ಲಿ ಆಶ್ರಯ ನೀಡಿ ಅವರು ತಂದಿರುವ ಉಡುಗೊರೆಗಳನ್ನು ಸ್ವೀಕರಿಸಬಹುದೇ? ಎಂಬ ಬಗ್ಗೆ ಕೇಳಲು ತಿಳಿಸಿದರು. ಪ್ರವಾದಿಯವರು(ಸ) ಮಾತೆಗೆ ಮನೆಯಲ್ಲಿ ತಂಗುವ ಅವಕಾಶ ನೀಡಿ ಅವರಿತ್ತ ಉಡುಗೊರೆಯನ್ನು ಸ್ವೀಕರಿಸುವಂತೆ ಆಜ್ಞಾಪಿಸಿದರು. ಪ್ರವಾದಿಯ(ಸ) ಅನುಮತಿ ದೊರೆತ ಬಳಿಕವೇ ಅಸ್ಮಾ(ರ) ತಾಯಿಯನ್ನು ಮನೆಯೊಳಕ್ಕೆ ಕರೆದು, ಅವರ ಉಡುಗೊರೆಗಳನ್ನು ಸ್ವೀಕರಿಸಿದರು. ಇನ್ನೊಮ್ಮೆ ಮಾತೆಯು ಮದೀನಕ್ಕೆ ಬಂದು ಅಸ್ಮಾರೊಡನೆ(ರ) ಸ್ವಲ್ಪ ಹಣ ಕೇಳಿದರು. ವಾಡಿಕೆಯಂತೆ ಅಸ್ಮಾರು(ರ) ಪ್ರವಾದಿಯವರಿಗೆ(ಸ) ತಿಳಿಸಿದರು. ಆಗ ಪ್ರವಾದಿ(ಸ) "ಅವರಿಗೆ ನೀಡಿರಿ. ಅವರು ನಿಮ್ಮ ತಾಯಿಯಲ್ಲವೇ?" ಎಂದು ಹೇಳಿದರು.

ಆರಂಭ ಕಾಲದಲ್ಲಿ ಅಸ್ಮಾ(ರ) ಬಡವರಾಗಿದ್ದರು. ತರುವಾಯ ಬಡತನ ತೊಲಗಿ ಶ್ರೀಮಂತರಾದರು. ಆದರೆ ಅವರು ಸರಳ ಜೀವನವನ್ನು ತ್ಯಜಿಸಲಿಲ್ಲ. ಹಣವನ್ನು ಸಂಗ್ರಹಿಸಿಡುತ್ತಿರಲಿಲ್ಲ. ಎಲ್ಲವನ್ನೂ ಬಡವರಿಗೆ ಹಂಚಿಕೊಟ್ಟಿದ್ದರು. ಕಡಿಮೆ ಬೆಲೆಯ ದೊರಗು ಬಟ್ಟೆಗಳನ್ನು ಅವರು ಧರಿಸುತ್ತಿದ್ದರು. ಒಮ್ಮೆ ಪುತ್ರ ಮಂದಿರ್‌ರು ಇರಾಕ್‌ನಿಂದ ಮರಳುವಾಗ ತೆಳು ಹಾಗೂ ದುಬಾರಿ ಬೆಲೆಯ ಬಟ್ಟೆಗಳನ್ನು ತಂದಿದ್ದರು. ಆದರೆ ಅಸ್ಮಾ(ರ) ಅದನ್ನು ಸ್ವೀಕರಿಸಲಿಲ್ಲ. ನನಗೆ ಕಡಿಮೆ ಬೆಲೆಯ ದೊರಗು ಬಟ್ಟೆಗಳು ಸಾಕೆಂದು ಅವರು ಹೇಳಿದರು.

ಒಮ್ಮೆ ಮದೀನದಲ್ಲಿ ಕಳ್ಳರ ಉಪದ್ರವ ಜೋರಾಯಿತು. ಆ ದಿನಗಳಲ್ಲಿ ಅಸ್ಮಾ(ರ) ತಲೆದಿಂಬಿನಡಿಯಲ್ಲಿ ಕಠಾರಿಯಿರಿಸಿ ಮಲಗುತ್ತಿದ್ದರು. "ರಾತ್ರಿ ಯಾರಾದರೂ ಕಳ್ಳ ಬಂದರೆ ಇರಿಯಲಿಕ್ಕಾಗಿ" ಎಂದು ಅಸ್ಮಾ(ರ) ಧೈರ್ಯದಿಂದ ಹೇಳುತ್ತಿದ್ದರು.

## ವಿವಾಹ ವಿಚ್ಛೇದನ

ಹ. ಝುಬೈರ್(ರ) ಮತ್ತು ಅಸ್ಮಾರ(ರ) ದಾಂಪತ್ಯ ಜೀವನವು ಜೀವನಾಂತ್ಯದವರೆಗೆ ಉಳಿಯಲಿಲ್ಲ. ಕಾರಣಾಂತರದಿಂದ ಝುಬೈರ್‌ರು(ರ) ಅಸ್ಮಾರಿಗೆ(ರ) ತಲಾಕ್ ಹೇಳಿದರು. ಹ. ಅಸ್ಮಾರ(ರ) ವಾರ್ಧಕ್ಯವು ವಿಚ್ಛೇದನದ ಕಾರಣವೆಂದು ಕೆಲವರು ಹೇಳುತ್ತಾರೆ. ಆದರೆ, ಅದು ಸರಿಯಲ್ಲ. ಹ. ಝುಬೈರ್‌ರಂತಹ(ರ) ಓರ್ವ ಗಣ್ಯ ಸಹಾಬಿಯು ವಾರ್ಧಕ್ಯ ಕಾರಣಕ್ಕಾಗಿ ಪತ್ನಿಗೆ ತಲಾಕ್ ಹೇಳಿದರೆಂದು ನಂಬಲು ಸಾಧ್ಯವಿಲ್ಲ. ಪತಿ-ಪತ್ನಿಯರ ವಿರಸವು ವಿವಾಹ ವಿಚ್ಛೇದನಕ್ಕೆ ತಲುಪಿತೆಂಬುದಷ್ಟೇ ನಿಜ. ಇತಿಹಾಸಗಾರ ಇಬ್ನು ಆಸಿರ್‌ರ ವಿವರಣೆಯು ಈ ಅಭಿಪ್ರಾಯವನ್ನು ದೃಢೀಕರಿಸುತ್ತದೆ. ಅವರು ಹೀಗೆ ಉಲ್ಲೇಖಿಸಿದ್ದಾರೆ:

ಯಾವುದೋ ವಿಷಯದ ಬಗ್ಗೆ ಒಮ್ಮೆ ಝುಬೈರ್ ಮತ್ತು ಅಸ್ಮಾರಲ್ಲಿ(ರ) ಕಲಹ ವುಂಟಾಯಿತು. ಮುಂಗೋಪಿಯಾಗಿದ್ದ ಝುಬೈರ್(ರ) ಪತ್ನಿಗೆ ಹೊಡೆದರು. ಅಸ್ಮಾರು(ರ) ಸಹಾಯಕ್ಕಾಗಿ ಮಗ ಅಬ್ದುಲ್ಲಾನನ್ನು ಕರೆದರು. ಅಬ್ದುಲ್ಲಾ(ರ) ನೆರವಿಗೆ ಬಂದಾಗ ಝುಬೈರ್ ಹೀಗೆಂದರು: ನೀನು ಇಲ್ಲಿಗೆ ಬರಬೇಡ. ಬಂದರೆ ನಿನ್ನ ತಾಯಿಯ ತಲಾಕ್ ಖಚಿತ. ಕೋಪದ ಭರದಿಂದ ಝುಬೈರ್(ರ) ಹಾಗೆ ಹೇಳಿದ್ದರು. ಆದರೆ ಅಬ್ದುಲ್ಲಾ(ರ) ಅದನ್ನು ಲೆಕ್ಕಿಸದೆ ತಂದೆಯ ಹಿಡಿತದಿಂದ ತಾಯಿಯನ್ನು ಬಿಡಿಸಿದರು.

ಈ ಶೋಚನೀಯ ಘಟನೆಯ ಬಳಿಕ ಅಸ್ಮಾ(ರ) ಮಗ ಅಬ್ದುಲ್ಲಾರ(ರ) ಮನೆಯಲ್ಲಿ ಹೋಗಿ ತಂಗಿದರು. ವೈವಾಹಿಕ ಸಂಬಂಧವು ಬೇರ್ಪಟ್ಟಿದ್ದರೂ ಪರಸ್ಪರ ಕೋಪವಿರಲಿಲ್ಲ. ಹ. ಝುಬೈರ್‌ರು(ರ) ವಧಿಸಲ್ಪಟ್ಟಾಗ ಅಸ್ಮಾರು(ರ) ಸಂತಾಪ ಸೂಚಕ ಗೀತೆಯೊಂದನ್ನು ಹಾಡಿದರು. ಆ ಕವಿತೆಯು ಶೋಕಭರಿತವಾಗಿತ್ತು.

## ಧೀರ ಮಾತೆ

ಹಜ್ಜಾಜ್‌ರೊಡನೆ ನಡೆದ ಯುದ್ಧದಲ್ಲಿ ಅಬ್ದುಲ್ಲಾ ಬಿನ್ ಝುಬೈರ್‌ರ ಸೇನೆಯು ಸೋಲಿನ ಅಂಚಿಗೆ ತಲಪಿತು. ಇಬ್ನು ಝುಬೈರ್‌ರಿಗೆ(ರ) ಹಜ್ಜಾಜ್‌ಗೆ ಶರಣಾಗುವುದು ಅಥವಾ ಮರಣ ಹೊಂದುವುದರ ಹೊರತು ಅನ್ಯ ಮಾರ್ಗವಿರಲಿಲ್ಲ. ಅವರು ಅಂತಿಮ ದರ್ಶನ ಮತ್ತು ಉಪದೇಶಕ್ಕಾಗಿ ತಾಯಿಯ ಬಳಿ ಬಂದರು. ಆ ವೀರ ಮಹಿಳೆಯು ಮಗನಿಗೆ ಈ ರೀತಿ ಉಪದೇಶಿಸಿದರು: ನೀನು ಸತ್ಯದಲ್ಲಿರುವಿಯೆಂಬ ದೃಢವಿಶ್ವಾಸವಿದ್ದರೆ ಓರ್ವ ವೀರ ಯೋಧನಂತೆ ಹೋರಾಡಿ ಮಡಿ. ಅಲ್ಲಾಹನ ಮಾರ್ಗದಲ್ಲಿ ನೀನು ಹುತಾತ್ಮನಾಗುವುದನ್ನೇ ನಾನು ಮೆಚ್ಚುತ್ತೇನೆ.

ಇಬ್ನು ಝುಬೈರ್‌ರು(ರ) ಮಾತೆಯ ಕರಗಳನ್ನು ಚುಂಬಿಸಿ ರಣಾಂಗಣಕ್ಕೆ ಧುಮುಕಿ ಹುತಾತ್ಮರಾದರು. ಯುದ್ಧರಂಗದಲ್ಲಿ ಹುತಾತ್ಮರಾದ ಇಬ್ನು ಝುಬೈರ್‌ರ(ರ) ಜಡದೇಹವನ್ನು ಹಜ್ಜಾಜ್‌ನು ಹಜ್ಜಾನ್ ಎಂಬ ಸ್ಥಳದಲ್ಲಿ ನೇತು ಹಾಕಿದನು. ವೃದ್ಧೆಯಾಗಿದ್ದರೂ ದೃಢಚಿತ್ತರಾಗಿದ್ದ ಅಸ್ಮಾರು(ರ) ಸೇವಕಿಯೊಂದಿಗೆ ಮೂರು ದಿನಗಳ ಬಳಿಕ ಮಗನ ಅಂತಿಮ ದರ್ಶನಕ್ಕಾಗಿ ತೆರಳಿದರು. ಪ್ರಿಯ ಪುತ್ರನ ಮೃತ ದೇಹವನ್ನು ಶೋಚನೀಯ ರೀತಿಯಲ್ಲಿ ತೂಗು ಹಾಕಿರುವುದನ್ನು ನೋಡಿ ವಿಚಲಿತರಾಗಲಿಲ್ಲ. ಅವರ ನಾಲಗೆಯಿಂದ ಶೌರ್ಯ ತುಂಬಿ ತುಳುಕುವ ಈ ಮಾತುಗಳು ಹೊರಟವು. "ಇಸ್ಲಾಮಿನ ಈ ವೀರ ಪುತ್ರನಿಗೆ ಕುದುರೆಯ ಮೇಲಿಂದ ಇನ್ನೂ ಇಳಿಯಲಾಗಲಿಲ್ಲವೇ?"

## ಹಜ್ಜಾಜನ ಮುಂದೆ

ಇಬ್ನು ಝುಬೈರ್‌ರ(ರ) ವಧೆಯ ಬಳಿಕ ಹಜ್ಜಾಜ್ ತನ್ನ ಕೃತ್ಯವನ್ನು ಸಮರ್ಥಿಸಲಿಕ್ಕಾಗಿ ಅಸ್ಮಾರ(ರ) ಬಳಿಗೆ ತೆರಳಿ "ನಿಮ್ಮ ಪುತ್ರನು ಅಲ್ಲಾಹನ ಮಂದಿರದಲ್ಲಿ ದೇವಧಿಕ್ಕಾರ

ಮತ್ತು ಅಕ್ರಮವೆಸಗಿದನು. ಆಪ್ಪರಿಂದ ಅಲ್ಲಾಹನ ಕಠಿಣ ಶಿಕ್ಷೆಗೆ ಪಾತ್ರನಾದನು" ಎಂದು ಹೇಳಿದರು. ಅಸ್ಮಾ(ರ) ಅಂಜಲಿಲ್ಲ. ಅವರು ತಲೆಯೆತ್ತಿ ದಿಟ್ಟ ಸ್ವರದಿಂದ ಹೀಗೆಂದರು: "ನೀನು ಸುಳ್ಳು ಹೇಳುತ್ತಿರುವೆ. ನನ್ನ ಮಗ ದೇವಧಿಕ್ಕಾರಿಯಲ್ಲ. ನನ್ನ ಮಗನು ಧಾರಾಳ ಉಪವಾಸ ಅನುಷ್ಠಿಸುವವನೂ ನಿದ್ರೆಗೆಟ್ಟು ರಾತ್ರಿ ಆರಾಧನೆಯಲ್ಲಿ ತಲ್ಲೀನನಾಗಿರುವವನೂ ಮಾತಾಪಿತರಿಗೆ ವಿಧೇಯನೂ ಆಗಿದ್ದಾನೆ. ಆದರೆ ಪ್ರವಾದಿ(ಸ) ಹೇಳುವುದನ್ನು ನಾನು ಕೇಳಿದ್ದೇನೆ. 'ಸಕೀಫ್ ಗೋತ್ರದಲ್ಲಿ ಈರ್ವರು ಜನಿಸುವರು. ಅವರಲ್ಲಿ ಪ್ರಥಮ ವ್ಯಕ್ತಿಯು ಎರಡನೆಯವನಿಗಿಂತ ದುಷ್ಟನಾಗಿರುತ್ತಾನೆ. ಆ ಪೈಕಿ ಆ ಮಹಾ ಕಳ್ಳನನ್ನು(ಮುಕ್‌ತಾರ್ ಸಕ್ಫೀ) ನನಗೆ ನೋಡಿ ಆಗಿದೆ. ಎರಡನೆಯ ದ್ರೋಹಿಯನ್ನು ನಾನು ಕಣ್ಣಾರೆ ಕಾಣುತ್ತಿದ್ದೇನೆ." ಆ ವೀರ ಮಹಿಳೆಯ ಮುಂದೆ ಪರಾಕ್ರಮಿಯಾಗಿದ್ದ ಹಜ್ಜಾಜ್ ನಿರುತ್ತರನಾದನು.

## ನಿಧನ

ಪುತ್ರನ ಮರಣದ ಕೆಲವಾರು ದಿನಗಳ ಬಳಿಕ ಅಸ್ಮಾ(ರ) ಮಕ್ಕಾದಲ್ಲಿ ನಿಧನ ರಾದರು. ಅಸ್ಮಾರು(ರ) ತೋರ ಹಾಗೂ ನೀಳ ದೇಹಿಯಾಗಿದ್ದರು. ಮರಣದ ವೇಳೆ ಅವರಿಗೆ ಸುಮಾರು ನೂರು ವರ್ಷಗಳಾಗಿದ್ದುವು. ನೂರು ವರ್ಷ ಜೀವಿಸಿದ್ದರೂ ಅವರ ಒಂದು ಹಲ್ಲೂ ಉದುರಿರಲಿಲ್ಲ ಹಾಗೂ ಚಿತ್ತಪ್ರಜ್ಞೆಯೂ ನಶಿಸಿರಲಿಲ್ಲ.

□□□

# ಹರ್ಝುತ್ ಉಮ್ಮು ಅಮ್ಮಾರ(ರ)

ಹರ್ಝುತ್ ಉಮ್ಮು ಅಮ್ಮಾರರು(ರ) ಇಸ್ಲಾಮ್ ಮತ್ತು ಪ್ರವಾದಿವರ್ಯರಿಗಾಗಿ(ಸ) ಪ್ರಾಣವನ್ನು ತೃಣೀಕರಿಸಿ, ತ್ಯಾಗಮಯ ಜೀವನ ನಡೆಸಿದ ವೀರ ಮಹಿಳೆ. ಅವರ ವೀರೇತಿಹಾಸವು ಮುಸ್ಲಿಮ್ ಹೃದಯಗಳನ್ನು ರೋಮಾಂಚನಗೊಳಿಸುತ್ತದೆ. ಸಂದಿಗ್ಧ ಘಟ್ಟಗಳಲ್ಲಿ ಮುಸ್ಲಿಮ್ ಮಹಿಳೆಯರು ಇಸ್ಲಾಮಿಗಾಗಿ ಸೇವೆ ಸಲ್ಲಿಸುವ ರೀತಿಯನ್ನು ಅವರು ತೋರಿಸಿಕೊಟ್ಟಿದ್ದಾರೆ.

ನಸೀಬಃ ಎಂಬುದು ಉಮ್ಮು ಅಮ್ಮಾರರ ನಿಜ ನಾಮಧೇಯ. ಮುದ್ದಿನಿಂದ ಅವರನ್ನು ಉಮ್ಮು ಅಮ್ಮಾರ ಎಂದು ಕರೆಯಲಾಗುತ್ತಿತ್ತು. ಅರಬರು ಹೆಚ್ಚಾಗಿ ಮುದ್ದಿನ ಹೆಸರಿನಿಂದಲೇ ಕರೆಯುತ್ತಿದ್ದರು. ಆದ್ದರಿಂದ ನಸೀಬಃರು ಉಮ್ಮು ಅಮ್ಮಾರ ಎಂಬ ಹೆಸರಿನಿಂದ ಖ್ಯಾತರಾದರು. ಹಿಜ್ರತ್‌ಗಿಂತ ಸುಮಾರು 40 ವರ್ಷಗಳ ಹಿಂದೆ ಉಮ್ಮು ಅಮ್ಮಾರರು ಮದೀನಾದ ಖಝ್ರುತ್ ಗೋತ್ರದಲ್ಲಿ ಹುಟ್ಟಿದರು. ನಜ್ಜಾರ್ ಎಂಬುದು ಅವರ ಕುಲನಾಮ. ಮದೀನದ ಪ್ರಸಿದ್ಧ ಗೋತ್ರಗಳಾಗಿದ್ದ ಔಸ್ ಮತ್ತು ಖಝ್ರುಜ್‌ಗಳು ನೂರು ವರ್ಷಗಳಿಂದ ನಿರಂತರ ಯುದ್ಧ ನಿರತವಾಗಿದ್ದುವು. ಇದರಿಂದಾಗಿ ಮದೀನದಲ್ಲಿ ಶಾಂತಿ ನೆಮ್ಮದಿಯಿರಲಿಲ್ಲ. ಪ್ರವಾದಿ ಮುಹಮ್ಮದ್‌ರ(ಸ) ಆಗಮನದಿಂದ ಉಭಯ ಗೋತ್ರಗಳೂ ಇಸ್ಲಾಮ್ ಸ್ವೀಕರಿಸಿ ಯುದ್ಧ ತೊರೆದು ಪರಸ್ಪರ ಸೌಹಾರ್ದ ಮತ್ತು ಸಹೋದರತೆಯಿಂದ ಬಾಳಲಾರಂಭಿಸಿದುವು. ಮದೀನದಲ್ಲಿ ಪ್ರವಾದಿ ಮುಹಮ್ಮದ್‌ರಿಗೂ(ಸ) ಮುಸ್ಲಿಮರಿಗೂ ಅವರೇ ನೆರವು ನೀಡಿದ್ದರು. ಆದ್ದರಿಂದ ಅವರನ್ನು ಅನ್ಸಾರಿಗಳೆಂದು ಕರೆಯುತ್ತಾರೆ. ಮಕ್ಕಾದಿಂದ ಮದೀನಕ್ಕೆ ಹಿಜ್ರತ್ ಹೋದವರನ್ನು ಮುಹಾಜಿರ್ ಎಂದು ಕರೆಯುತ್ತಾರೆ. ಉಮ್ಮು ಅಮ್ಮಾರ(ರ) ಅನ್ಸಾರಿ ಮಹಿಳೆಯಾಗಿದ್ದರು.

ಉಮ್ಮು ಅಮ್ಮಾರರ(ರ) ಪ್ರಥಮ ವಿವಾಹವು ಚಿಕ್ಕಪ್ಪನ ಮಗ ಝೈದ್ ಬಿನಂ ಆಸ್‌ರೊಡನೆ ನಡೆಯಿತು. ಆ ದಾಂಪತ್ಯ ಸಂಬಂಧದಲ್ಲಿ ಅಬ್ದುಲ್ಲಾ ಮತ್ತು ಹಬೀಬ್ ಎಂಬೀರ್ವರು ಮಕ್ಕಳು ಜನಿಸಿದರು. ಝೈದ್‌ರ ನಿಧನದ ಬಳಿಕ ಉಮ್ಮು ಅಮ್ಮಾರ ರನ್ನು(ರ) ಅರ್ಬುಬುನ್ ಅಮ್ರ್ ಎಂಬೋರ್ವರು ವಿವಾಹವಾದರು. ಅದರಲ್ಲಿ ತಮೀಮ್ ಮತ್ತು ಖೌಲಃ ಎಂಬೀರ್ವರು ಮಕ್ಕಳು ಹುಟ್ಟಿದರು.

## ಇಸ್ಲಾಮ್ ಧರ್ಮ ಸ್ವೀಕಾರ

ಕಲಿಬಾದಲ್ಲಿ ಹಜ್ಜ್ ನಿರ್ವಹಣೆ ಮತ್ತು ಉತ್ಸವದಲ್ಲಿ ಭಾಗವಹಿಸಲಿಕ್ಕಾಗಿ ಅರೇಬಿಯದ ನಾನಾ ಕಡೆಗಳ ಜನರು ಮಕ್ಕಾಕ್ಕೆ ಬರುತ್ತಿದ್ದರು. ಪ್ರವಾದಿಯವರು(ಸ) ಈ ಸಂದರ್ಭವನ್ನು ಉಪಯೋಗಿಸಿ ಅವರಿಗೆ ಕುರ್‌ಆನ್ ಓದಿ ಹೇಳುತ್ತಿದ್ದರು. ಅವರನ್ನು ಇಸ್ಲಾಮಿಗೆ ಆಹ್ವಾನಿಸುತ್ತಿದ್ದರು ಮುಹಮ್ಮದ್(ರ) ಹುಚ್ಚರೆಂದೂ, ಅವರು ಹೇಳುವ ಮಾತನ್ನು ಆಲಿಸಬಾರದೆಂದು ಕುರೈಶರು ದಾರಿಗಳಲ್ಲಿ ನಿಂತು ಪ್ರಚಾರ ಮಾಡುತ್ತಿದ್ದರು. ಆದರೆ ಕುರೈಶರ ಯಾವ ತಂತ್ರವೂ ಫಲಿಸಲಿಲ್ಲ.

ಒಮ್ಮೆ ಮದೀನದ ಆರು ಮಂದಿ ಹಜ್ಜ್‌ಗಾಗಿ ಮಕ್ಕಾಕ್ಕೆ ಬಂದರು. ಪ್ರವಾದಿ(ಸ) ಕುರ್‌ಆನ್ ಓದಿ ಹೇಳಿ, ಅವರನ್ನು ಇಸ್ಲಾಮಿಗೆ ಆಹ್ವಾನಿಸಿದರು. ಇಸ್ಲಾಮ್ ಸತ್ಯವೆಂದೂ ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯೆಂದೂ ಅವರಿಗೆ ಮನವರಿಕೆಯಾಯಿತು. ಆ ಸಜ್ಜನರು ತಕ್ಷಣವೇ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು. ಅವರ ಅಪೇಕ್ಷೆಯಂತೆ ಪ್ರವಾದಿವರ್ಯರು(ರ) ಮದೀನದಲ್ಲಿ ಧರ್ಮ ಪ್ರಚಾರ ನಡೆಸಲಿಕ್ಕಾಗಿ ಮುಸ್‌ಅಬ್ ಬಿನ್ ಉಮೈರ್‌ರವರನ್ನು(ರ) ಅವರೊಂದಿಗೆ ಕಳುಹಿಸಿದರು. ಮುಸ್‌ಅಬ್‌ರ ನೇತೃತ್ವದಲ್ಲಿ ಆ ಪುಟ್ಟ ತಂಡದ ಈ ಅವಿಶ್ರಾಂತ ಪ್ರಯತ್ನದಿಂದ ಕೆಲವೇ ಸಮಯದಲ್ಲಿ ಔಸ್ ಮತ್ತು ಖಝ್ರಜ್ ಗೋತ್ರದ ಅನೇಕ ಪ್ರಮುಖ ವ್ಯಕ್ತಿಗಳು ಇಸ್ಲಾಮ್ ಸ್ವೀಕರಿಸಿದರು. ಈ ಸಂದರ್ಭದಲ್ಲಿಯೇ ಉಮ್ಮು ಅಮ್ಮಾರ(ರ) ಮತ್ತು ಅವರ ಕುಟುಂಬವು ಇಸ್ಲಾಮ್ ಸ್ವೀಕರಿಸಿತ್ತು.

## ಅಕಬಾ ಒಪ್ಪಂದ

ಪ್ರವಾದಿಯವರು(ಸ) ಮುಸ್‌ಅಬ್ ಬಿನ್ ಉಮೈರ್‌ರವರನ್ನು(ರ) ಮದೀನಕ್ಕೆ ಕಳುಹಿಸಿದ ಮರುವರ್ಷ ಅಂದರೆ ಪ್ರವಾದಿತ್ವದ 12ನೇ ವರ್ಷ ಮದೀನದ 70 ಮಂದಿ ಮುಸ್ಲಿಮರು ಹಜ್ಜ್‌ಗಾಗಿ ಮಕ್ಕಾಕ್ಕೆ ಬಂದರು. ಹಜ್ಜ್ ಮುಗಿಸಿದ ಮೂರನೆಯ ದಿನ ಅವರು ತಮ್ಮ ಅವಿಶ್ವಾಸಿ ಮಿತ್ರರಿಗೆ ತಿಳಿಯದಂತೆ ಅಕಬಾ ಕಣಿವೆಯಲ್ಲಿ ಪ್ರವಾದಿ ಯವರನ್ನು(ರ) ರಹಸ್ಯವಾಗಿ ಭೇಟಿಯಾದರು. ಮಕ್ಕಾದಲ್ಲಿ ಪ್ರವಾದಿಯವರಿಗೆ(ಸ) ಇಸ್ಲಾಮಿನ ಪ್ರಚಾರವು ಅಸಾಧ್ಯವಾಗಿರುವುದರಿಂದ ಅವರು ಪ್ರವಾದಿಯವರನ್ನು(ಸ) ಮದೀನಕ್ಕೆ ಆಹ್ವಾನಿಸಿದರು. ನಾವು ನಮ್ಮ ಧನ, ಪ್ರಾಣ, ಹೆಂಡತಿ ಮಕ್ಕಳನ್ನು ಬಲಿ ನೀಡಬೇಕಾಗಿ ಬಂದರೂ ನಿಮ್ಮನ್ನು ಸಂರಕ್ಷಿಸಿ, ನಿಮ್ಮೊಂದಿಗೆ ನಿಲ್ಲುವೆವೆಂದು ಅವರು ಒಪ್ಪಂದ ಮಾಡಿದರು. ಮಕ್ಕಾ ತೊರೆದು ಮದೀನದಲ್ಲಿ ಬಂದು ನೆಲೆಸುವುದಾಗಿ ಪ್ರವಾದಿ(ಸ) ಮಾತು ಕೊಟ್ಟರು. ಪ್ರವಾದಿ(ಸ) ಮತ್ತು ಇಸ್ಲಾಮಿನ ಇತಿಹಾಸದಲ್ಲಿ ಅತೀ ಪ್ರಾಮುಖ್ಯವಾದ ಈ

ನಿರ್ಣಾಯಕ ಒಪ್ಪಂದದಲ್ಲಿ ಈರ್ವರು ಮಹಿಳೆಯರೂ ಪಾಲ್ಗೊಂಡಿದ್ದರು. ಹ. ಉಮ್ಮು ಅಮ್ಮಾರ(ರ) ಮತ್ತು ಉಮ್ಮು ಮನೀಉ(ರ) ಆ ಭಾಗ್ಯಶಾಲಿನಿಗಳಾಗಿದ್ದರು.

## ಉಹುದ್ ಯುದ್ಧದಲ್ಲಿ

ಉಹುದ್ ಯುದ್ಧದಲ್ಲಿ ಹ.ಉಮ್ಮು ಅಮ್ಮಾರರು(ರ) ತಮ್ಮ ಶೌರ್ಯ ಪ್ರದರ್ಶಿಸಿದ್ದಾರೆ. ಅವರು ಯುದ್ಧರಂಗದಲ್ಲಿ ಜೀವನ ಹಂಗು ತೊರೆದು ಪ್ರವಾದಿಯೊಂದಿಗೆ(ಸ) ಅಚಲರಾಗಿ ನಿಂತು ವೈರಿಗಳ ಆಕ್ರಮಣದಿಂದ ಅವರನ್ನು ರಕ್ಷಿಸಿದರು. ಪ್ರವಾದಿಯವರ(ಸ) ಚಿಕ್ಕಪ್ಪ ಹಂಝ ಬಿನ್ ಅಬ್ದುಲ್ ಮುತ್ತಲಿಬ್‌ರೂ ಸೇರಿದಂತೆ ಅನೇಕ ಸಹಾಬಿವರ್ಯರು ಈ ಯುದ್ಧದಲ್ಲಿ ಹುತಾತ್ಮರಾಗಿದ್ದಾರೆ.

ಯುದ್ಧದಲ್ಲಿ ಮುಸ್ಲಿಮರು ಆರಂಭದಲ್ಲಿ ಗೆದ್ದರೂ ಕೆಲವರು ಪ್ರವಾದಿವರ್ಯರ(ಸ) ಆಜ್ಞೆಯನ್ನು ಉಲ್ಲಂಘಿಸಿದ್ದರಿಂದಾಗಿ ಅನಂತರ ಸೋಲನುಭವಿಸಬೇಕಾಯಿತು. ಮುಸ್ಲಿಮರು ಅಲಕ್ಷರಾಗಿರುವರೆಂದು ಮನಗಂಡಾಗ, ಓಡಿಹೋಗಿದ್ದ ವೈರಿಗಳು ಮರಳಿ ಬಂದು ಅನಿರೀಕ್ಷಿತ ಧಾಳಿಯೆಸಗಿದರು. ಈ ಅನಿರೀಕ್ಷಿತ ಧಾಳಿಯಿಂದ ಮುಸ್ಲಿಮರು ಚೆಲ್ಲಾಪಿಲ್ಲಿಯಾದರು. ಯುದ್ಧ ನಿರತರಾಗಿದ್ದವರಿಗೆ ನೀರು ತಂದುಕೊಡುವ ಹಾಗೂ ಗಾಯಾಳುಗಳ ಶುಶ್ರೂಷೆ ಮಾಡುತ್ತಿದ್ದ ಉಮ್ಮು ಅಮ್ಮಾರರು(ರ) ಯುದ್ಧದಲ್ಲಿ ಮುಸ್ಲಿಮರು ಸೋತು ವೈರಿಗಳು ಪ್ರವಾದಿಯ(ಸ) ಮೇಲೆ ಮುಗಿಬಿದ್ದಿರುವುದನ್ನು ಕಂಡಾಗ ತಾನೂ ಶಸ್ತ್ರ ಕೈಗೆತ್ತಿಕೊಂಡರು.

ವೈರಿಯು ಪ್ರವಾದಿಯ(ಸ) ಕಡೆಗೆ ಬರುವಾಗ ಉಮ್ಮು ಅಮ್ಮಾರರು(ರ) ಖಡ್ಗದಿಂದ ಆತನ ಕುದುರೆಯ ಕಾಲನ್ನು ಕಡಿದು ಆತನನ್ನು ನೆಲಕ್ಕೆ ಕೆಡಹುತ್ತಿದ್ದರು. ಅಷ್ಟರಲ್ಲಿ ಮಗ ಅಬ್ದುಲ್ಲರು ತಾಯಿಯ ಸಹಾಯಕ್ಕೆ ಬಂದರು. ಆ ಬಳಿಕ ಅವರೀರ್ವರು ಸೇರಿ ಶತ್ರು ಸೈನಿಕನ ಕಥೆ ಮುಗಿಸಿದರು. ವೈರಿಗಳು ಪ್ರವಾದಿವರ್ಯರನ್ನು(ಸ) ಆಕ್ರಮಿಸಲಿಕ್ಕಾಗಿ ಆವೇಶ ದಿಂದ ಮುನ್ನುಗ್ಗುತ್ತಿದ್ದಾರೆ. ಕಲ್ಲೇಟಿನಿಂದ ಪ್ರವಾದಿಯ(ಸ) ಹಲ್ಲು ಮುರಿಯಿತು. ಇಬ್ನು ಖಯ್ಯಿಬ್ ಎಂಬ ವೈರಿ ಸೈನಿಕನ ಖಡ್ಗದೇಟಿನಿಂದ ಪ್ರವಾದಿಯ(ಸ) ಶಿರಸ್ತ್ರಾಣದ ಸರಿಗೆಯು ಅವರ ಹಣೆಯಲ್ಲಿ ಕಂತಿತು. ಇದನ್ನು ನೋಡಿ ಉಮ್ಮು ಅಮ್ಮಾರರಿಗೆ(ರ) ಸಹಿಸಲಾಗಲಿಲ್ಲ. ಅವರು ರೊಚ್ಚಿಗೆದ್ದ ಹುಲಿಯಂತೆ ಆ ವೈರಿಯ ಮೇಲೆ ಹಾರಿ ತನ್ನ ಖಡ್ಗ ದಿಂದ ಪ್ರಬಲವಾಗಿ ಆತನಿಗೆ ಹೊಡೆದರು. ಆದರೆ ವೈರಿಯು ಕವಚ ಧರಿಸಿದ್ದರಿಂದ ಅವನಿಗೆ ಏಟು ತಾಗಲಿಲ್ಲ. ಆತ ಉಮ್ಮು ಅಮ್ಮಾರರತ್ತ(ರ) ತಿರುಗಿ ಅವರನ್ನು ಖಡ್ಗದಿಂದ ಹೊಡೆದನು. ವೈರಿಯ ಖಡ್ಗವು ಉಮ್ಮು ಅಮ್ಮಾರರ(ರ) ತೋಳಿನಲ್ಲಿ ಬಲವಾದ ಗಾಯ ಮಾಡಿತು. ಅವರು ರಕ್ತಸಿಕ್ತರಾಗಿ ನೆಲಕ್ಕುರುಳಿದರು. ಪ್ರವಾದಿ(ಸ) ತಕ್ಷಣವೇ ಬಳಿಯಿದ್ದವರನ್ನು ಕರೆದು ಗಾಯವನ್ನು ಕಟ್ಟಿ ಅವರ ಶುಶ್ರೂಷೆಯ ಏರ್ಪಾಡು ಮಾಡಿದರು.

"ಅಲ್ಲಾಹನ ಸಂದೇಶವಾಹಕರೇ, ಸ್ವರ್ಗದಲ್ಲಿ ನಾನು ನಿಮ್ಮೊಂದಿಗಿರಲಿಕ್ಕಾಗಿ ಪ್ರಾರ್ಥಿಸಿರಿ." ಗಾಯದಿಂದ ನರಳುತ್ತಿದ್ದ ಉಮ್ಮು ಅಮ್ಮಾರರು(ರ) ಪ್ರವಾದಿಯನ್ನು(ಸ) ವಿನಂತಿಸಿದರು. ಪ್ರವಾದಿ(ಸ) ಪ್ರಾರ್ಥಿಸಿದರು. "ಇನ್ನು ಈ ಲೋಕದಲ್ಲಿ ನನಗೆ ಏನೇ ಸಂಭವಿಸಿದರೂ ಚಿಂತಿಲ್ಲ." ಉಮ್ಮು ಅಮ್ಮಾರ(ರ) ಸಂತೋಷದಿಂದ ಹೇಳಿದರು.

ಗಾಯಗೊಂಡರೂ ಉಮ್ಮು ಅಮ್ಮಾರ(ರ) ಸುಮ್ಮನಿರಲಿಲ್ಲ. ಪುತ್ರ ಅಬ್ದುಲ್ಲರಿಗೆ ಗಾಯವಾದಾಗ ಅವರು ಅದನ್ನು ಕಟ್ಟಿ, "ಮಗನೇ ಹೋಗು, ಧರ್ಮದ ವೈರಿಗಳ ವಿರುದ್ಧ ಹೋರಾಡು" ಎಂದು ಹೇಳಿದರು. ಇದನ್ನು ಕೇಳಿದಾಗ ಪ್ರವಾದಿ(ಸ) ಹೇಳಿದರು: "ಉಮ್ಮು ಅಮ್ಮಾರ, ನಿಮ್ಮ ತಾಳ್ಮೆ ಅದ್ಭುತ, ನಿಮ್ಮಿಂದ ಸಾಧ್ಯವಿರುವಂತೆ ಇನ್ನಾರಿಗೂ ಸಾಧ್ಯವಿಲ್ಲ." ಉಹುದ್ ಯುದ್ಧದ ಬಗ್ಗೆ ಪ್ರಸ್ತಾಪಿಸಿದಾಗಲೆಲ್ಲಾ ಪ್ರವಾದಿಯವರು(ಸ) ಉಮ್ಮು ಅಮ್ಮಾರರ(ರ) ಗುಣಗಾನ ಮಾಡುತ್ತಿದ್ದರು. "ಅವರು ನನ್ನ ಎಡಬಲಗಳಲ್ಲಿ ನಿಂತು ಹೋರಾಡುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ." ಎಂದು ಪ್ರವಾದಿ(ಸ) ಹೇಳುತ್ತಿದ್ದರು.

## ಯಮಾಮ ಯುದ್ಧ

ಪ್ರವಾದಿಯ(ಸ) ನಿಧನದ ಬಳಿಕ ಯಮಾಮ ದೇಶದವರು ಮುರ್ತದ್(ಧರ್ಮಭ್ರಷ್ಟ) ಗಳಾದರು. ಅವರ ನಾಯಕ ಮುಸೈಲಿಮ ಸ್ವಯಂ ಪ್ರವಾದಿಯೆಂದು ವಾದಿಸಿದ. ಅನುಯಾಯಿ ಗಳೆಲ್ಲರೂ ಹಾಗೆಂದೇ ನಂಬಿದರು. ನಂಬದವರನ್ನು ಮರ್ದಿಸಲು ಮತ್ತು ಕೊಲ್ಲಲಾ ರಂಭಿಸಿದರು. ಪ್ರವಾದಿಯೆಂದು ವಾದಿಸಿದರೆ ಮುಹಮ್ಮದ್‌ರಂತೆ(ಸ) ತನಗೆ ಲೋಕದಲ್ಲಿ ಹೆಸರು ಹೆಗ್ಗಳಿಕೆಗಳು ಲಭಿಸಿ ಅರಬರ ಮೇಲೆ ಆಧಿಪತ್ಯ ಸ್ಥಾಪಿಸಬಹುದೆಂದು ಆತ ವ್ಯಾಮೋಹಿಸಿದ್ದ.

ಒಮ್ಮೆ ಉಮ್ಮು ಅಮ್ಮಾರರ(ರ) ಪುತ್ರ ಹಬೀಬ್ ಬಿನ್ ಝೈದ್‌ರು ಒಮಾನಿನಿಂದ ಮದೀನಕ್ಕೆ ಮರಳುತ್ತಿದ್ದರು. ದಾರಿಯಲ್ಲಿ ಮುಸೈಲಿಮರ ಜನರು ಅವರನ್ನು ಸೆರೆಹಿಡಿದರು. "ಮುಹಮ್ಮದ್ ಅಲ್ಲಾಹನ ಸಂದೇಶವಾಹಕನೆಂದು ನೀನು ನಂಬುತ್ತೀಯಾ?" ಮುಸೈಲಿಮ ಪ್ರಶ್ನಿಸಿದರು. "ಹೌದು ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರೆಂದು ವಿಶ್ವಾಸವಿರಿಸಿ ದ್ದೇನೆ." ಹಬೀಬ್ ನಿಸ್ಸಂಕೋಚವಾಗಿ ಉತ್ತರಿಸಿದರು. "ಅಲ್ಲ, ಮುಸೈಲಿಮ ಅಲ್ಲಾಹನ ಪ್ರವಾದಿಯೆಂದು ಸಾಕ್ಷ್ಯವಹಿಸಬೇಕು" ಮುಸೈಲಿಮ ಬಲಾತ್ಕರಿಸಿದ, "ನೀನು ಕಳ್ಳ" ಹಬೀಬ್ ಹೇಳಿದರು. ಕೈಕಾಲುಗಳನ್ನು ಒಂದೊಂದಾಗಿ ಕಡಿದು ಹಾಕಿದರೂ ಹಬೀಬ್‌ರು ಮುಸೈಲಿಮ ಪ್ರವಾದಿಯೆಂದು ಒಪ್ಪಲು ನಿರಾಕರಿಸಿದರು. ಕೊನೆಗೆ ಅವರು ಹುತಾತ್ಮರಾದರು.

ಈ ಸುದ್ದಿ ತಿಳಿದ ಉಮ್ಮು ಅಮ್ಮಾರರು(ರ) ತುಂಬಾ ದುಃಖಿತರಾದರು. ಮುಸ್ಲಿಮರು ಮುಸೈಲಿಮರೊಡನೆ ಯುದ್ಧಕ್ಕೆ ತೆರಳುವಾಗ ತಾನು ಪ್ರತೀಕಾರವೆಸಗುವೆ ನೆಂದು ಅವರು ದೃಢ ನಿರ್ಧಾರ ಮಾಡಿದರು.

ಮುಸೈಲಿಮ ತನ್ನ ಕಪಟ ಪ್ರವಾದಿತ್ವವಾದವನ್ನು ತೊರೆದು ಮರಳಲೊಪ್ಪದಿದ್ದರೆ ಆತನೊಡನೆ ಯುದ್ಧ ಮಾಡಲಿಕ್ಕಾಗಿ ಹ. ಅಬೂಬಕರ್‌ರು(ರ) ಖಾಲಿದ್ ಬಿನ್ ವಲೀದ್‌ರ ನಾಯಕತ್ವದಲ್ಲಿ ಒಂದು ಸೇನೆಯನ್ನು ಕಳುಹಿಸಿದರು. ಖಲೀಫರ ಒಪ್ಪಿಗೆ ಪಡೆದು, ಉಮ್ಮು ಅಮ್ಮಾರರೂ(ರ) ಸೇನೆಯೊಂದಿಗೆ ಹೊರಟರು. ಮುಸ್ಲಿಮರ ಸೇನೆಯು ಮುಸೈಲಿಮನ ಸೇನೆಯೊಂದಿಗೆ ಸಂಘರ್ಷಿಸಿತು. ಭೀಕರ ಯುದ್ಧ ನಡೆಯಿತು. ಉಮ್ಮು ಅಮ್ಮಾರರು(ರ) ಪಂಕ್ತಿಗಳನ್ನು ಭೇದಿಸಿ ಮುನ್ನುಗ್ಗಿದರು. ಮುಸೈಲಿಮ ಅವರ ಗುರಿಯಾಗಿದ್ದರು. ಮುಸೈಲಿಮನ ಬಳಿಗೆ ತಲಪುವಾಗ ಅವರಿಗೆ ಅನೇಕ ಗಾಯಗಳಾದುವು. ಅವರು ಗಾಯಗಳನ್ನು ಲೆಕ್ಕಿಸದೆ ಮುಸೈಲಿಮನ ವಧೆಗಾಗಿ ಮುಂದೆ ಧಾವಿಸಿದರು. ಅವರು ಇನ್ನೇನು ತಲಪಿಬಿಟ್ಟರು ಎನ್ನುವಷ್ಟರಲ್ಲಿ ಎರಡು ಖಡ್ಗಗಳು ಒಮ್ಮೆಲೆ ಮುಸೈಲಿಮನ ಮೇಲೆರಗಿದುವು. ಆತ ಆರ್ಭಟಿಸುತ್ತಾ ಕುದುರೆಯಿಂದ ನೆಲಕ್ಕುರುಳಿದ. ಮುಸೈಲಿಮರನ್ನು ಕೆಡಹಿದವರಲ್ಲಿ ಓರ್ವರು ಉಮ್ಮು ಅಮ್ಮಾರರ(ರ) ಪುತ್ರ ಅಬ್ದುಲ್ಲಾರೇ ಆಗಿದ್ದರು. "ಮುಸೈಲಿಮನನ್ನು ನೀನು ವಧಿಸಿದೆಯಾ?" ಉಮ್ಮು ಅಮ್ಮಾರ(ರ) ಭಾವೋದ್ವೇಗದಿಂದ ಪ್ರಶ್ನಿಸಿದರು. "ಒಂದು ಖಡ್ಗ ನನ್ನದು, ಇನ್ನೊಂದು ವಹ್‌ಶಿಯದ್ದು, ಯಾರ ಪೆಟ್ಟಿನಿಂದ ಮುಸೈಲಿಮ ಕೊಲ್ಲಲ್ಪಟ್ಟಿದ್ದೆಂದು ಖಚಿತವಿಲ್ಲ." ಅಬ್ದುಲ್ಲಾ ಹೇಳಿದರು. ಮುಸೈಲಿಮನನ್ನು ಕೆಡಹಿದ ವಹ್‌ಶಿಯು ಉಹುದ್ ಯುದ್ಧದಲ್ಲಿ ಪ್ರವಾದಿಯ(ಸ) ಚಿಕ್ಕಪ್ಪ ಹಂಝ ಬಿನ್ ಅಬ್ದುಲ್ ಮುತ್ತಲಿಬ್‌ರನ್ನು ವಧಿಸಿದ ಪಾಪವನ್ನು ಪರಿಹರಿಸಿಕೊಳ್ಳುತ್ತಿದ್ದರು.

ಉಮ್ಮು ಅಮ್ಮಾರರ(ರ) ಗಾಯಗಳು ತೀವ್ರವಾಗಿದ್ದುವು. ಒಂದು ಕೈ ತುಂಡಾಗಿತ್ತು. ಅವರು ಕುಸಿದು ಬಿದ್ದರು. ಖಾಲಿದ್ ಬಿನ್ ವಲೀದ್‌ರು(ರ) ಅವರ ಶುಶ್ರೂಷೆಯ ಕಡೆಗೆ ವಿಶೇಷ ಗಮನ ಹರಿಸಿದರು. ಅವರ ಸಹನಾ ಶಕ್ತಿ ಮತ್ತು ಮನೋದಾರ್ಢ್ಯವು ಅದ್ಭುತವಾಗಿತ್ತು. ಕೊನೆಗೆ ಅವರು ಗುಣಮುಖರಾದರು.

ಪ್ರವಾದಿ(ಸ) ಮತ್ತು ಖಲೀಫ ಅಬೂಬಕರ್(ರ) ಹಾಗೂ ಉಮರ್‌ರು(ರ) ಉಮ್ಮು ಅಮ್ಮಾರರೊಡನೆ(ರ) ಬಹಳ ಗೌರವದಿಂದ ವರ್ತಿಸುತ್ತಿದ್ದರು. ಅಬೂಬಕರ್ ಸಿದ್ದೀಕ್‌ರು(ರ) ಖಲೀಫರಾಗಿದ್ದ ವೇಳೆ ಅವರು ಹಲವು ಬಾರಿ ಉಮ್ಮು ಅಮ್ಮಾರರ(ರ) ಸಂದರ್ಶನಕ್ಕಾಗಿ ಅವರ ಮನೆಗೆ ಹೋಗಿದ್ದರು.

ಉಮ್ಮು ಅಮ್ಮಾರರ(ರ) ನಿಧನದ ಕುರಿತು ಇತಿಹಾಸಕಾರರು ಯಾವ ವಿವರವನ್ನೂ ಉಲ್ಲೇಖಿಸಿಲ್ಲ. ಯಮಾಮ ಯುದ್ಧದ ಬಳಿಕದ ಅವರ ಜೀವನದ ವೃತ್ತಾಂತವು ನಮಗೆ ಅಜ್ಞಾತವಾಗಿದೆ.

□□□

# ಹಝ್ರತ್ ಖನ್ಸಾ(ರ)

**ಹ.** ಖನ್ಸಾ ಬಿಂತು ಅಮ್ರ್ ಬಿನ್ ಶರೀದ್‌ರಿಗೆ(ರ) ಅರಬ್ ಸಾಹಿತ್ಯ ಲೋಕದಲ್ಲಿ ಅತ್ಯುನ್ನತ ಸ್ಥಾನವಿದೆ. ದುಃಖ ರಸ ಪ್ರಧಾನವಾದ ಕವಿತೆಗಳಿಂದ ಅರಬ್ ಲೋಕವನ್ನು ರೋಮಾಂಚನಗೊಳಿಸಿದ ಆ ಗಾನ ಕೋಗಿಲೆಯ ನಿಜ ನಾಮಧೇಯ ತುಮಾಸಿರ್ ಎಂದಿತ್ತು. ಅಸಮಾನ್ಯವಾದ ಅವರ ಸೌಂದರ್ಯ ಮತ್ತು ಲವಲವಿಕೆಯು ಆ ಮಹಿಳೆಗೆ ಖನ್ಸಾ ಎಂಬ ಬಿರುದನ್ನು ಗಳಿಸಿಕೊಟ್ಟಿತು. ಖನ್ಸಾ ಅಂದರೆ ಜಿಂಕೆ ಎಂದರ್ಥ. ನಜ್ದ್ ಖನ್ಸಾರ ಹುಟ್ಟೂರು. ಖೈಸ್ ಗೋತ್ರದ ಬನೂ ಸಲೀಮ್ ವಂಶದಲ್ಲಿ ಹ. ಖನ್ಸಾ ಜನಿಸಿದರು.

ಖನ್ಸಾ ಎರಡು ಬಾರಿ ವಿವಾಹಿತರಾಗಿದ್ದಾರೆ. ಪ್ರಥಮ ವಿವಾಹವು ರವಾಹ ಬಿನ್ ಅಬ್ದುಲ್ ಅಝೀಝ್‌ರೊಂದಿಗೆ ನಡೆಯಿತು. ಅದರಲ್ಲಿ ಅಬ್ದುಲ್ಲಾ ಎಂಬ ಮಗು ಹುಟ್ಟಿತು. ಪ್ರಥಮ ಪತಿಯ ನಿಧನದ ಬಳಿಕ ಖನ್ಸಾ(ರ) ಪುನಃ ವಿವಾಹಿತರಾದರು. ದ್ವಿತೀಯ ಪತಿಯ ಹೆಸರು ಮಿರ್ದಾಸ್ ಬಿನ್ ಅಬೀ ಅಮೀರ್. ಆ ದಾಂಪತ್ಯ ಸಂಬಂಧದಲ್ಲಿ ಯಝೀದ್ ಮತ್ತು ಮುಆವಿಯರೆಂಬ ಈರ್ವರು ಗಂಡು ಮಕ್ಕಳೂ, ಅಮ್ರ್ ಎಂಬ ಹೆಣ್ಣು ಮಗುವೂ ಜನಿಸಿತು.

ಹ. ಖನ್ಸಾರಿಗೆ ನಾಲ್ವರು ಪುತ್ರರಿದ್ದರೆಂದು ಕೆಲವು ಇತಿಹಾಸಕಾರರು ಉಲ್ಲೇಖಿಸಿದ್ದಾರೆ. ನಾಲ್ಕನೆಯ ಪುತ್ರನ ಹೆಸರು ಅಮ್ರ್ ಎಂದಿದ್ದಿತು. ಒಟ್ಟು ನಾಲ್ವರು ಮಕ್ಕಳೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಒಂದು ಮಗು ಗಂಡೋ ಹೆಣ್ಣೋ ಎಂಬುದಷ್ಟೇ ವ್ಯತ್ಯಾಸ. ಗಂಡಾಗಿದ್ದರೆ ಅಮ್ರ್, ಹೆಣ್ಣಾಗಿದ್ದರೆ ಅಮ್ರಃ ಎಂದು ಹೆಸರು. ಕಾದಿಸಿಯಾ ಯುದ್ಧದಲ್ಲಿ ನಾಲ್ವರು ಪುತ್ರರು ಮರಣ ಹೊಂದಿದರೆಂಬ ಪ್ರಬಲ ದಾಖಲೆಗಳಿವೆ. ಇದರಿಂದಾಗಿ ಅಮ್ರ್‌ರನ್ನು ಅಮ್ರಃ ಎಂದು ಕೆಲವರು ತಪ್ಪು ತಿಳಿದಿರಬಹುದೆಂದು ಊಹಿಸಬಹುದು.

### ಇಸ್ಲಾಮಿಗೆ

ಮಕ್ಕಾದಲ್ಲಿ ಓರ್ವ ಪ್ರವಾದಿ ಆಗತರಾಗಿರುವರೆಂಬ ಸುದ್ದಿ ತಿಳಿದ ಖನ್ಸಾರು(ರ) ಅಲ್ಲಿಗೆ ಹೋಗಿ ಇಸ್ಲಾಮ್ ಸ್ವೀಕರಿಸಲು ಸಿದ್ಧರಾದರು. ಆದರೆ ಗೋತ್ರದವರು ಅದಕ್ಕೆ

ಒಪ್ಪಿಗೆ ನೀಡಲಿಲ್ಲ. ಇಸ್ಲಾಮ್ ಸತ್ಯವೆಂದು ದೃಢವಾಗಿ ನಂಬಿದ್ದ ಖನ್ಸಾರು(ರ) ಹಿಂಜರಿಯಲಿಲ್ಲ. ಅವರು ತನ್ನ ಗೋತ್ರದವರಿಗೆ ಉಪದೇಶ ನೀಡುತ್ತಿದ್ದರು. ಕೊನೆಗೆ ಗೋತ್ರದ ಕೆಲವಾರು ಮಂದಿಯನ್ನು ಅವರು ಒಲಿಸಿಕೊಂಡರು. ಖನ್ಸಾ(ರ) ಅವರೊಂದಿಗೆ ಮದೀನಕ್ಕೆ ತೆರಳಿ ಪ್ರವಾದಿಯ(ಸ) ಮುಂದೆ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು.

## ಕವಯಿತ್ರಿ

ಅರಬರು ಸ್ವಾಭಾವಿಕವಾಗಿ ಕವಿತೆಯಲ್ಲಿ ಆಸಕ್ತಿ ಹೊಂದಿದ್ದರು. ಸ್ವಭಾಷೆಯ ಬಗ್ಗೆ ಅವರಿಗೆ ತುಂಬಾ ಅಭಿಮಾನವಿತ್ತು. ಅವರ ಮಾತುಕತೆಗಳಲ್ಲಿ ಭಾಷಾ ತಪ್ಪು ತೀರಾ ದುರ್ಲಭವಾಗಿತ್ತು. ಭಾಷಾ ತಪ್ಪನ್ನು ಅವರು ತೀವ್ರ ಅಪಮಾನವೆಂದು ಪರಿಗಣಿಸು ತ್ತಿದ್ದರು. ಒಂದು ಗೋತ್ರದಲ್ಲಿ ಓರ್ವ ಕವಿಯಿರುವುದು ಅವರ ಮಟ್ಟಿಗೆ ಹೆಮ್ಮೆಯ ವಿಷಯವಾಗಿತ್ತು. ಯಾರಾದರೊಬ್ಬರು ಕವಿಯೆಂಬ ಮನ್ನಣೆ ಗಳಿಸಿದರೆ, ಅವರ ಗೋತ್ರ ದವರು ಉತ್ಸವಗಳನ್ನು ಆಚರಿಸಿ ಸಂತೋಷ ವ್ಯಕ್ತಪಡಿಸುತ್ತಿದ್ದರು.

ಹರ್ಝುತ್ ಖನ್ಸಾರು(ರ) ಉನ್ನತ ಮಟ್ಟದ ಕವಯಿತ್ರಿಯಾಗಿದ್ದರು. ಅವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕವಿತೆಗಳನ್ನು ರಚಿಸಿದ್ದರು. ಅವರ ಸಾಹಿತ್ಯ ಕೃತಿಗಳಲ್ಲಿ ಹೆಚ್ಚಿನವು ಶೋಕ ಕಾವ್ಯವಾಗಿದ್ದಿತು. ಶೋಕ ಗೀತೆಗಳ ರಚನೆಯಲ್ಲಿ ಅವರಿಗೆ ಸರಿಸಾಟಿ ಯಾದ ಕವಿಗಳು ತೀರಾ ವಿರಳ. ಸ್ತ್ರೀಯರಲ್ಲಿ ಖನ್ಸಾರಿಗೆ(ರ) ಸಾಟಿಯಾದ ಕವಯತ್ರಿಗಳೇ ಇಲ್ಲವೆಂದು ಸಾಹಿತಿಗಳ ಅಭಿಪ್ರಾಯವಾಗಿದೆ. ಪ್ರಸಿದ್ಧ ಕವಿಯಾಗಿದ್ದ ಜರೀರರೊಡನೆ ಮಹಾ ಕವಿ ಯಾರೆಂದು ಓರ್ವರು ಪ್ರಶ್ನಿಸಿದರು. "ಖನ್ಸಾ ಇಲ್ಲದಿರುತ್ತಿದ್ದರೆ ನಾನೇ" ಎಂದು ಅವರು ಉತ್ತರಿಸಿದರು. ಬಶ್ಶಾರ್ ಎಂಬ ಇನ್ನೋರ್ವ ಕವಿ ಹೀಗೆಂದಿದ್ದಾರೆ: "ಸ್ತ್ರೀಯರ ಕವಿತೆಗಳನ್ನು ಪರಿಶೀಲಿಸಿದರೆ ಅದರಲ್ಲಿ ಏನಾದರೂ ಲೋಪದೋಷವಿರುತ್ತದೆ. ಆದರೆ ಖನ್ಸಾರು(ರ) ಇಸ್ಲಾಮ್ ಸ್ವೀಕರಿಸಲಿಕ್ಕಾಗಿ ಮದೀನಕ್ಕೆ ತೆರಳಿದಾಗ ಪ್ರವಾದಿ ಯವರು(ಸ) ಅವರ ಕವಿತೆಗಳನ್ನು ಆಲಿಸಿ ಶ್ಲಾಘಿಸಿದ್ದರು."

ಅಜ್ಞಾನ ಕಾಲದಲ್ಲಿ ಅರಬರು ಮಕ್ಕಾದ ಸಮೀಪ ಉಕಾಝ್ ಎಂಬ ಸ್ಥಳದಲ್ಲಿ ವರ್ಷಂಪ್ರತಿ ಬಹಳ ವಿಜೃಂಭಣೆಯಿಂದ ಉತ್ಸವ ಜರಗಿಸುತ್ತಿದ್ದರು. ಅರಬ್ ಕವಿಗಳೂ ಗೋತ್ರ ಮುಖಂಡರೂ ಅದರಲ್ಲಿ ಪಾಲ್ಗೊಳ್ಳುತ್ತಿದ್ದರು. ಗೋತ್ರಗಳ ಪರಸ್ಪರ ವಿವಾದ ಗಳನ್ನು ತೀರ್ಮಾನಿಸುವ ಹಾಗೂ ಗೋತ್ರ ಮುಖಂಡನನ್ನು ಚುನಾಯಿಸುವ ಕಾರ್ಯವನ್ನೂ ಅಲ್ಲಿಯೇ ನಿರ್ವಹಿಸುತ್ತಿದ್ದರು. ಅದರೊಂದಿಗೆ ಕವಿಗೋಷ್ಠಿಯೂ ಜರಗುತ್ತಿತ್ತು. ಕವಿಗೋಷ್ಠಿ ಗಳಲ್ಲಿ ವಿವಿಧ ಗೋತ್ರಗಳ ಕವಿಗಳು ತಂತಮ್ಮ ಕವಿತೆಗಳನ್ನು ಹಾಡುತ್ತಿದ್ದರು. ಉತ್ತಮ ಕವಿತೆಗಳಿಗೆ ಬಹುಮಾನ ನೀಡಲಾಗುತ್ತಿತ್ತು.

ಉಕಾಝ್ ಉತ್ಸವದಲ್ಲಿ ಇತರ ಕವಿಗಳೊಂದಿಗೆ ಖನ್ಸಾರೂ(ರ) ಪಾಲ್ಗೊಳ್ಳುತ್ತಿದ್ದರು. ಅವರ ಕವಿತೆಗಳಿಗೆ ಅಲ್ಲಿ ಭಾರೀ ಮನ್ನಣೆ ದೊರೆಯುತ್ತಿತ್ತು. ಖನ್ಸಾರು(ರ) ಒಂಟೆಯಲ್ಲಿ ಕುಳಿತು ಉಕಾಝ್ ತಲುಪಿದೊಡನೆಯೇ ಕವಿಗಳೂ ಕಲಾಪ್ರೇಮಿಗಳೂ ಅಲ್ಲಿಗೆ ಬಂದು ಸೇರುತ್ತಿದ್ದರು. ಅವರ ಅಪೇಕ್ಷೆಯಂತೆ ಖನ್ಸಾರು(ರ) ತನ್ನ ಹೊಸ ಕವಿತೆಗಳನ್ನು ಅವರ ಮುಂದೆ ಹಾಡುತ್ತಿದ್ದರು. ಉಕಾಝ್‌ನಲ್ಲಿ ನೆರೆಯುತ್ತಿದ್ದ ಕವಿಗಳ ಪೈಕಿ ಖನ್ಸಾರಿಗೆ ದೊರೆಯುತ್ತಿದ್ದ ಮರ್ಯಾದೆಯನ್ನು ತಿಳಿಯಲು ಈ ಕೆಳಗಿನ ಒಂದು ಉದಾಹರಣೆ ಸಾಕು. ಖನ್ಸಾರು ತಂಗುವ ಗುಡಾರದ ಮುಂದೆ ಒಂದು ಧ್ವಜವನ್ನು ನೆಡುತ್ತಿದ್ದರು. ಅದರಲ್ಲಿ 'ಅರ್ಸಲ್ ಅರಬ್' (ಅರಬರಲ್ಲಿ ಅತೀ ಹೆಚ್ಚು ಶೋಕ ಗೀತೆಗಳನ್ನು ಬರೆದ ಕವಯಿತ್ರಿ) ಎಂದು ಬರೆಯಲಾಗಿತ್ತು.

ನಾಬಿಗ ಎಂಬೋರ್ವ ಕವಿಯು ಉಕಾಝ್ ಉತ್ಸವದಲ್ಲಿ ಭಾಗವಹಿಸುವ ಕವಿಗಳಲ್ಲಿ ಅಗ್ರಗಣ್ಯರಾಗಿದ್ದರು. ಕವಿತೆಗಳ ಕುರಿತು ಅವರೇ ವಿಮರ್ಶೆ ನಡೆಸುತ್ತಿದ್ದರು. ಖನ್ಸಾರ(ರ) ಶೋಕರಸಭರಿತ ಕವಿತೆಗಳನ್ನು ಆಲಿಸಿದಾಗ ನಾಬಿಗರು ಹೇಳಿದರು: "ನೀನು ಸ್ತ್ರೀಯರಲ್ಲಿ ಅತೀ ದೊಡ್ಡ ಕವಯಿತ್ರಿ. ನಿನಗಿಂತ ಮುಂಚೆ ಈ ಕುರುಡ (ಅಲ್‌ಅಸ)ನ ಕವಿತೆಗಳನ್ನು ಆಲಿಸದಿರುತ್ತಿದ್ದರೆ ಉಕಾಝ್‌ನ ಮಹಾ ಕವಯಿತ್ರಿಯೆಂಬ ಬಿರುದನ್ನು ನಾನು ನಿನಗೆ ನೀಡುತ್ತಿದ್ದೆ. ನೀನು ಹಿಂದಿನ ಹಾಗೂ ಇಂದಿನ ಕವಿಗಳಲ್ಲಿ ಅತ್ಯುನ್ನತ ಸ್ಥಾನಕ್ಕೆ ಅರ್ಹಳಾಗಿರುವುದರಲ್ಲಿ ಸಂದೇಹವಿಲ್ಲ.

## ವಿಮರ್ಶಕಿ

ಖನ್ಸಾರು(ರ) ಕವಯಿತ್ರಿಯಾಗಿದ್ದಂತೆಯೇ ಓರ್ವ ಸಾಹಿತ್ಯ ವಿಮರ್ಶಕರೂ ಆಗಿದ್ದರು. ಅತಿರಥ ಮಹಾರಥ ಕವಿತೆಗಳೂ ಅವರ ನಿರೂಪಣೆ ಮತ್ತು ವಿಶ್ಲೇಷಣೆಗಳಿಗೆ ಗುರಿಯಾಗಿವೆ. ಒಮ್ಮೆ ಸುಪ್ರಸಿದ್ಧ ಕವಿ ಹಸ್ಸಾನ್ ಬಿನ್ ಸಾಬಿತ್‌ರ ಮುಂದೆ ಅವರು ಕವಿತೆಯ ಒಂದು ಗೆರೆಯನ್ನು ನಿರೂಪಿಸಿದರು. ಅದರ ಪ್ರತಿಯೊಂದು ಪದ ಪ್ರಯೋಗವನ್ನು ಅವರು ಸರಿಯಾದ ರೀತಿಯಲ್ಲಿ ತೂಗಿ ವಿಮರ್ಶಿಸಿದರು. ಹ.ಹಸ್ಸಾನ್‌ರು(ರ) ಅದನ್ನು ಕೇಳಿ ಮೌನವಾಗಿ ಕುಳಿತರು.

ಖನ್ಸಾರ ಕವಿತೆಗಳು 'ದೀವಾನಿ ಖನ್ಸಾ' ಎಂಬ ಹೆಸರಲ್ಲಿ ಪ್ರಕಾಶನಗೊಂಡಿದೆ. ಅರಬೀ ಸಾಹಿತ್ಯ ವಿದ್ಯಾರ್ಥಿಗಳು ಅದನ್ನು ಇಂದಿಗೂ ಕಲಿಯುತ್ತಿದ್ದಾರೆ. 'ದೀವಾನಿ ಖನ್ಸಾ' ಫ್ರೆಂಚ್ ಮುಂತಾದ ಐರೋಪ್ಯ ಭಾಷೆಗಳಿಗೆ ತರ್ಜುಮೆಯಾಗಿದೆ.

## ಶೋಕ ಕಾವ್ಯ

ಪ್ರಾರಂಭದಲ್ಲಿ ಖನ್ಸಾರು(ರ) ಬಹಳ ವಿರಳವಾಗಿ ಕವಿತೆ ಬರೆಯುತ್ತಿದ್ದರು. ಅದು ಕೇವಲ ಚಿಕ್ಕ ಚಿಕ್ಕ ಕವಿತೆಗಳಿಗೆ ಸೀಮಿತವಾಗಿತ್ತು. ಬನೂ ಅಸದ್ ಗೋತ್ರದವರೊಡನೆ

ನಡೆದ ಯುದ್ಧದಲ್ಲಿ ಖನ್ಸಾರ ಸಹೋದರರಾದ ಮುಆವಿಯಾ ಮತ್ತು ಸಖ್ರ್ ವಧಿಸಲ್ಪಟ್ಟಾಗ ಅವರ ಕೋಮಲ ಹೃದಯವು ಚೂರುಚೂರಾಯಿತು. ಹೃದಯಾಂತರಾಳದಿಂದ ದುಃಖದ ತೊರೆ ಉಕ್ಕಿ ಹರಿಯಿತು. ತರುವಾಯ ಶೋಕಭರಿತವಾದ ಕವಿತೆಗಳ ಮಹಾಪೂರ. ಅವರು ಸಖರ್‌ರನ್ನು ಅತಿಯಾಗಿ ನೆಚ್ಚಿಕೊಂಡಿದ್ದರು. ಸಖರ್‌ರ ಕುರಿತೇ ಅವರು ಹೆಚ್ಚು ಶೋಕ ಗೀತೆಗಳನ್ನು ಬರೆದಿದ್ದಾರೆ. ಅಜ್ಞಾನ ಕಾಲದ ಸಂಪ್ರದಾಯದಂತೆ ಖನ್ಸಾ(ರ) ಬೆಳಿಗ್ಗೆ ಮತ್ತು ಸಂಜೆ ಸಹೋದರನ ಗೋರಿಯ ಬಳಿ ತೆರಳಿ ದುಃಖಭಾರವನ್ನು ಇಳಿಸುತ್ತಿದ್ದರು. ಸಖ್ರ್‌ರ ಅವಿಸ್ಮರಣೀಯ ನೆನಪುಗಳನ್ನು ಜೀವಂತಗೊಳಿಸಿ ಹಾಡುತ್ತಿದ್ದರು.

"ಸೂರ್ಯೋದಯವು ನನ್ನ ಮನದಲ್ಲಿ ಸಖರ್‌ನ ಸ್ಮರಣೆಯನ್ನು ಜಾಗೃತಗೊಳಿಸುತ್ತದೆ. ಪ್ರತಿಯೊಂದು ಸಂಜೆಯೂ ಸಖ್ರ್‌ನನ್ನು ನಾನು ಜ್ಞಾಪಿಸುತ್ತೇನೆ. ತಮ್ಮ ಪ್ರೀತಿಪಾತ್ರರು ವಧಿಸಲ್ಪಟ್ಟುದಕ್ಕಾಗಿ ಕಣ್ಣೀರು ಸುರಿಸುವ ಅಸಂಖ್ಯಾತ ಜನರು ಪರಿಸರದಲ್ಲಿ ಇಲ್ಲದಿರುತ್ತಿದ್ದರೆ ಅತೀವ ದುಃಖ ಭಾರದಿಂದ ನಾನು ನಾಶವಾಗುತ್ತಿದ್ದೆ. ನನ್ನಂತೆಯೇ ದುಃಖ ಅನುಭವಿಸುವ ಅನೇಕ ಮಂದಿ ಇರುವರೆಂಬ ಏಕಭಾವನೆಯೇ ನನಗೆ ಸ್ವಲ್ಪವಾದರೂ ನೆಮ್ಮದಿ ನೀಡಿದೆ.

ಎಲೈ ಸಖರ್! ಇಂದು ನಿನ್ನ ಅಗಲಿಕೆಯು ನನ್ನನ್ನು ದುಃಖಕ್ಕೀಡು ಮಾಡಿದ್ದರೆ, ನಿನ್ನ ಜೀವನ ಕಾಲದಲ್ಲಿ ನೀನು ಸಂತೋಷಗೊಳಿಸಿರುವೆ. ಎದೆಬಡಿದು ರೋಧಿಸುತ್ತಿರುವ ಸ್ತ್ರೀಯರೊಂದಿಗೆ ನಾನು ನಿನಗಾಗಿ ಮನಬಿಚ್ಚಿ ಅಳುತ್ತಿದ್ದೇನೆ. ಎದೆಬಡಿದು ಅಳಲು ನಾನು ಇತರೆಲ್ಲರಿಗಿಂತ ಅರ್ಹಳಾಗಿದ್ದೇನೆ. ನೀನು ಜೀವಿಸಿದ್ದಾಗ ನಿನ್ನ ನಿಮಿತ್ತ ಅನೇಕ ವಿಪತ್ತುಗಳಿಂದ ಪಾರಾಗಲು ನನಗೆ ಸಾಧ್ಯವಾಯಿತು. ಈ ಮಹಾ ವಿಪತ್ತಿನಿಂದ ನನ್ನನ್ನು ರಕ್ಷಿಸುವವರು ಯಾರಿದ್ದಾರೆ? ಯುದ್ಧದಲ್ಲಿ ವಧಿಸಲ್ಪಟ್ಟ ಓರ್ವ ವೀರ ಯೋಧನ ಕುರಿತು ಪ್ರಲಾಪಿಸುವುದು ಅಸಂಗತವಾಗಿರಬಹುದು. ಆದರೆ ನಿನ್ನನ್ನು ಜ್ಞಾಪಿಸಿ ಅಳುವುದರಲ್ಲಿ ಯಾವ ಅಸಾಂಗತ್ಯವೂ ಇಲ್ಲವೆಂದು ನಾನು ಭಾವಿಸುತ್ತೇನೆ." ಹೊಗಳುವ ಇಂತಹ ಅನೇಕ ಕವಿತೆಗಳು ಖನ್ಸಾರ(ರ) ಕವಿತಾ ಸಂಕಲನದಲ್ಲಿವೆ. ಅವರು ಇಸ್ಲಾಮ್ ಸ್ವೀಕರಿಸಿದ ಬಳಿಕವೂ ಸಖರ್ ಮತ್ತು ಮುಆವಿಯಾರನ್ನು ಸ್ಮರಿಸಿ ಹಾಡುತ್ತಿದ್ದರು. ಖನ್ಸಾ(ರ) ಒಮ್ಮೆ ಹೀಗೆಂದಿದ್ದರು: "ಜಾಹಿಲಿಯ್ಯಾ ಕಾಲದಲ್ಲಿ ವೈರಿಗಳೊಡನೆ ಸೇಡು ತೀರಿಸಲಿಕ್ಕಾಗಿ ನಾನು ಅವರ ಬಗ್ಗೆ ಪ್ರಲಾಪಿಸುತ್ತಿದ್ದೆ. ಇಂದು ನರಕವನ್ನು ಜ್ಞಾಪಿಸಿ ಅವರಿಗಾಗಿ ಅಳುತ್ತಿದ್ದೇನೆ."

ಹ. ಖನ್ಸಾರು(ರ) ಸೌಂದರ್ಯವತಿಯೂ ಪತಿವ್ರತೆಯೂ ಕುಲೀನೆಯೂ ಆಗಿದ್ದರು. ಬುದ್ಧಿವಂತಿಕೆ, ಸ್ವಂತಿಕೆ ಮತ್ತು ನಿಸ್ವಾರ್ಥತೆಯು ಅವರ ಸಹಜ ಗುಣವಾಗಿತ್ತು. ದೂರದ ನಜ್ದ್‌ನ ಬೆಟ್ಟದ ತಪ್ಪಲಿನಲ್ಲಿ ಸತ್ಯದ ಸ್ಪಷ್ಟ ಸುಂದರವಾದ ಪ್ರತಿಧ್ವನಿ ಮೊಳಗಿದಾಗಲೇ ಖನ್ಸಾ ಅದನ್ನು ಗುರುತಿಸಿದರು. ಸ್ವಲ್ಪವೂ ಅಂಜದೆ ಆ ಕವಯಿತ್ರಿಯು ಸತ್ಯವನ್ನು

ಅಪ್ಪಿಕೊಳ್ಳಲು ಸನ್ನದ್ಧರಾದರು. ಅರೇಬಿಯಾದ ಅಧ್ಯ ಮಹನೀಯರೆಲ್ಲರೂ ಆ ಸತ್ಯವನ್ನು ವಿರೋಧಿಸುತ್ತಿರುವರೆಂದು ತಿಳಿದರೂ ಖನ್ಸಾ(ರ) ಹಿಂಜರಿಯಲಿಲ್ಲ. ವಿರೋಧ ಮತ್ತು ಮರ್ದನಗಳಿಗೆ ಸವಾಲೊಡ್ಡಿ ಅವರು ಸತ್ಯವನ್ನು ಹಮ್ಮಿಕೊಂಡರು.

## ಸ್ಥೈರ್ಯ

ಹ. ಉಮರ್ ಬಿನ್ ಖತ್ತಾಬ್‌ರ(ರ) ಖಿಲಾಫತ್ ಕಾಲದಲ್ಲಿ ಸುಪ್ರಸಿದ್ಧವಾದ ಖಾದಿಸಿಯ್ಯ ಯುದ್ಧ ನಡೆಯಿತು. ಮುಸ್ಲಿಮರು ಮತ್ತು ಪರ್ಶಿಯನರೊಳಗೆ ನಡೆದ ಈ ಘೋರ ಯುದ್ಧದಲ್ಲಿ ಖನ್ಸಾ(ರ) ತನ್ನ ನಾಲ್ವರು ಪುತ್ರರೊಡನೆ ಪಾಲ್ಗೊಂಡರು. ಯುದ್ಧದ ಮುನ್ನಾ ರಾತ್ರಿ ಖನ್ಸಾರು(ರ) ಪ್ರಿಯ ಮಕ್ಕಳಿಗೆ ಸ್ಫೂರ್ತಿ ತುಂಬುವಂತಹ ಒಂದು ಭಾಷಣ ಮಾಡಿದರು. ಇತಿಹಾಸದ ಪುಟಗಳಲ್ಲಿ ಸ್ವರ್ಣಾಕ್ಷರಗಳಿಂದ ಬರೆಯಲ್ಪಟ್ಟ ಆ ಉಜ್ವಲ ಭಾಷಣವನ್ನು ಹೀಗೆ ಸಂಕ್ಷೇಪಿಸಬಹುದು.

'ನನ್ನ ಪ್ರೀತಿಯ ಮಕ್ಕಳೇ! ನೀವು ಸ್ವಇಚ್ಛೆಯಿಂದ ಯಾವ ಒತ್ತಾಯವೂ ಇಲ್ಲದೆ ಇಸ್ಲಾಮ್ ಸ್ವೀಕರಿಸಿದಿರಿ. ಸ್ವಇಚ್ಛೆಯಿಂದ ಮನೆ ಮತ್ತು ಊರನ್ನು ತೊರೆದು ಹಿಜ್ರತ್ ಮಾಡಿದಿರಿ. ಏಕನಾದ ಅಲ್ಲಾಹನಾಣೆ! ನೀವು ನಿಮ್ಮ ಮಾತೆಯ ಗರ್ಭದಿಂದ ಜನಿಸಿದಂತೆ. ಖಂಡಿತವಾಗಿಯೂ ನೀವು ನಿಮ್ಮ ತಂದೆಯ ನೈಜ ಸಂತಾನಗಳಾಗಿರುವಿರಿ. ನಾನು ನಿಮ್ಮ ತಂದೆಯನ್ನು ವಂಚಿಸಿಲ್ಲ. ನಿಮ್ಮ ಮಾವನಿಗೆ ಅಪಮಾನವೆಸಗಿಲ್ಲ. ನಿಮ್ಮ ಕುಟುಂಬ ಮತ್ತು ವಂಶವು ಕುಲೀನವಾಗಿದೆ. ಜಿಹಾದ್ ಮಾಡುವ ಯೋಧರಿಗೆ ಅಲ್ಲಾಹನು ಮಹಾ ಅನುಗ್ರಹಗಳನ್ನು ಸಜ್ಜುಗೊಳಿಸಿರುವನೆಂದು ನಿಮಗೆ ತಿಳಿದಿದೆ. ಆದ್ದರಿಂದ ಶಾಶ್ವತವಾದ ಪರಲೋಕ ಜೀವನದ ಮುಂದೆ ನಶ್ವರವಾದ ಐಹಿಕ ಜೀವನವು ಕ್ಷುಲ್ಲಕವೆಂದು ನೀವು ಜ್ಞಾಪಿಸಬೇಕು. ಅಲ್ಲಾಹನ ವಾಕ್ಯವನ್ನು ಸ್ಮರಿಸಿರಿ. "ಸತ್ಯವಿಶ್ವಾಸಿಗಳೇ! (ದೇವ ಮಾರ್ಗದಲ್ಲಿ ಅನುಭವಿಸುವ ಸಂಕಷ್ಟಗಳನ್ನು) ತಾಳ್ಮೆಯಿಂದ ಎದುರಿಸಿರಿ. ತಾಳ್ಮೆ ಅವಲಂಬಿಸಲಿಕ್ಕಾಗಿ ಪರಸ್ಪರ ಪ್ರೇರೇಪಿಸಿರಿ. (ದೇವ ಮಾರ್ಗದಲ್ಲಿ) ಸಂಘಟಿಸಿ ಸಮರ ಸನ್ನದ್ಧರಾಗಿ ನಿಲ್ಲಿರಿ. ಜೀವನದಲ್ಲಿ ಜಯ ಗಳಿಸಲಿಕ್ಕಾಗಿ ಭಯ ಭಕ್ತಿಯಿಂದ ಜೀವಿಸಿರಿ."

"ಯುದ್ಧವು ಭುಗಿಲೆದ್ದು ಯುದ್ಧದ ಕಿಡಿಗಳು ಭಯಾನಕವಾಗಿ ಮೇಲೇಳುವಾಗ ನೀವು ಹೇಡಿಗಳಾಗಿ ಹಿಮ್ಮೆಟ್ಟಬೇಡಿರಿ. ರಣರಂಗದಲ್ಲಿ ದೃಢವಾಗಿ ನಿಂತು ವೀರರಂತೆ ಕೊನೆಯ ಕ್ಷಣದ ತನಕ ಹೋರಾಡಿರಿ. ಅಲ್ಲಾಹನಿಂದ ಸಹಾಯ ಮತ್ತು ವಿಜಯವನ್ನು ನಿರೀಕ್ಷಿಸಿರಿ. ಇಹದಲ್ಲಲ್ಲದಿದ್ದರೂ ಪರಲೋಕದಲ್ಲಿ ನೀವು ಖಂಡಿತವಾಗಿಯೂ ವಿಜಯ ಗಳಿಸುವಿರಿ."

ಪ್ರಭಾತ ವೇಳೆ ಯುದ್ಧವು ಪ್ರಾರಂಭವಾದಾಗ ನಾಲ್ವರು ಪುತ್ರರೂ ಸಮರ ಗಾನವನ್ನು ಹಾಡುತ್ತಾ ರಣರಂಗಕ್ಕೆ ಧಾವಿಸಿದರು. ಆ ವೀರ ಮಾತೆಯು ಅವರನ್ನು

ಆಶೀರ್ವದಿಸಿದರು. ಯುದ್ಧವು ತೀಕ್ಷ್ಣವಾಯಿತು. ಧೂಳೀಪಟವು ಕವಿಯಿತು. ಖಡ್ಗ ಮತ್ತು ಬಾಣಗಳ ಸಂಘರ್ಷದಿಂದ ಬೆಂಕಿಯ ಕಿಡಿ ಹಾರಿತು. ವೀರಾವೇಶದಿಂದ ಕಾದಾಡಿದ ನಾಲ್ವರು ಪುತ್ರರು ಒಬ್ಬೊಬ್ಬರಾಗಿ ಧರೆಗೊರಗಿದರು.

ಯುದ್ಧವು ಕೊನೆಗೊಂಡಾಗ ನಿಟ್ಟುಸಿರು ಬಿಡುತ್ತಾ ಖನ್ಸಾ(ರ) ಹೀಗೆಂದರು: "ಅಲ್ಲಾಹನಿಗೆ ಸರ್ವಸ್ತುತಿ. ನನ್ನ ಮುದ್ದು ಮಕ್ಕಳ ಹುತಾತ್ಮತೆಯಿಂದ ಅಲ್ಲಾಹನು ನನ್ನನ್ನು ಗೌರವಿಸಿದ್ದಾನೆ. ನಾಳೆ ಪರಲೋಕದಲ್ಲಿ ಅಲ್ಲಾಹನ ಕರುಣೆಯ ಶೀತಲ ಛಾಯೆ ಯಲ್ಲಿ ನನ್ನ ಮುದ್ದು ಮಕ್ಕಳನ್ನು ಕಾಣುವೆನೆಂದು ನಾನು ಆಶಿಸುತ್ತೇನೆ."

## ಅಜ್ಞಾನದ ಸಂಕೇತ

ಹ. ಖನ್ಸಾರು(ರ) ಜೀವನದ ಬಹುವಂಶವನ್ನು ಜಾಹಿಲಿಯ್ಯತ್(ಅಜ್ಞಾನ)ನಲ್ಲಿಯೇ ಕಳೆದಿದ್ದರು. ಆದ್ದರಿಂದ ಜಾಹಿಲಿಯ್ಯತ್‌ನ ಕೆಲವು ಆಚಾರ ಮತ್ತು ಸಂಕೇತಗಳು ಅವರಲ್ಲಿ ಉಳಿದುಕೊಂಡಿದ್ದುವು. ಅವೆಲ್ಲವನ್ನೂ ಅವರು ಕ್ರಮೇಣ ತೊರೆದರು. ತಪ್ಪೆಂದು ತಿಳಿದ ಬಳಿಕ ಅವರು ಜಾಹಿಲಿಯ್ಯತ್‌ನ ಆಚಾರಗಳನ್ನು ಎಂದೂ ಕೈಗೊಳ್ಳಲಿಲ್ಲ.

ಒಮ್ಮೆ ಖನ್ಸಾರು(ರ) ಆಯಿಶಾರನ್ನು(ರ) ಭೇಟಿಯಾದಾಗ ಅವರು ಜಾಹಿಲಿಯ್ಯಾ ಕಾಲದ ರೂಢಿಯಂತೆ ತಲೆಗೂದಲನ್ನು ದುಃಖಸೂಚಕವಾಗಿ ಒಂದು ವಿಶೇಷ ರೀತಿಯಲ್ಲಿ ಕಟ್ಟಿರುವುದನ್ನು ಆಯಿಶಾ(ರ) ಗಮನಿಸಿದರು. ಇಸ್ಲಾಮಿನಲ್ಲಿ ಸ್ತ್ರೀಯರು ಈ ರೀತಿಯಲ್ಲಿ ಜಡೆಕಟ್ಟುವುದು ನಿಷಿದ್ಧವೆಂದು ಆಯಿಶಾ(ರ) ಹೇಳಿದರು. ಹೀಗೆ ಜಡೆ ಕಟ್ಟುವುದು ನಿಷಿದ್ಧ ವೆಂದು ತಿಳಿದಿದ್ದರೆ ನಾನು ಹಿಂದೆಯೇ ಅದನ್ನು ತೊರೆಯುತ್ತಿದ್ದೆನೆಂದು ಖನ್ಸಾ(ರ) ಹೇಳಿದರು. ತರುವಾಯ ಜಡೆಕಟ್ಟಿದ ಕಾರಣವನ್ನು ವಿವರಿಸುತ್ತಾ ಖನ್ಸಾ(ರ) ಹೀಗೆಂದರು: "ನನ್ನ ಪತಿಯು ಓರ್ವ ಧೂರ್ತರಾಗಿದ್ದರು. ಅವರು ನನ್ನ ಮತ್ತು ಅವರ ಹಣವೆಲ್ಲವನ್ನು ಜೂಜಾಡಿ ಶರಾಬು ಕುಡಿದು ಮುಗಿಸಿದರು. ನನ್ನ ಬಡಸ್ಥಿತಿಯನ್ನು ನೋಡಿ ಸಹೋದರ ಸಖ್‌ರ್‌ನಿಗೆ ಕನಿಕರವಾಯಿತು. ಆತನು ತನ್ನ ಸಂಪತ್ತನ್ನು ಪಾಲು ಮಾಡಿ ಅದರಲ್ಲಿ ಒಂದು ಗಣ್ಯ ಅಂಶವನ್ನು ನನಗೆ ಕೊಟ್ಟನು. ಕೆಲವೇ ಸಮಯದಲ್ಲಿ ನನ್ನ ಪತಿಯು ಅದನ್ನೂ ದುಂದು ವೆಚ್ಚ ಮಾಡಿದರು. ಸಖ್‌ರ್ ಪುನಃ ತನ್ನ ಸಂಪತ್ತಿನ ಅರ್ಧಾಂಶವನ್ನು ನನಗೆ ಕೊಟ್ಟನು. ಇದನ್ನು ಕಂಡ ಸಖ್‌ರ್‌ನ ಪತ್ನಿಯು ಆತನನ್ನು ತರಾಟೆಗೆ ತೆಗೆದುಕೊಂಡಳು. "ಸಂಪತ್ತೆಲ್ಲವನ್ನೂ ಹೀಗೆ ಹಂಚುತ್ತಾ ಇದ್ದರೆ ನಮ್ಮ ಪಾಡೇನಾದೀತು? ಕೊಡುವುದಕ್ಕೂ ಒಂದು ಮಿತಿ ಬೇಡವೇ? ಅದಲ್ಲದೇ ಆಕೆಯ ಪತಿಯು ಓರ್ವ ಧೂರ್ತ." ಪತ್ನಿಯ ಆರೋಪಕ್ಕೆ ನನ್ನ ತಮ್ಮ ಸಖ್‌ರ್ ಹೇಳಿದ: "ಅಲ್ಲಾಹನಾಣೆ! ನಾನು ನನ್ನ ಸಂಪತ್ತನ್ನು ಅವಳಿಗೆ ನೀಡುತ್ತಲಿರುವೆನು. ಅವಳು ಚಾರಿತ್ರ್ಯವಂತೆ ಮತ್ತು ಪತಿವ್ರತೆಯಾಗಿದ್ದಾಳೆ. ಅವಳ

ಅವಮಾನವು ನನ್ನ ಅವಮಾನಕ್ಕೆ ಸಮಾನ. ನಾನು ಮರಣ ಹೊಂದಿದರೆ ಆಕೆ ಎದೆ ಬಡಿದು ಅಳುವಳು. ನನ್ನ ಸ್ಮರಣೆಗಾಗಿ ಶಿರೋಬಂಧನವನ್ನು ತೊಡುವಳು." ನಾನು ತಲೆಗೂದಲು ಕಟ್ಟುವುದಕ್ಕೆ ಅದೇ ಕಾರಣ. ತರುವಾಯ ಖನ್ಸಾ(ರ) ತನ್ನ ಶಿರೋಬಂಧನವನ್ನು ಬಿಚ್ಚಿದರು.

ಕಾದಿಸಿಯ್ಯಾ ಯುದ್ಧದ ಬಳಿಕ ಹ. ಖನ್ಸಾರು(ರ) ಕೆಲವಾರು ವರ್ಷ ಜೀವಿಸಿದ್ದರು. ಹಿಜರಿ 24ನೇ ವರ್ಷದಲ್ಲಿ ಅವರು ನಿಧನರಾದರು. ಹ. ಮುಆವಿಯರ ಆಡಳಿತ ಕಾಲದ ತನಕ ಹ. ಖನ್ಸಾ(ರ) ಜೀವಿಸಿದ್ದರೆಂದು ಕೆಲವು ಇತಿಹಾಸಕಾರರು ಉಲ್ಲೇಖಿಸಿದ್ದಾರೆ.

# ಹ. ಅಸ್ಮಾ ಬಿಂತು ಯಝೀದ್(ರ)

ಪ್ರವಾದಿ(ಸ) ಅವರು ವಾಡಿಕೆಯಂತೆ ಮದೀನದ ಮಸೀದಿಯಲ್ಲಿ ಅನುಯಾಯಿಗಳಿಗೆ ಉಪದೇಶ ನೀಡುತ್ತಲಿದ್ದರು. ಆಗ ಓರ್ವ ಮಹಿಳೆಯು ಅಲ್ಲಿಗೆ ಬಂದರು. ಕುಲೀನತೆ ಮತ್ತು ಸ್ವಂತಿಕೆ ಸ್ಫುರಿಸುವ ಆ ಮುಖಾರವಿಂದವನ್ನು ವಿಶ್ವಾಸ ಮತ್ತು ಭಯಭಕ್ತಿಯು ತೇಜೋಮಯ ಗೊಳಿಸಿತ್ತು. ಆ ಆಗಂತುಕಿ ಪ್ರವಾದಿಯವರೊಡನೆ(ಸ) ಹೀಗೆಂದರು: "ಅಲ್ಲಾಹನ ಪ್ರವಾದಿಯೇ, ಮಹಿಳೆಯರ ಪ್ರತಿನಿಧಿಯಾಗಿ ನಾನು ನಿಮ್ಮ ಬಳಿಗೆ ಬಂದಿದ್ದೇನೆ. ಅಲ್ಲಾಹನು ನಿಮ್ಮನ್ನು ಸ್ತ್ರೀ ಮತ್ತು ಪುರುಷ ವರ್ಗಕ್ಕೆ ಸನ್ಮಾರ್ಗ ತೋರಿಸಲಿಕ್ಕಾಗಿ ನೇಮಿಸಿದ್ದಾನೆ. ನಾವು ನಿಮ್ಮಲ್ಲಿ ವಿಶ್ವಾಸವಿರಿಸಿ ನಿಮ್ಮನ್ನು ಅನುಗಮಿಸುತ್ತಿದ್ದೇವೆ. ಸ್ತ್ರೀಯರಾದ ನಮಗೂ ಪುರುಷರಾದ ನಿಮಗೂ ತುಂಬಾ ವ್ಯತ್ಯಾಸಗಳಿವೆ. ನಮ್ಮ ಲೋಕವು ಮನೆಯ ನಾಲ್ಕು ಗೋಡೆಗಳಿಗೆ ಸೀಮಿತವಾಗಿದೆ. ನಿಮ್ಮ ಸಂತಾನವನ್ನು ಪೋಷಿಸುವುದೇ ನಮ್ಮ ಪ್ರಮುಖ ಕೆಲಸ. ನೀವು ಹಾಗಲ್ಲ. ನಿಮ್ಮ ಲೋಕವು ವಿಶಾಲವಾಗಿದೆ. ನೀವು ಪ್ರತಿನಿತ್ಯ ಸಾಮೂಹಿಕ ನಮಾಝ್ ಮಾಡುತ್ತೀರಿ. ಮಯ್ಯತ್ ನಮಾಝ್ ಮತ್ತು ಮಯ್ಯತ್ ಸಂಸ್ಕಾರದಲ್ಲಿ ಭಾಗವಹಿಸುತ್ತೀರಿ. ನಿರಾತಂಕವಾಗಿ ಕಅಬಾಕ್ಕೆ ಹೋಗಿ ಹಜ್ಜ್ ನಿರ್ವಹಿಸುತ್ತೀರಿ. ಎಲ್ಲಕ್ಕಿಂತ ಹೆಚ್ಚಾಗಿ ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ಮಾಡುತ್ತೀರಿ. ಇವೆಲ್ಲವುಗಳಲ್ಲಿ ನಿಮ್ಮಂತೆ ಭಾಗವಹಿಸಲು ನಮ್ಮಿಂದಾಗುವುದಿಲ್ಲ. ಆದರೆ ನಾವು ನಿಮ್ಮ ಸಂತಾನಗಳನ್ನು ಪರಿಪಾಲಿಸುತ್ತೇವೆ. ನಿಮ್ಮ ಮನೆ ಮತ್ತು ಸೊತ್ತನ್ನು ಸಂರಕ್ಷಿಸುತ್ತೇವೆ. ಆದ್ದರಿಂದ ನಿಮ್ಮ ಪ್ರತಿಫಲದಿಂದ ನಮಗೂ ಪಾಲು ದೊರೆಯುವುದೇ?"

ಇದನ್ನು ಆಲಿಸಿದ ಪ್ರವಾದಿಯವರು(ಸ) ಸಹಾಬಿಗಳ ಮುಖ ನೋಡಿದರು. "ಧರ್ಮದ ಬಗ್ಗೆ ಇಷ್ಟೊಂದು ಕಾಳಜಿಯಿಂದ ಮಾತನಾಡುವ ಸ್ತ್ರೀಯನ್ನು ನೀವು ಕಂಡಿದ್ದೀರಾ?" ಅವರು ಪ್ರಶ್ನಿಸಿದರು. "ಧರ್ಮದ ಕುರಿತು ಓರ್ವ ಸ್ತ್ರೀಯು ತರ್ಕಬದ್ಧವಾಗಿ ಮಾತನಾಡುತ್ತಿರುವುದನ್ನು ನಾವೀಗ ಪ್ರಥಮ ಬಾರಿ ಕೇಳುತ್ತಿದ್ದೇವೆ" ಸಹಾಬಿಗಳು ಉತ್ತರಿಸಿದರು. ತರುವಾಯ ಪ್ರವಾದಿ(ಸ) ಅವರು ಆಗಂತುಕಿಯೊಡನೆ ಹೇಳಿದರು:

"ಮನಃಪೂರ್ವಕವಾಗಿ ಪತಿಗೆ ವಿಧೇಯಳಾಗಿದ್ದು ಪತ್ನಿಯೆಂಬ ಕರ್ತವ್ಯವನ್ನು ನಿರ್ವಹಿಸಿದರೆ ಸ್ತ್ರೀಗೂ ಪುರುಷನಷ್ಟೇ ಪ್ರತಿಫಲ ದೊರೆಯುವುದು."

ಸ್ತ್ರೀಯರ ಈ ನಿವೇದಕ ಸಂಘದ ನಾಯಕಿಯೇ ಹ. ಅಸ್ಮಾ ಬಿಂತು ಯಝೀದ್. ಹಿಜರಿ ಪ್ರಥಮ ಶಕದಲ್ಲಿ ಈ ಘಟನೆ ನಡೆದಿದೆ. ಮದೀನದಲ್ಲಿ ಇಸ್ಲಾಮ್ ಸ್ವೀಕರಿಸಿದ್ದ ಅನೇಕಾರು ಮಹಿಳೆಯರು ಹ. ಅಸ್ಮಾರ(ರ) ನಾಯಕತ್ವದಲ್ಲಿ ಪ್ರವಾದಿಯವರ(ಸ) ಬಳಿಗೆ ಬಂದಿದ್ದರು. ಆ ತಂಡದ ಓರ್ವ ಮಹಿಳೆಯು ಬಂಗಾರದ ಬಳೆ ಮತ್ತು ಉಂಗುರ ಧರಿಸಿರುವುದನ್ನು ಪ್ರವಾದಿ(ಸ) ನೋಡಿದರು. "ಈ ಒಡವೆಗಳಿಗೆ ಝಕಾತ್ ನೀಡಿದ್ದೀರಾ?" ಪ್ರವಾದಿ(ಸ) ವಿಚಾರಿಸಿದರು. ಇಲ್ಲವೆಂಬ ಉತ್ತರ ದೊರೆಯಿತು. ಆಗ ಪ್ರವಾದಿ(ಸ) ಪ್ರಶ್ನಿಸಿದರು: "ಅಲ್ಲಾಹನು ಬೆಂಕಿಯ ಬಳೆ ಮತ್ತು ಉಂಗುರವನ್ನು ತೊಡಿಸುವುದನ್ನು ನೀವು ಮೆಚ್ಚುವಿರಾ?" ಪ್ರವಾದಿಯವರ(ಸ) ಎಚ್ಚರಿಕೆಯನ್ನು ಕೇಳಿ ಅಸ್ಮಾ(ರ) ಬಳೆ ಮತ್ತು ಉಂಗುರಗಳನ್ನು ತೆಗೆಯುವಂತೆ ಆದೇಶಿಸಿದರು. ಆ ಮಹಿಳೆಯು ಅದನ್ನು ಕಳಚಿದರು. ತರುವಾಯ ಅಸ್ಮಾ(ರ) ಹೇಳಿದರು: "ಪತಿಯನ್ನು ಆಕರ್ಷಿಸಲಿಕ್ಕಾಗಿ ನಾವು ಆಭರಣಗಳನ್ನು ಧರಿಸುತ್ತೇವೆ. ಒಡವೆಗಳನ್ನು ಧರಿಸದಿದ್ದರೆ ಪತಿಯರ ದೃಷ್ಟಿಯಲ್ಲಿ ನಾವು ಸುಂದರಿಯಾಗಿ ಕಾಣಿಸುವುದಿಲ್ಲ. ಆಗ ಪ್ರವಾದಿವರ್ಯರು(ಸ) ಹೊಸ ವಿಧಾನವನ್ನು ಹೇಳಿಕೊಟ್ಟರು. ಸೌಂದರ್ಯಕ್ಕೆ ಬೇಕಿದ್ದರೆ ಬೆಳ್ಳಿಯ ಆಭರಣಗಳನ್ನು ಧರಿಸಿರಿ. ಅವುಗಳಿಗೆ ಬಣ್ಣ ಲೇಪಿಸಿದರೆ ಚಿನ್ನದಂತೆಯೇ ಹೊಳೆಯುತ್ತದಲ್ಲವೇ?"

ಹ. ಅಸ್ಮಾ ಬಿಂತು ಯಝೀದ್(ರ) ಧರ್ಮಭಕ್ತೆ ಮತ್ತು ವಿವೇಕಮತಿಯಾಗಿದ್ದರು. ಸುನ್ನತ್‌ಗಳನ್ನು ಕ್ಲಪ್ತವಾಗಿ ನಿಷ್ಠೆಯಿಂದ ನಿರ್ವಹಿಸುತ್ತಿದ್ದರು. ನಡುರಾತ್ರೆ ಲೋಕವು ನಿದ್ರಿಸಿರುವಾಗ ಅಸ್ಮಾರು(ರ) ಎದ್ದು ನಿಂತು ಆಕಾಶದೆಡೆಗೆ ನೋಡಿ ಓದುತ್ತಿದ್ದರು. "ಇನ್ನ ಫೀ ಖಲ್ಕಿಸ್ಸಮಾವಾತಿ ವಲ್ ಅರ್‌ಳಿ ವಕ್ತಿಲಾಫಿಲ್ಲೈಲಿ ವನ್ನಹಾರಿ ಲಆಯಾತಿಲ್ಲಿ ಉಲಿಲ್ ಅಲ್‌ಬಾಬ್" ತರುವಾಯ ತಹಜ್ಜುದ್ ನಮಾಝ್‌ನಲ್ಲಿ ನಿರತರಾಗುತ್ತಿದ್ದರು. ಪ್ರಭಾತದ ತನಕ ನಮಾಝ್, ದಿಕ್ರ್ ಮತ್ತು ದುಆಗಳಲ್ಲಿ ತಲ್ಲೀನರಾಗಿರುತ್ತಿದ್ದರು.

ಅರಬರು ಅತಿಥಿ ಸತ್ಕಾರಕ್ಕೆ ಪ್ರಸಿದ್ಧರಾಗಿದ್ದರೂ ಅಸ್ಮಾ(ರ) ಅವರು ಅದರಲ್ಲಿ ವಿಶೇಷ ಆಸಕ್ತಿ ಹೊಂದಿದ್ದರು. ಅತಿಥಿಗಳ ಸತ್ಕಾರ ಮತ್ತು ಸೇವೆಗಳ ಬಗ್ಗೆ ಪ್ರವಾದಿ ಯವರು(ಸ) ಭಾರೀ ಕಾಳಜಿ ವಹಿಸಿದ್ದರೆಂಬುದು ಅವರಿಗೆ ತಿಳಿದಿತ್ತು. ಇಸ್ಲಾಮಿನಲ್ಲಿ ಅತಿಥಿ ಸತ್ಕಾರದ ಮಹತ್ವವನ್ನು ಅವರು ಜನರಿಗೆ ವಿವರಿಸಿ ಹೇಳುತ್ತಿದ್ದರು. ಪ್ರವಾದಿಯ(ಸ) ಸೇವೆ ಸಲ್ಲಿಸುವ ಯಾವೊಂದು ಅವಕಾಶವನ್ನೂ ಅವರು ನಿರ್ಲಕ್ಷಿಸುತ್ತಿರಲಿಲ್ಲ. ಒಮ್ಮೆ ಪ್ರವಾದಿಯ(ಸ) ಒಂಟೆಯ ಕಡಿವಾಣವನ್ನು ಅಸ್ಮಾ(ರ) ಅವರು ಹಿಡಿದು ನಡೆಯುತ್ತಿದ್ದರು. ಸಾಮಾನ್ಯವಾಗಿ ಪ್ರವಾದಿ(ಸ) ಅವರಿಗೆ ವಹ್ಯ್ ಅವತೀರ್ಣವಾದರೆ ಒಂಟೆಯು ಭಾರದಿಂದ ಮುಗ್ಗರಿಸುತ್ತಿತ್ತು. ಈ ತನಕ ಅಸ್ಮಾ(ರ) ಅವರು ಅದನ್ನು ಕೇಳಿ ತಿಳಿದಿದ್ದರಷ್ಟೆ. ಈಗ ಅದನ್ನು ಅವರು ಕಣ್ಣಾರೆ ಕಂಡರು. "ಭಾರದಿಂದ ಒಂಟೆಯ ಕೈಕಾಲುಗಳು ಮುರಿದು ಹೋಗುವುದೆಂದು ನಾನು ಹೆದರಿದೆ" ಎಂದು ಅಸ್ಮಾ(ರ) ಹೇಳಿದರು.

ಕೆಲವೊಮ್ಮೆ ಉಪದೇಶಗಳನ್ನು ಆಲಿಸಲಿಕ್ಕಾಗಿ ಅಸ್ಮಾ(ರ) ಅವರು ಪ್ರವಾದಿ ವರ್ಯರ(ಸ) ಸಭೆಗಳಲ್ಲಿ ಹಾಜರಾಗುತ್ತಿದ್ದರು. ಒಮ್ಮೆ ಪ್ರವಾದಿವರ್ಯರು(ಸ) ದಜ್ಜಾಲ್‌ನ ಕುರಿತು ಎಚ್ಚರಿಕೆ ನೀಡಿ ಮಾತನಾಡುತ್ತಿದ್ದರು. ಶ್ರೋತೃಗಳು ಹೆದರಿ ಅಳಲಾರಂಭಿಸಿದಾಗ ಪ್ರವಾದಿ(ಸ) ಅವರು ಸಭೆಯಿಂದ ಎದ್ದು ಹೋದರು. ಸ್ವಲ್ಪ ಸಮಯದ ಬಳಿಕ ಮರಳಿ ಬಂದರು. ಆಗ ಅಸ್ಮಾ(ರ) ಅಳುತ್ತಿದ್ದರು. ಯಾಕೆ ಅಳುತ್ತಿರುವಿರೆಂದು ಪ್ರಶ್ನಿಸಿದಾಗ ಅವರು ಗದ್ಗದಿತರಾಗಿ ಹೀಗೆಂದರು: "ಸೇವಕಿಯು ರೊಟ್ಟಿ ತಯಾರಿಸಲಿಕ್ಕಾಗಿ ಗೋಧಿ ಹಿಟ್ಟನ್ನು ನಾದುತ್ತಿರಬಹುದು. ತೀವ್ರ ಹಸಿವಿನಿಂದಾಗಿ ಆಕೆ ಅದನ್ನು ಕಾಯಿಸುವುದಕ್ಕಿಂತ ಮುಂಚಿತವಾಗಿಯೇ ನಾವು ಅದನ್ನು ತಿನ್ನಲು ಕಾತರರಾಗಿರುತ್ತೇವೆ. ಹೀಗಿರುತ್ತಾ ದಜ್ಜಾಲ್‌ನ ಕಾಲದಲ್ಲಿ ತೀವ್ರ ಕ್ಷಾಮ ಹಬ್ಬಿರುವಾಗ ನಾವು ಹೇಗೆ ಸಹಿಸಬಹುದೆಂದು ಜ್ಞಾಪಿಸಿ ಅಳುತ್ತಿದ್ದೇನೆ." ಆಗ ಪ್ರವಾದಿ(ರ) ಹೇಳಿದರು: ಅಂದು ದೇವಸ್ತುತಿ ಮತ್ತು ದೇವ ಪ್ರಕೀರ್ತನೆಯು ನಮ್ಮನ್ನು ಹಸಿವಿನಿಂದ ರಕ್ಷಿಸುವುದು. ಅಂದು ನಾನು ಬದುಕಿದ್ದರೆ ದಜ್ಜಾಲ್‌ನ ಉಪದ್ರವದ ಬಗ್ಗೆ ನೀವು ಹೆದರಬೇಕಾಗಿಲ್ಲ. ನನ್ನ ಕಾಲಾನಂತರವಾಗಿದ್ದರೆ ಅಲ್ಲಾಹನು ಸತ್ಯವಿಶ್ವಾಸಿಗಳೆಲ್ಲರನ್ನು ರಕ್ಷಿಸುವನು."

ಹ. ಆಯಿಶಾರ(ರ) ಪತಿ ಗೃಹಪ್ರವೇಶದ ವೇಳೆ ಅವರನ್ನು ಸಿಂಗರಿಸಿದ ಸ್ತ್ರೀಯರ ಗುಂಪಿನಲ್ಲಿ ಅಸ್ಮಾ ಬಿಂತು ಯಝೀದರೂ ಇದ್ದರು. ಅಸ್ಮಾರು(ರ) ಆಯಿಶಾರನ್ನು(ರ) ಶಯ್ಯಾಗಾರದಲ್ಲಿ ಪ್ರವಾದಿ(ಸ) ಅವರ ಬಳಿ ಕುಳ್ಳಿರಿಸಿದರು. ಓರ್ವರು ಕುಡಿಯಲು ಹಾಲು ತಂದುಕೊಟ್ಟರು. ಪ್ರವಾದಿ(ಸ) ಅವರು ಅದರಿಂದ ಕುಡಿದರು. ಉಳಿದುದನ್ನು ಆಯಿಶಾರತ್ತ(ರ) ಚಾಚಿದರು. ಆಯಿಶಾ(ರ) ನಾಚಿಕೆಯಿಂದ ತಲೆತಗ್ಗಿಸಿ ಕುಳಿತಿದ್ದರು. ನಾಚಿಕೆಯಿಂದ ಹಾಲು ಸ್ವೀಕರಿಸಲೊಪ್ಪಲಿಲ್ಲ. ಅಸ್ಮಾ(ರ) ಅವರು ಒತ್ತಾಯಿಸಿದಾಗ ಆಯಿಶಾ(ರ) ಅದರಿಂದ ಸ್ವಲ್ಪ ಕುಡಿದು ಪ್ರವಾದಿರಿಗೆ(ಸ) ಮರಳಿಸಿದರು. ಪ್ರವಾದಿವರ್ಯರು(ಸ) ಅದನ್ನು ಅಸ್ಮಾರಿಗೆ(ರ) ನೀಡಿದ್ದರು.

ಪ್ರವಾದಿಯ(ಸ) ನಿಧನದ ಬಳಿಕ ಇಸ್ಲಾಮ್ ಮತ್ತು ಮುಸ್ಲಿಮರು ಅನೇಕ ಆಪತ್ತುಗಳನ್ನು ಎದುರಿಸಬೇಕಾಯಿತು. ಪ್ರವಾದಿಯ(ಸ) ಬಳಿಕ ಇಸ್ಲಾಮ್ ಮತ್ತು ಇಸ್ಲಾಮೀ ಜೀವನ ಪದ್ಧತಿಯು ಉಳಿಯಲಾರದೆಂದು ಇಸ್ಲಾಮಿನಲ್ಲಿ ದೃಢವಿಶ್ವಾಸವಿರಿಸಿರದ ಒಂದು ವರ್ಗವು ಭಾವಿಸಿತು. ಕೆಲವರು ಇಸ್ಲಾಮಿನಿಂದ ಹೊರಹೋದರು. ಕೆಲವರು ಝಕಾತ್ ನೀಡಲು ನಿರಾಕರಿಸಿದರು. ಕೆಲವರು ಹೊಸ ಪ್ರವಾದಿತ್ವವಾದದೊಂದಿಗೆ ಪ್ರತ್ಯಕ್ಷರಾದರು. ಇಸ್ಲಾಮಿನ ನೈಜ ಅನುಯಾಯಿಗಳು ಈ ವಿಚ್ಛಿದ್ರಕಾರೀ ಶಕ್ತಿಗಳನ್ನು ಎದುರಿಸಲಿಕ್ಕಾಗಿ ಭಾರೀ ಧೈರ್ಯಸ್ಥೈರ್ಯವನ್ನು ಪ್ರದರ್ಶಿಸಿದರು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ

ಪುರುಷರಂತೆಯೇ ಸ್ತ್ರೀಯರೂ ಮಕ್ಕಳೂ ಇಸ್ಲಾಮಿನ ಸೇವೆಗಾಗಿ ಅದಮ್ಯ ಸ್ಫೂರ್ತಿ ಹೊಂದಿದ್ದರು. ಅವರೆಲ್ಲರೂ ಜಿಹಾದ್‌ಗಾಗಿ ಕಾತರರಾಗಿದ್ದರು. ಇತರರಂತೆಯೇ ಹ. ಅಸ್ಮಾರಲ್ಲಿಯೂ(ರ) ಈ ಅದಮ್ಯ ಆವೇಶ ತುಂಬಿ ತುಳುಕುತ್ತಿತ್ತು. ಇಸ್ಲಾಮಿಗಾಗಿ ಆತ್ಮಾರ್ಪಣೆ ಮಾಡುವ ಸುವರ್ಣಾವಕಾಶ ದೊರೆಯುವಂತಾಗಲೆಂದು ಅವರು ಪ್ರಾರ್ಥಿಸುತ್ತಿದ್ದರು.

ಅದೊಂದು ಸಂಜೆ ಸೂರ್ಯಾಸ್ತಮಾನದ ಕಿರಣಗಳಿಂದ ನಿಸರ್ಗವು ಚಿನ್ನದ ಜರಿಯಂತೆ ಕಂಗೊಳಿಸುತ್ತಿದೆ. ಅತಿದೂರದಲ್ಲಿ ಒಂದು ಧ್ವಜವು ಗಾಳಿಯಲ್ಲಿ ಹಾರಾಡುತ್ತಿರುವುದು ಕಾಣಿಸುತ್ತಿದೆ. ಅದರಲ್ಲಿ ಪವಿತ್ರ ವಾಕ್ಯವನ್ನು ಹೆಣೆಯಲಾಗಿದೆ. ಆ ಧ್ವಜದ ಕೆಳಗೆ ಒಂದು ಸೇನಾಪಡೆಯು ಮುನ್ನಡೆಯುತ್ತಿದೆ. ಅವರು ಇಸ್ಲಾಮಿನ ವೀರ ಮುಜಾಹಿದರು. ಆ ಸೇನೆಯು ಬೆಟ್ಟಗಳ ಏರುತಗ್ಗುಗಳ ಮೂಲಕ ಯರ್ಮೂಕ್‌ನೆಡೆಗೆ ಸಾಗುತ್ತಿದೆ. ಸೇನೆಯ ಮಧ್ಯಭಾಗದಲ್ಲಿ ಕೆಲವು ಒಂಟೆಗಳು ಕರಿವಸ್ತ್ರಗಳಿಂದ ಸುತ್ತಿದ ಡೋಲಿಗಳನ್ನು ಹೊತ್ತುಕೊಂಡಿದೆ. ಅದರಲ್ಲಿ ಜಿಹಾದ್‌ಗಾಗಿ ಹೊರಟ ಸ್ತ್ರೀಯರು ಸಂಚರಿಸುತ್ತಿದ್ದಾರೆ. ಅಸ್ಮಾ ಬಿಂತು ಯಝೀದ್‌ರೂ(ರ) ಆ ಗುಂಪಿನಲ್ಲಿದ್ದಾರೆ.

ಯರ್ಮೂಕ್‌ನ ಯುದ್ಧರಂಗ. ಒಂದೆಡೆ ಮುಸ್ಲಿಮ್ ಸೇನೆಯು ಶಿಬಿರ ಹೂಡಿದೆ. ಇನ್ನೊಂದೆಡೆ ಅವರಿಗೆ ಅಭಿಮುಖವಾಗಿ ಅವರಿಗಿಂತ ಅನೇಕ ಪಟ್ಟು ಅಧಿಕವಿರುವ ರೋಮನ್ ಸೇನೆಯು ಸರ್ವ ಸನ್ನಾಹಗಳಿಂದ ನೆಲೆಯೂರಿದೆ. ರೋಮನರ ಕಡೆಯಿಂದ ಕಹಳೆ ಮತ್ತು ಘಟನಾದ ಮೊಳಗಿದಾಗ ಮುಸ್ಲಿಮರು ತಕ್ಬೀರ್ ಘೋಷಣೆಗಳನ್ನು ಮೊಳಗಿಸುತ್ತಾ ಯುದ್ಧರಂಗಕ್ಕೆ ಧುಮುಕಿದರು. ಸಮುದ್ರದಂತೆ ಹಬ್ಬಿರುವ ರೋಮನ್ ಸೇನೆಯು ಸರ್ವಸಜ್ಜಿತವಾಗಿ ಮುಸ್ಲಿಮರ ಮೇಲೆರಗಿತು. ಮುಸ್ಲಿಮರು ಹಿಂದೂಡಲ್ಪಟ್ಟರು. ಮುನ್ನುಗ್ಗಿದ ರೋಮನ್ ಸೇನೆಯು ಮುಸ್ಲಿಮ್ ಸ್ತ್ರೀಯರ ಬಿಡಾರಗಳ ಬಳಿಗೆ ತಲಪಿತು. ಯುದ್ಧ ಸ್ಥಿತಿಯನ್ನು ವೀಕ್ಷಿಸುತ್ತಿದ್ದ ಅಸ್ಮಾ(ರ) ಅವರು ಸಮಯ ವ್ಯರ್ಥಗೊಳಿಸಲಿಲ್ಲ. ತಕ್ಷಣ ಅವರು ಮುಸ್ಲಿಮ್ ಸ್ತ್ರೀಯರನ್ನು ಸಜ್ಜುಗೊಳಿಸಿದರು. ಒಂದು ಸಣ್ಣ ಭಾಷಣ ಮಾಡಿ ಅವರಲ್ಲಿ ಜಿಹಾದ್‌ನ ಸ್ಫೂರ್ತಿಯನ್ನು ತುಂಬಿದರು. ಧೀರಳಾದ ಅಸ್ಮಾ(ರ) ಅವರು ಕೈಗೆ ಸಿಕ್ಕಿದ ಆಯುಧವನ್ನು ಹಿಡಿದು ವೈರಿಗಳ ಮೇಲೆ ಬಿದ್ದರು. ಹಿಂದಿನಿಂದ ಇತರ ಸ್ತ್ರೀಯರೂ ಅವರನ್ನು ಅನುಗಮಿಸಿದರು. ಪುರುಷರಂತೆಯೇ ವೀರಾವೇಶದಿಂದ ಹೋರಾಡಿದರು. ತಮ್ಮ ಸ್ತ್ರೀಯರು ಯುದ್ಧರಂಗಕ್ಕಿಳಿದು ಹೋರಾಡುತ್ತಿರುವುದನ್ನು ಕಂಡಾಗ, ಹಿಂಜರಿದಿದ್ದ ಮುಸ್ಲಿಮ್ ಸೇನೆಯ ಅಭಿಮಾನ ಕೆರಳಿತು. ಅವರು ಸರ್ವಸಾಮರ್ಥ್ಯಗಳನ್ನು ಬಳಸಿ ವೈರಿಗಳನ್ನು ಆಕ್ರಮಿಸಿದರು. ತರುವಾಯ ಘನಘೋರ ಯುದ್ಧ ನಡೆಯಿತು.

ಸುಮಾರು ಒಂಭತ್ತು ವೈರಿ ಸೈನಿಕರು ಅಸ್ಮಾರ(ರ) ಖಡ್ಗಕ್ಕೆ ಬಲಿಯಾದರು. ಪರಾಜಿತರಾದ ರೋಮನ್ ಸೈನಿಕರು ಸಿಕ್ಕಾಪಟ್ಟೆಯಾಗಿ ಓಡಿದರು. ಕೊನೆಗೆ ವಿಜಯಶ್ರೀಯು ಮುಸ್ಲಿಮರಿಗೆ ಒಲಿಯಿತು. ಈ ಯುದ್ಧದಲ್ಲಿ ಮುಸ್ಲಿಮ್ ಸ್ತ್ರೀಯರು ತೋರಿದ ವೀರ ಪರಾಕ್ರಮವು ಸ್ತ್ರೀ ಲೋಕವನ್ನು ಆವೇಶಭರಿತಗೊಳಿಸುವಂತಹದ್ದಾಗಿದೆ.

ಎತ್ತರದ ದೇಹ, ಗಟ್ಟಿಮುಟ್ಟಾದ ಅಂಗಾಂಗಗಳು, ನೀಳವಾದ ಕರಿಗೂದಲು, ಸೌಂದರ್ಯ ಮತ್ತು ಗಾಂಭೀರ್ಯ ಪುಳಕಿತ ಮುಖ, ಕಣ್ಣುಗಳಲ್ಲಿ ಆತ್ಮವಿಶ್ವಾಸ ಮತ್ತು ಶೌರ್ಯ ತುಂಬಿ ತುಳುಕುತ್ತಿತ್ತು. ಅವರೇ ಅಸ್ಮಾ ಬಿಂತು ಯಝೀದ್(ರ). ಅಸ್ಮಾರ(ರ) ವಿವಾಹ ಅಥವಾ ಮಕ್ಕಳ ಕುರಿತು ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿಲ್ಲ. ಹಾಗೆಯೇ ಆ ವೀರ ಮಹಿಳೆಯ ಜೀವನಾಂತ್ಯದ ಕುರಿತೂ ಇತಿಹಾಸವು ಮೌನವಾಗಿದೆ.

# ಹಝ್ರತ್ ಝೈನಬ್ ಬಿಂತು ಅಲಿ(ರ)

**ಹ.** ಝೈನಬ್ ಬಿಂತು ಅಲೀಯವರು(ರ) ಲೋಕನಾಯಕ ಪ್ರವಾದಿಯವರ(ಸ) ಮೊಮ್ಮಗಳು ಮತ್ತು ಅವರ ಕಣ್ಮಣಿಯಾಗಿದ್ದ ಫಾತಿಮರ(ರ) ಪುತ್ರಿಯಾಗಿದ್ದಾರೆ. ಹ. ಹಸನ್(ರ) ಮತ್ತು ಹ. ಹುಸೈನ್‌ರು(ರ) ಅವರ ಸಹೋದರರು. ಪ್ರವಾದಿಯವರಿಗೆ(ಸ) ಮೊಮ್ಮಕ್ಕಳಲ್ಲಿ ಬಹಳ ಪ್ರೀತಿಯಿದ್ದಿತು. ಅವರ ಶಿಕ್ಷಣ ತರಬೇತಿಗಳಲ್ಲಿ ಸದಾ ಶ್ರದ್ಧಾವಂತ ರಾಗಿದ್ದರು. ಪ್ರವಾದಿಯವರ(ಸ) ಆಶ್ರಯದಲ್ಲಿ ಬೆಳೆದುದರಿಂದ ಎಲ್ಲ ಸದ್ಗುಣಗಳೂ ಅವರಲ್ಲಿ ಮೈಗೂಡಿದ್ದುವು.

ವಿವಾಹ ಪ್ರಾಯವಾದಾಗ ಝೈನಬ್‌ರನ್ನು(ರ) ಹ. ಜಅ್‌ಫರ್‌ರ(ರ) ಪುತ್ರ ಅಬ್ದುಲ್ಲಾರಿಗೆ ವಿವಾಹ ಮಾಡಿಕೊಟ್ಟರು. ಆ ದಾಂಪತ್ಯದ ಸಂಬಂಧದಲ್ಲಿ ಒಂದು ಹೆಣ್ಣು ಮತ್ತು ನಾಲ್ವರು ಗಂಡು ಜನಿಸಿದರು. ಅಲೀ, ಔನ್, ಅಬ್ಬಾಸ್, ಮುಹಮ್ಮದ್ ಮತ್ತು ಉಮ್ಮು ಕುಲ್ಸೂಮ್.

ಮಾತೆಯ ಮರಣ ಮತ್ತು ತಂದೆಯ ವಧೆಯನ್ನು ಬಿಟ್ಟರೆ ಝೈನಬ್‌ರಿಗೆ(ರ) ಕರ್ಬಲವು ಅತಿದಾರುಣ ಘಟನೆಯಾಗಿತ್ತು. ಸಹೋದರ ಹುಸೈನ್‌ರೂ(ರ) ಸೇರಿದಂತೆ ಕುಟುಂಬದ ಹೆಚ್ಚಿನೆಲ್ಲ ಸದಸ್ಯರು ವಧಿಸಲ್ಪಟ್ಟ ಆ ಹೃದಯಭೇದಕ ರಂಗವನ್ನು ಅವರು ಕಣ್ಣಾರೆ ಕಂಡಿದ್ದರು. ಕಪಟಿಗಳು ಮತ್ತು ಸ್ವಾರ್ಥಮೋಹಿಗಳು ಹುಟ್ಟು ಹಾಕಿದ ರಾಜಕೀಯ ಗೊಂದಲ ಮತ್ತು ವಿಚ್ಛಿದ್ರಕಾರೀ ಕೃತ್ಯಗಳಿಂದ ಕಲುಷಿತಗೊಂಡ ಆ ವಾತಾವರಣದಲ್ಲಿ ನೆಮ್ಮದಿಯಿಂದ ಜೀವಿಸಲು ಹ. ಝೈನಬ್‌ರಿಗೆ(ರ) ಸಾಧ್ಯವಾಗಲಿಲ್ಲ. ಆ ಗೊಂದಲಗಳು ತಂದೆ ಮತ್ತು ಸಹೋದರನಿಗೆ ನೇರವಾಗಿ ಸಂಬಂಧಿಸಿದ್ದುವು. ಹೀಗಿರುತ್ತಾ ನೆಮ್ಮದಿ ಯಿಂದ ಜೀವಿಸಲು ಅವರಿಗೆ ಹೇಗೆ ತಾನೇ ಸಾಧ್ಯ? ಕೊನೆಗೆ ತಂದೆ ಮತ್ತು ಸಹೋದರ ವೈರಿಗಳಿಂದ ಹತರಾದರು. ವಿಶ್ವಾಸ ಮತ್ತು ಭಯಭಕ್ತಿಯ ಪ್ರತೀಕವಾಗಿದ್ದ ಆ ಮಹಿಳೆಯು ಎಲ್ಲವನ್ನೂ ತಾಳ್ಮೆ ಮತ್ತು ಸ್ಥೈರ್ಯದಿಂದ ಸಹಿಸಿದರು.

ಮುಆವಿಯರ ಮರಣಾನಂತರ ಅವರ ಪುತ್ರ ಯಝೀದ್ ಖಿಲಾಫತ್ ಅಧಿಕಾರವನ್ನು ವಹಿಸಿಕೊಂಡರು. ಮರಣಕ್ಕಿಂತ ಮುಂಚೆ ಮುಆವಿಯರೇ ಮಗನನ್ನು ಖಲೀಫರಾಗಿ ನೇಮಿಸಿದ್ದರು. ಇಸ್ಲಾಮಿನಲ್ಲಿ ಖಿಲಾಫತ್ ಪರಂಪರಾಗತವಲ್ಲ. ರಾಜನು ಮರಣಗೊಂಡ

ಬಳಿಕ ಆತನ ಪುತ್ರನು ರಾಜನಾಗಬೇಕೆಂಬ ವಂಶಾಳ್ವಿಕೆಯ ಸಂಪ್ರದಾಯಕ್ಕೆ ಇಸ್ಲಾಮಿನಲ್ಲಿ ಮನ್ನಣೆಯಿಲ್ಲ. ಸಮಾಜದಲ್ಲಿ ಅತ್ಯಂತ ತಿಳುವಳಿಕೆ, ಸಾಮರ್ಥ್ಯ ಮತ್ತು ಭಯಭಕ್ತಿಯಿರುವ ವ್ಯಕ್ತಿಯನ್ನು ಇಸ್ಲಾಮಿ ಪದ್ಧತಿಯಂತೆ ಖಲೀಫರಾಗಿ ಆರಿಸಬೇಕು. ಅದು ಯಾರ ಒತ್ತಡ, ಬೆದರಿಕೆಯಿಲ್ಲದೆ ಜನರು ಸ್ವಂತ ಅಭಿಪ್ರಾಯದಂತೆಯೇ ಚುನಾಯಿಸಬೇಕು. ಈ ಹಿನ್ನೆಲೆಯಿಂದ ಅವಲೋಕಿಸಿದಾಗ ಯಝೀದ್‌ರ ಆಯ್ಕೆಯು ಧರ್ಮಬದ್ಧವಾಗಿರಲಿಲ್ಲ. ಆದ್ದರಿಂದ ಯಝೀದ್‌ರನ್ನು ಖಲೀಫರಾಗಿ ಚುನಾಯಿಸಿದುದನ್ನು ಹಿರಿಯ ಹಾಗೂ ಜ್ಞಾನವಂತ ಸಹಾಬಿಗಳು ಮೆಚ್ಚಲಿಲ್ಲ. ಆದರೆ ದೇಶದಲ್ಲಿ ಗೊಂದಲ ಮತ್ತು ರಕ್ತಪಾತ ವುಂಟಾಗದಿರಲೆಂದು ಅವರು ಬಹಿರಂಗವಾಗಿ ಅದನ್ನು ವಿರೋಧಿಸಲಿಲ್ಲ.

ಆದರೆ ಹ. ಹುಸೈನ್‌ರಿಗೆ(ರ) ಅದನ್ನು ನೋಡಿ ಸುಮ್ಮನಿರಲಾಗಲಿಲ್ಲ. ಪ್ರವಾದಿತ್ವದ ಬಳಿಕ ಇಸ್ಲಾಮಿನಲ್ಲಿ ಅತಿ ಪ್ರಾಮುಖ್ಯವಾಗಿರುವ ಖಿಲಾಫತ್ ಸ್ಥಾನವನ್ನು ಯಝೀದ್‌ರಂತೆ ಸ್ವೇಚ್ಛಾಧಿಪತ್ಯದ ರೂಪದಲ್ಲಿ ಗಳಿಸಿ, ಇಸ್ಲಾಮಿ ರಾಷ್ಟ್ರವನ್ನು ಆಳುವುದನ್ನು ವಿರೋಧಿಸುವುದು ತನ್ನ ಅನಿವಾರ್ಯ ಕರ್ತವ್ಯವೆಂದು ಅವರು ಭಾವಿಸಿದರು. ಕೂಫದವರು ಹ. ಹುಸೈನ್‌ರನ್ನು ಬೆಂಬಲಿಸಿ, ಅವರಿಗೆ ತಮ್ಮ ಸಹಾಯ ವಾಗ್ದಾನ ನೀಡಿದರು. ಆದರೆ ಅವರು ವಾಗ್ದಾನ ಪಾಲಿಸಲಿಲ್ಲ. ಆ ವಂಚಕ ಜನರು ನೆರವಿನ ಅಗತ್ಯವಿರುವ ಹಂತದಲ್ಲಿ ಅವರ ಕೈ ಬಿಟ್ಟರು. ಹ. ಹುಸೈನ್ ಮತ್ತು ಅನುಯಾಯಿಗಳು ಕರ್ಬಲಾ ಎಂಬ ಸ್ಥಳದಲ್ಲಿ ಯಝೀದ್‌ನ ಗವರ್ನರರಾಗಿದ್ದ ಅಬ್ದುಲ್ಲಾ ಬಿನ್ ಝಿಯಾದ್‌ರ ಸೇನೆಯ ಆಕ್ರಮಣಕ್ಕೆ ಬಲಿಯಾದರು. ಹುಸೈನ್‌ರ(ರ) ತಂಡದಲ್ಲಿ ಸ್ತ್ರೀಯರೂ ಮಕ್ಕಳೂ ಇದ್ದರು. ಇಬ್ನು ಝಿಯಾದ್‌ರ ಸೈನಿಕರು ಅವರನ್ನೂ ಆಕ್ರಮಿಸಿದರು. ಅವರು ಹುಸೈನ್(ರ) ಮತ್ತು ಅನುಯಾಯಿಗಳೊಡನೆ ಕ್ರೂರವಾಗಿ ವರ್ತಿಸಿದರು. ಅವರು ಹುಸೈನ್‌ರನ್ನು(ರ) ವಧಿಸಿದ ಬಳಿಕ ಅವರ ಶಿರವನ್ನು ಯಝೀದ್‌ನಿಗೆ ಕೊಟ್ಟು ಕಳುಹಿಸಿದರು. ಯುದ್ಧದಲ್ಲಿ ಬದುಕುಳಿದ ಸ್ತ್ರೀಯರನ್ನೂ ಮಕ್ಕಳನ್ನೂ ಬಂಧಿಸಿದರು. ಅದರಲ್ಲಿ ಹ. ಝೈನಬ್‌ರೂ(ರ) ಇದ್ದರು.

ಹ. ಹುಸೈನ್‌ರಿಗೆ(ರ) ಸಂಭವಿಸಿದ ಈ ದುರಂತದಿಂದ ಕೂಫದ ಸ್ತ್ರೀಯರಿಗೆ ಭಾರೀ ದುಃಖವಾಯಿತು. ಅವರು ಗೋಳೋ ಎಂದು ರೋದಿಸಲಾರಂಭಿಸಿದರು. ಆಗ ಹ. ಝೈನಬ್‌ರು(ರ) ಕೂಫದವರನ್ನು ತೀವ್ರವಾಗಿ ಖಂಡಿಸುತ್ತಾ ಹೀಗೆಂದರು:

"ಎಲೈ ಕೂಫದವರೇ! ನೀವು ಹುಸೈನ್‌ರಿಗೆ ನೆರವಾಗುವವೆಂದು ವಾಗ್ದಾನ ನೀಡಿದಿರಿ. ನಿಮ್ಮ ಆಮಂತ್ರಣದಂತೆ ಹುಸೈನ್ ಇತ್ತ ಬಂದರು. ಆದರೆ ನೀವು ಮಾತು ಪಾಲಿಸಲಿಲ್ಲ. ನೀವು ಕ್ರೂರ ವಂಚನೆ ತೋರಿದಿರಿ. ಈಗ ನೀವು ಕಣ್ಣೀರು ಸುರಿಸುತ್ತಿದ್ದೀರಿ. ನಿಮ್ಮ ಕಣ್ಣೀರು ಎಂದೆಂದಿಗೂ ಆರದಿರಲಿ. ನೀವು ಬೆಳಗ್ಗಿನಿಂದ ಕಷ್ಟಪಟ್ಟು ಹೆಣೆದ ವಸ್ತ್ರವನ್ನು ಸಂಜೆಯ ವೇಳೆ ಬಿಚ್ಚಿ, ಹಾಳುಗೆಡಹುವ ಸ್ತ್ರೀಯರಂತಿರುವಿರಿ. ನೀವು ಅಧಿಕ ಘರ್ಜಿಸಿ ಸ್ವಲ್ಪ

ಸುರಿಸುವ ಮೋಡದಂತಿದ್ದೀರಿ. ನೀವು ಹೇಡಿಗಳು ಮತ್ತು ದುರ್ಬಲರು. ನಿಮ್ಮ ಹೃದಯದಲ್ಲಿ ಅಸೂಯೆ ಮತ್ತು ಹಗೆ ಹೆಪ್ಪುಗಟ್ಟಿದೆ. ಆಮಿಷದಲ್ಲಿ ಗುಲಾಮ ಮಹಿಳೆಯರೂ ನಿಮ್ಮನ್ನು ಕಂಡು ನಾಚಬಹುದು. ತಿಳಿದಿರಲಿ, ನೀವು ಮಾಡಿದ ಪಾತಕವು ಅಕ್ಷಮ್ಯವಾಗಿದೆ."

"ಎಲೈ ಕೂಫದವರೇ, ನಿಮಗೆ ನಾಶ. ನೀವು ಅವಿವೇಕದಿಂದ ವರ್ತಿಸಿ ಅಲ್ಲಾಹನ ಕೋಪ ಮತ್ತು ಶಿಕ್ಷೆಗೆ ಪಾತ್ರರಾಗಿದ್ದೀರಿ. ಪ್ರವಾದಿಯವರ(ಸ) ಪ್ರಿಯ ಪುತ್ರನನ್ನು ನೀವು ಘಾತುಕರಿಗೆ ಬಲಿ ನೀಡಿರುವಿರೆಂದು ನಿಮಗೆ ತಿಳಿದಿದೆಯೇ? ಪ್ರವಾದಿಯವರ(ಸ) ಪುತ್ರಿಯರನ್ನು ನೀವು ಪರ್ದಾ ರಹಿತವಾಗಿ ಹೊರ ಹಾಕಲಿಲ್ಲವೇ? ನೀವು ಮಾಡಿದ ಪಾಪದಿಂದಾಗಿ ಆಕಾಶವು ಚೂರುಚೂರಾಗಿ, ಭೂಮಿಯು ಬಿರಿದು, ಪರ್ವತಗಳು ಧೂಳೀಪಟವಾಗಬಹುದು."

ಹ. ಝೈನಬ್‌ರ(ರ) ಮಾತುಗಳಿಂದ ಅಲ್ಲಿ ನೆರೆದಿದ್ದವರೆಲ್ಲರೂ ಅತ್ತರು. ವೃದ್ಧರ ಗಡ್ಡದಿಂದ ಕಣ್ಣೀರು ತೊಟ್ಟಿಕ್ಕುತ್ತಿತ್ತು. ತರುವಾಯ ಸೈನಿಕರು ಝೈನಬ್‌ರನ್ನೂ(ರ) ಇತರ ಸ್ತ್ರೀಯರನ್ನೂ ಇಬ್ನು ಝಿಯಾದ್‌ನ ಮುಂದೆ ಹಾಜರುಗೊಳಿಸಿದರು. ಅವರ ವಸ್ತ್ರಗಳು ಕೊಳೆಯಾಗಿ ಮುಖವು ಕಳೆಗುಂದಿತ್ತು. ಅನೇಕ ದಿನಗಳಿಂದ ಅವರಿಗೆ ಸರಿಯಾಗಿ ಆಹಾರ ದೊರೆತಿರಲಿಲ್ಲ. ಸ್ನಾನ ಮಾಡಿರಲಿಲ್ಲ. ಇಬ್ನು ಝಿಯಾದ್‌ನು ಝೈನಬ್‌ರತ್ತ(ರ) ಇಶಾರೆ ಮಾಡಿ 'ಈ ಸ್ತ್ರೀ ಯಾರು?' ಎಂದು ಕೇಳಿದರು. ಪುನಃ ಪುನಃ ಕೇಳಿದರೂ ಝೈನಬ್(ರ) ಉತ್ತರಿಸಲಿಲ್ಲ. ಜೊತೆಗೆ ಇದ್ದ ಓರ್ವ ಸ್ತ್ರೀಯು ಹೇಳಿದರು: "ಇದು ಅಲೀ ಬಿನ್ ಅಬೀತಾಲಿಬ್‌ರ ಪುತ್ರಿ ಝೈನಬ್." ಆಗ ಇಬ್ನು ಝಿಯಾದ್ ತಾತ್ಸಾರದಿಂದ ಹೇಳಿದರು: 'ನಿಮ್ಮನ್ನು ಅಪಮಾನಿಸಿ ನಿಮ್ಮ ಪುರುಷರನ್ನು ವಧಿಸಿದ ಅಲ್ಲಾಹನಿಗೆ ಕೃತಜ್ಞತೆ.' ಝೈನಬ್(ರ) ಉತ್ತರಿಸಿದರು: "ಪ್ರವಾದಿ ಮುಹಮ್ಮದರನ್ನು ಕಳುಹಿಸುವ ಮೂಲಕ ನಮ್ಮನ್ನು ಗೌರವಿಸಿ, ಪುನೀತಗೊಳಿಸಿದ ಅಲ್ಲಾಹನಿಗೆ ಕೃತಜ್ಞತೆ. ಅವಮಾನ ಮತ್ತು ನಿಂದನೆಗಳಾದರೋ ನಿನ್ನನ್ನೇ ಶೀಘ್ರದಲ್ಲಿ ಪೀಡಿಸಲಿರುವುದು." ಇಬ್ನು ಝಿಯಾದ್ ಹೇಳಿದರು: "ನಿಮ್ಮ ಕುಟುಂಬದವರನ್ನು ಅಲ್ಲಾಹ್ ಏನು ಮಾಡಿದನೆಂದು ನೋಡಲಿಲ್ಲವೇ?" ಝೈನಬ್ ಹೇಳಿದರು: "ಅಕ್ರಮ ಮತ್ತು ಅನ್ಯಾಯದ ವಿರುದ್ಧ ಧರ್ಮ ಯುದ್ಧ ಮಾಡಿದ ನನ್ನ ಕುಟುಂಬದವರನ್ನು ಅಲ್ಲಾಹನು ಹುತಾತ್ಮಗೊಳಿಸಿದನು."

ಖೈದಿಗಳಲ್ಲಿ ಹುಸೈನ್‌ರ(ರ) ಪುತ್ರ ಝೈನುಲ್ ಆಬಿದೀನ್‌ರೂ ಇದ್ದರು. ಇಬ್ನು ಝಿಯಾದ್ ಅವರನ್ನು ವಧಿಸಲು ತನ್ನ ಸೈನಿಕರಿಗೆ ಆಜ್ಞಾಪಿಸಿದನು. ನನ್ನನ್ನು ವಧಿಸದೆ ಝೈನುಲ್ ಆಬಿದೀನ್‌ನನ್ನು ವಧಿಸಲು ಸಾಧ್ಯವಿಲ್ಲವೆಂದು ಝೈನಬ್‌ರು(ರ) ಹೇಳಿದರು. ಇದರಿಂದಾಗಿ ಇಬ್ನು ಝಿಯಾದ್‌ರಿಗೆ ಝೈನುಲ್ ಆಬಿದೀನ್‌ರನ್ನು ವಧಿಸುವ ಆಜ್ಞೆಯನ್ನು ಹಿಂತೆಗೆದುಕೊಳ್ಳಬೇಕಾಯಿತು.

ತರುವಾಯ ಹ. ಝೈನಬ್(ರ) ಮತ್ತಿತರ ಖೈದಿಗಳನ್ನು ಸಿರಿಯಾಕ್ಕೆ ಯಝೀದನ ಬಳಿಗೆ ಒಯ್ಯಲಾಯಿತು. ಹ. ಹುಸೈನ್‌ರ(ರ) ಶಿರವು ಯಝೀದ್‌ನ ಮುಂದಿತ್ತು. ಸ್ತ್ರೀಯರ ದೃಷ್ಟಿಯಿಂದ ಅದನ್ನು ಅಡಗಿಸಲು ಯಝೀದ್ ಪ್ರಯತ್ನಿಸಿದರೂ ಸ್ತ್ರೀಯರು ಅದನ್ನು ನೋಡಿಬಿಟ್ಟರು. ಅವರು ಬೊಬ್ಬಿಟ್ಟು ಅಳಲಾರಂಭಿಸಿದರು. ಯಝೀದ್‌ನ ಮನೆಯಲ್ಲಿ ಸಾಮೂಹಿಕ ರೋದನ ಮುಗಿಲು ಮುಟ್ಟಿತು. ಮುಆವಿಯರ ಪುತ್ರಿಯರೂ ಆ ಆರ್ತನಾದ ದಲ್ಲಿ ಸೇರಿದರು. ಝೈನಬ್(ರ) ಮತ್ತಿತರರನ್ನು ಸಮಾಧಾನ ಪಡಿಸುತ್ತಾ ಯಝೀದ್ ಹೇಳಿದನು: "ಕರ್ಬಲದ ಘಟನೆಯಿಂದ ನಾನು ದುಃಖಿತನಾಗಿದ್ದೇನೆ. ನಿಜವಾಗಿಯೂ ಹಾಗೆ ಸಂಭವಿಸಬೇಕೆಂದು ನಾನು ಬಯಸಿರಲಿಲ್ಲ. ಕೊಳ್ಳೆ ಹೊಡೆಯಲ್ಪಟ್ಟ ನಿಮ್ಮ ಸಂಪತ್ತು ಸಾಮಗ್ರಿಗಳನ್ನು ನಾನು ನಿಮಗೆ ಮರಳಿಸುತ್ತೇನೆ. ಅದಲ್ಲದೇ ನನ್ನ ವತಿಯಿಂದ ದಾನವನ್ನೂ ನೀಡುತ್ತೇನೆ."

ತರುವಾಯ ಯಝೀದ್ ಅವರೆಲ್ಲರನ್ನೂ ಬಿಡುಗಡೆಗೊಳಿಸಿದನು. ಅಕ್ರಮ ಅನ್ಯಾಯಗಳ ವಿರುದ್ಧ ಸ್ವಸಹೋದರನೊಡನೆ ರಂಗಕ್ಕಿಳಿದು ನಾನಾ ರೀತಿಯ ಕಷ್ಟ-ನಷ್ಟಗಳನ್ನು ಅನುಭವಿಸಿದ ಈ ಮಹಿಳಾರತ್ನದ ಬಗ್ಗೆ ಇತಿಹಾಸವು ನಮಗೆ ಬಹಳ ಕಡಿಮೆ ಮಾಹಿತಿಯನ್ನು ನೀಡಿದೆ.

□□□

# ಹರ್ಝ್ರುತ್ ಖೌಲ(ರ)

ಹ. ಖೌಲ(ರ) ಖಝ್ರುಜ್ ಗೋತ್ರದ ಅನ್ಸಾರಿ ಮಹಿಳೆ. ಅವರ ತಂದೆಯ ಹೆಸರು ಸಅಲಬ್ ಬಿನ್ ಅಝ್ರಮ್. ಔಸ್ ಬಿನ್ ಸಾಮಿತ್ ಎಂಬೋರ್ವ ಸಹಾಬಿ ಅವರ ಪತಿ. ಔಸ್ ಬಿನ್ ಸಾಮಿತ್ ಪ್ರಸಿದ್ಧ ಸಹಾಬಿ ಉಬಾದಃ ಬಿನ್ ಸಾಮಿತ್‌ರ ಸಹೋದರರು. ಹ. ಖೌಲರ(ರ) ಜೀವನ ಘಟನಾವಳಿಗಳ ಕುರಿತು ಇತಿಹಾಸಕಾರರಿಗೆ ಹೆಚ್ಚೇನೂ ಸಂಗ್ರಹಿಸ ಲಾಗದಿದ್ದರೂ ಅವರ ಚರಿತ್ರೆಯಲ್ಲಿ ಉಲ್ಲೇಖಿಸಿರುವ ಹಾಗೂ ಕುರ್‌ಆನಿನಲ್ಲಿ ವಿಮರ್ಶಿಸ ಲಾಗಿರುವ ಕುಟುಂಬ ಜೀವನದ ಒಂದು ಘಟನೆಯು ಬಹಳ ಗಮನಾರ್ಹವಾಗಿದೆ.

ಸಾಮಾನ್ಯವಾಗಿ ಮುಪ್ಪಿನ ಕಾಲದಲ್ಲಿ ಜನರು ಕ್ಷುಲ್ಲಕ ಕಾರಣಗಳಿಗಾಗಿ ಕೋಪಿಸುವ, ಕರ್ಕಶವಾಗಿ ವರ್ತಿಸುವ, ಅಪರಾಧಗಳನ್ನು ಇತರರ ಮೇಲೆ ಆರೋಪಿಸುವ ಗುಣವನ್ನು ಹೊಂದಿರುತ್ತಾರೆ. ಇದಕ್ಕೆ ಹೆಚ್ಚಾಗಿ ಪತ್ನಿಯರು ಮತ್ತು ಕುಟುಂಬದ ಇತರ ಸದಸ್ಯರು ಬಲಿಯಾಗುತ್ತಾರೆ. ಕೋಪದ ಭರದಿಂದ ಪತ್ನಿಯೊಡನೆ ಆಡಬಾರದುದನ್ನು ಆಡುತ್ತಾರೆ. ಮಾಡಬಾರದುದನ್ನು ಮಾಡುತ್ತಾರೆ. ಕೆಲವರು ಆತ್ಮನಿಯಂತ್ರಣವನ್ನು ಕಳೆದುಕೊಂಡು ಒಂದೇ ಬಾರಿಗೆ ಸಾವಿರ ತಲಾಕ್ ಹೇಳುತ್ತಾರೆ. ಕೋಪವು ತಣಿದಾಗ ತಮ್ಮ ಅತಿರೇಕ ಗಳಿಗಾಗಿ ಪಶ್ಚಾತ್ತಾಪಪಡುತ್ತಾರೆ. ಆದರೆ ಕೆಲವೊಮ್ಮೆ ಅದರಿಂದ ಭೀಕರ ಪರಿಣಾಮ ಗಳುಂಟಾಗುತ್ತವೆ. ಸಾಮಾನ್ಯವಾಗಿ ಇದೇ ರೀತಿಯ ಪರಿಸ್ಥಿತಿಯು ಹ. ಖೌಲ(ರ) ಮತ್ತು ಹ. ಔಸ್ ಬಿನ್ ಸಾಮಿತ್‌ರ(ರ) ದಾಂಪತ್ಯ ಜೀವನದಲ್ಲಿ ಉದ್ಭವಿಸಿತ್ತು. ಅಲ್ಲಾಹನ ಅನುಗ್ರಹ ಮತ್ತು ಔದಾರ್ಯವಿಲ್ಲದಿರುತ್ತಿದ್ದರೆ ಒಂದು ಕುಟುಂಬವು ಅತ್ಯಂತ ಸುಭದ್ರ ಸ್ನೇಹಮಯವಾಗಿರಬೇಕಾದ ಹಂತದಲ್ಲಿ ಶೋಚನೀಯವಾಗಿ ಒಡೆದು ಅನೇಕ ಮುದ್ದು ಮಕ್ಕಳು ನಿರ್ಗತಿಕ ಮತ್ತು ಅನಾಥರಾಗುತ್ತಿದ್ದರು.

ಹ. ಔಸ್(ರ) ವೃದ್ಧರಾಗಿದ್ದರು. ಮುದಿ ಪ್ರಾಯದ ವಿಶೇಷ ಗುಣಗಳೆಲ್ಲವೂ ಅವರಲ್ಲಿದ್ದುವು. ಒಮ್ಮೆ ಅವರು ಪತ್ನಿ ಖೌಲರೊಡನೆ(ರ) ಕಾರಣಾಂತರದಿಂದ ಜಗಳ ವಾಡಿದರು. ಅವರು ಕೋಪಾವೇಶದಿಂದ ಹೀಗೆಂದರು: "ನೀನು ನನಗೆ ನನ್ನ ಸ್ವಂತ ತಾಯಿಯಂತೆ." ತಾಯಿಯೊಡನೆ ದಾಂಪತ್ಯ ಸಂಬಂಧವು ನಿಷಿದ್ಧವಾಗಿರುವಂತೆ; ನಿನ್ನೊಂದಿಗೆ ದಾಂಪತ್ಯ ಸಂಬಂಧ ನನಗೆ ನಿಷಿದ್ಧವೆಂದು ತಾತ್ಪರ್ಯ. ಜಾಹಿಲಿಯ್ಯ ಕಾಲದಲ್ಲಿ ಇದನ್ನು

ತಲಾಕ್ ಎಂದು ಪರಿಗಣಿಸಲಾಗುತ್ತಿತ್ತು. ಪತಿಯು ಪತ್ನಿಯೊಡನೆ "ನೀನು ನನ್ನ ಮಾತೆಯಂತೆ" ಎಂದು ಹೇಳಿದರೆ ಆ ಮೇಲೆ ಅವರ ದಾಂಪತ್ಯ ಸಂಬಂಧವು ಪರಸ್ಪರ ನಿಷಿದ್ಧವಾಗುವುದು. ಕೋಪದಿಂದ ಹಾಗೆ ಹೇಳಿದ್ದರೂ ಕೋಪವು ತಣಿದ ಬಳಿಕ ಔಸ್(ರ) ತನ್ನ ದುಡುಕಿಗಾಗಿ ದುಃಖಿಸಿದರು. ಸ್ವಲ್ಪ ಸಮಯದ ಬಳಿಕ ಔಸ್(ರ) ಪ್ರೀತಿಯಿಂದ ಖೌಲರನ್ನು(ರ) ಸಮೀಪಿಸಿದರು. ಕೋಪದಿಂದ ಪ್ರಕ್ಷುಬ್ಧವಾದ ಹೃದಯ ಶಾಂತವಾದಾಗ ಅದರಿಂದ ಸ್ಫುರಿಸಿದ ಸ್ನೇಹವು ಅತ್ಯಂತ ಆವೇಶದಾಯಕವಾಗಿತ್ತು. ಆದರೆ ಖೌಲ(ರ) ಅವರ ಇಂಗಿತಕ್ಕೆ ಮಣಿಯಲಿಲ್ಲ. ಅವರು ಸ್ವಲ್ಪ ಸರಿದು ನಿಂತು ಹೀಗೆಂದರು: "ನೀವು ಹೇಳಬಾರದುದನ್ನು ಹೇಳಿದಿರಿ. ಅಲ್ಲಾಹನಾಣೆ! ಈ ಬಗ್ಗೆ ಅಲ್ಲಾಹನ ಮತ್ತು ಆತನ ಪ್ರವಾದಿಯ ತೀರ್ಪನ್ನು ತಿಳಿಯುವುದಕ್ಕಿಂತ ಮುಂಚೆ ಪತಿಯೆಂಬ ನೆಲೆಯಲ್ಲಿ ನನ್ನೊಡನೆ ವರ್ತಿಸಲು ನಾನು ನಿಮಗೆ ಅನುಮತಿಸಲಾರೆ! ಅದು ನಿಷಿದ್ಧವಾಗಿದೆ. ಆದ್ದರಿಂದ ಪ್ರವಾದಿಯ(ಸ) ಬಳಿಗೆ ಹೋಗಿ ಅವರ ಅಭಿಪ್ರಾಯವನ್ನು ಕೇಳಿ ಬನ್ನಿರಿ." ಔಸ್ ಹೇಳಿದರು: "ಈ ಬಗ್ಗೆ ಪ್ರವಾದಿಯ ಬಳಿಗೆ ಹೋಗಲು ನನಗೆ ನಾಚಿಕೆಯಾಗುತ್ತಿದೆ. ಆದ್ದರಿಂದ ನೀನೇ ಪ್ರವಾದಿಯ ಬಳಿಗೆ ಹೋಗಿ ಮಾತಾಡು. ಅಲ್ಲಾಹ್ ನನ್ನೊಡನೆ ಔದಾರ್ಯ ತೋರದಿರಲಾರನು."

ಯೌವನ, ಮಾದಕ ಸೌಂದರ್ಯ ತುಂಬಿ ತುಳುಕುತ್ತಿದ್ದಾಗ ಔಸ್ ನನ್ನನ್ನು ವಿವಾಹವಾದರು. ಆನಂದದಲ್ಲಿ ತೇಲಾಡುತ್ತಿದ್ದ ಆ ದಿನಗಳು. ಅಂದು ನಾನು ಅವರ ಪುಟ್ಟ ರಾಣಿಯಾಗಿದ್ದೆ. ನನ್ನನ್ನು ಬಿಟ್ಟು ಜೀವಿಸುವುದು ಅವರಿಗೆ ಅಸಾಧ್ಯವಾಗಿತ್ತು. ಹೀಗೆ ಆಹ್ಲಾದ ತುಂಬಿ ತುಳುಕುವ ಅನೇಕ ವಸಂತಗಳು ದಾಟಿ ಹೋದುವು. ಇಂದು ನಾನು ತಾರುಣ್ಯ ಮಾಸಿರುವ ವೃದ್ಧೆ. ಆದ್ದರಿಂದ ನಾನಿಂದು ಅವರಿಗೆ ಬೇಡವಾಗಿದ್ದೇನೆ. ಕ್ಷುಲ್ಲಕ ವಿಷಯಗಳಿಗಾಗಿ ಕೋಪಿಸಿ ನನ್ನನ್ನು ತೆಗಳುತ್ತಿದ್ದಾರೆ. ಬೇಡದ ನಾಯಿ ಮುಟ್ಟಿದ್ದೆಲ್ಲವೂ ತಪ್ಪು ಎಂಬಂತಾಗಿದೆ ನನ್ನ ಸ್ಥಿತಿ. ಅವರು ನನ್ನನ್ನು ತೊರೆದರೆ ನನ್ನ ಮತ್ತು ಮಕ್ಕಳ ಗತಿಯೇನಾದೀತು? ಖಂಡಿತವಾಗಿಯೂ ಬೀದಿಪಾಲಾಗಬೇಕಾಗುವುದು. ಅಲ್ಲಾಹನು ಕರುಣಾಳುವಲ್ಲವೇ. ಅಲ್ಲಾಹನು ಅದಕ್ಕೆ ಅವಕಾಶ ನೀಡಲಾರನು. ಅದೇನಿದ್ದರೂ ಪ್ರವಾದಿಯ ಬಳಿ ಹೋಗಿ ಸಂಕಟವನ್ನು ತೋಡಿಕೊಳ್ಳುತ್ತೇನೆ. ನಾಚಿಕೆಯಾಗುತ್ತಿದೆ ನಿಜ. ಆದರೇನು ಮಾಡಲಿ? ನಾಚಿದರೆ ಕೆಲಸವಾದೀತೇ?

ಪತಿಯೊಡನೆ ಹೆಚ್ಚು ವಾದಿಸದೆ ಹ. ಖೌಲ(ರ) ಪ್ರವಾದಿಯ(ಸ) ಬಳಿಗೆ ಹೋದರು. ಪ್ರವಾದಿಯವರು(ಸ) ಆಯಿಶಾರ(ರ) ಮನೆಯಲ್ಲಿದ್ದರು. ಖೌಲ(ರ) ಪ್ರವಾದಿಯವರೊಡನೆ(ಸ) ಹೃದಯಭಾರದಿಂದ ಹೀಗೆಂದರು: "ಅಲ್ಲಾಹನ ಪ್ರವಾದಿಯೇ ಔಸ್ ನನ್ನನ್ನು ವಿವಾಹ ವಾಗುವ ವೇಳೆ ನಾನು ತರುಣಿ ಮತ್ತು ಸುಂದರಿಯಾಗಿದ್ದೆ. ಹಲವು ಮಕ್ಕಳನ್ನು ಹೆತ್ತು, ನನ್ನ ಆರೋಗ್ಯ ಮತ್ತು ಬೆಡಗು ಕುಂದಿದಾಗ ಅವರು ನನ್ನನ್ನು ನಡು ನೀರಿನಲ್ಲಿ

ಕೈಬಿಟ್ಟಿದ್ದಾರೆ. 'ನೀನು ನನ್ನ ತಾಯಿಯಂತೆ' ಎಂದು ಅವರು ಹೇಳಿರುವರು. ಸಿಟ್ಟಿನ ಭರದಲ್ಲಿ ಅವರು ಆಲೋಚಿಸದೆ ಹಾಗೆ ಹೇಳಿ ಬಿಟ್ಟಿದ್ದಾರೆ ಈಗ ಅವರು ಆ ಬಗ್ಗೆ ವಿಷಾದಿಸುತ್ತಿದ್ದಾರೆ. ಈ ವಿಷಯದಲ್ಲಿ ಏನಾದರೂ ಔದಾರ್ಯವಿದೆಯೇ? ಎಂದು ತಿಳಿಯಲಿಕ್ಕಾಗಿ ನಿಮ್ಮ ಬಳಿ ಬಂದಿದ್ದೇನೆ. ಆಗ ಪ್ರವಾದಿ(ಸ) ಹೀಗೆಂದರು: "ಈ ಬಗ್ಗೆ ಅಲ್ಲಾಹನ ಆಜ್ಞೆ ನನಗೆ ದೊರೆತಿಲ್ಲ. ನಿಮ್ಮ ಸತಿ-ಪತಿ ಸಂಬಂಧವು ಸಿಂಧುವಲ್ಲವೆಂದು ನನ್ನ ಭಾವನೆ." "ಅವರು ತಲಾಕ್ ಹೇಳಿಲ್ಲವಲ್ಲಾ" ಖೌಲ(ರ) ಪ್ರಶ್ನಿಸಿದರು. ಅವರು ಪ್ರವಾದಿವರ್ಯರೊಡನೆ(ಸ) ತುಂಬಾ ಹೊತ್ತು ತರ್ಕಿಸಿದರು. ತರುವಾಯ ಎರಡೂ ಕೈಗಳನ್ನು ಮೇಲೆತ್ತಿ ಪ್ರಾರ್ಥಿಸಲಾರಂಭಿಸಿದರು. "ಅಲ್ಲಾಹನೇ, ಪತಿವಿರಹದ ದುಃಖ ಮತ್ತು ಒಂಟಿತನದ ತೀಕ್ಷ್ಣತೆಯಿಂದ ನಾನು ನಿನ್ನೊಡನೆ ಮೊರೆಯಿಡುತ್ತಿದ್ದೇನೆ. ಅಲ್ಲಾಹನೇ ನಾನು ಬಡವೆ. ನನಗೆ ತುಂಬಾ ಮಕ್ಕಳಿದ್ದಾರೆ. ಮಕ್ಕಳನ್ನು ಅವರಿಗೆ ಬಿಟ್ಟುಕೊಟ್ಟರೆ ಅವರು ಹಾಳಾಗುವರು. ನಾನು ವಹಿಸಿಕೊಂಡರೆ ಅವರು ಹಸಿವಿನಿಂದ ಬಳಲುವರು. ನನ್ನ ಮನೋವೇದನೆಯನ್ನು ನಿನ್ನೊಡನೆ ತೋಡಿಕೊಳ್ಳುತ್ತಿದ್ದೇನೆ. ನಿನ್ನ ಪ್ರವಾದಿಯ ನಾಲಗೆಯ ಮೂಲಕ ನಮಗೆ ನೆಮ್ಮದಿ ನೀಡುವ ಆಜ್ಞೆಯನ್ನು ಕೊಡಿಸು."

ಹ. ಆಯಿಶಾ(ರ) ಹೇಳುತ್ತಾರೆ: "ಆ ರಂಗವು ಹೃದಯ ವಿದ್ರಾವಕವಾಗಿತ್ತು. ನನ್ನಂತೆಯೇ ಅಲ್ಲಿ ನೆರೆದಿದ್ದವರೆಲ್ಲರೂ ಬಿಕ್ಕಿ ಬಿಕ್ಕಿ ಅತ್ತರು."

ತಕ್ಷಣವೇ ಪ್ರವಾದಿಯವರಿಗೆ(ಸ) ವಹ್ಯ್ ಅವತೀರ್ಣವಾಗುತ್ತಿರುವ ಲಕ್ಷಣಗಳು ಗೋಚರಿಸಿದುವು. ಆಯಿಶಾರು(ರ) ಖೌಲರನ್ನು(ರ) ಸಮಾಧಾನ ಪಡಿಸಿದರು. "ಅಲ್ಲಾಹನು ನಿಮಗೆ ಸಂತೋಷದಾಯಕ ನಿರ್ಧಾರವನ್ನು ತಿಳಿಸುವನು."

ಉದ್ವೇಗದ ಕ್ಷಣಗಳು. ಮನಸ್ಸಿನಲ್ಲಿ ಆಶೆ ಮತ್ತು ನಿರಾಶೆಗಳು ಪರಸ್ಪರ ಸಂಘರ್ಷಿಸುತ್ತಿವೆ. ಖೌಲರಿಗೆ(ರ) ಉಸಿರುಗಟ್ಟಿದಂತೆ ಭಾಸವಾಯಿತು. ಶಾಶ್ವತವಾಗಿ ಬೇರ್ಪಡುವ ಆಜ್ಞೆಯಾಗಿರಬಹುದೇ? ಅಥವಾ ಪುನಃ ಒಂದಾಗಿ ಬಾಳುವ ಭಾಗ್ಯ ದೊರೆತೀತೇ?

'ಖೌಲ, ಸಂತೃಪ್ತರಾಗಿರಿ.' ಇದು ಪ್ರವಾದಿವರ್ಯರ(ಸ) ಧ್ವನಿ. ಖೌಲರಿಗೆ(ರ) ಪ್ರಾಣ ಮರಳಿ ಬಂದಂತಾಯಿತು. ಅವರು ಪ್ರವಾದಿಯ(ಸ) ಬಳಿಗೋಡಿದರು. ವಹ್ಯ್ ನಿಂತಾಗ ಪ್ರವಾದಿವರ್ಯರು(ಸ) ಬೆವತು ಒದ್ದೆಯಾಗಿದ್ದರು. ಹಣೆಯಿಂದ ಮುತ್ತಿನಂತೆ ಬೆವರಿನ ಹನಿಗಳು ಉದುರುತ್ತಿದ್ದುವು. ಸೂರಃ ಮುಜಾದಲದ ಪ್ರಥಮ ಭಾಗವನ್ನು ಪ್ರವಾದಿ(ಸ) ಓದಿ ಹೇಳಿದರು. ಅದರ ಸಾರಾಂಶ ಹೀಗಿದೆ:

ತನ್ನ ನಲ್ಲನ ಬಗ್ಗೆ ನಿಮ್ಮೊಡನೆ ತಕರಾರು ಮಾಡುವ ಮತ್ತು ಅಲ್ಲಾಹನ ಮುಂದೆ ದೂರಿಡುವವಳ ಮಾತನ್ನು ಅಲ್ಲಾಹನು ಆಲಿಸಿದನು. ನಿಮ್ಮೀರ್ವರ ಮಾತುಕತೆಯನ್ನು

ಅಲ್ಲಾಹನು ಆಲಿಸುತ್ತಿರುವನು. ನಿಶ್ಚಯವಾಗಿಯೂ ಅಲ್ಲಾಹನು ಸರ್ವವನ್ನು ಆಲಿಸು ವವನೂ ಸರ್ವವನ್ನು ನೋಡುವವನೂ ಆಗಿರುತ್ತಾನೆ.

ಇಲ್ಲಿ ತಮ್ಮ ಸತಿಯರಿಗೆ 'ಝಿಹಾರ್' ಹೇಳುವವರ ಮಾತು. ಅವರ ಸತಿಯರು ಅವರ ಮಾತೆಯರೇನಲ್ಲ. (ನಿಜವಾಗಿ) ಯಾರು ಅವರಿಗೆ ಜನ್ಮವಿತ್ತಿರುವರೋ ಅವರೇ ಅವರ ಮಾತೆಯರು. ಇವರೊಂದು ದುಷ್ಟ ಹಾಗೂ ಸುಳ್ಳಾದ ಮಾತನ್ನೇ ನುಡಿಯು ತ್ತಿದ್ದಾರೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಕ್ಷಮಿಸುವವನೂ ಪೂರ್ಣವಾಗಿ ಮನ್ನಿಸು ವವನೂ ಆಗಿರುತ್ತಾನೆ.

ತಮ್ಮ ಸ್ತ್ರೀಯರಿಗೆ 'ಝಿಹಾರ್' ಹೇಳಿ, ಆ ಮೇಲೆ ತಾವು ಹೇಳಿರುವುದರಿಂದ ಹಿಮ್ಮೆಟ್ಟುವವರು, ಅವರೀರ್ವರೂ ಪರಸ್ಪರರನ್ನು ಸ್ಪರ್ಶಿಸುವುದಕ್ಕೂ ಮುನ್ನ ಓರ್ವ ಗುಲಾಮನನ್ನು ಸ್ವತಂತ್ರಗೊಳಿಸಬೇಕು. ನಿಮಗೆ ಕೊಡುವ ಬುದ್ಧಿವಾದವಿದು. ಅಲ್ಲಾಹ ನಾದರೋ ನೀವು ಮಾಡುವ ಎಲ್ಲದರ ಬಗ್ಗೆ ಅರಿವು ಉಳ್ಳವನೇ ಆಗಿರುತ್ತಾನೆ. (ಬಿಡುಗಡೆ ಗೊಳಿಸಲು) ಹಾಗೆ ಅವನಿಗೆ (ಗುಲಾಮನು) ದೊರೆಯದೆ ಇದ್ದರೆ, ಅವನು ನಿರಂತರ ಎರಡು ತಿಂಗಳ ಉಪವಾಸ ವ್ರತವನ್ನು ಆಚರಿಸಲಿ. ಅವರೀರ್ವರೂ ಪರಸ್ಪರ ಸ್ಪರ್ಶಿಸು ವುದಕ್ಕೆ ಮುನ್ನ ಇಷ್ಟನ್ನು ಮಾಡಲು ಶಕ್ಯವಿಲ್ಲದವನು ಅರುವತ್ತು ದರಿದ್ರರಿಗೆ ಭೋಜನ ಕೊಡಲಿ. ಅಲ್ಲಾಹನಲ್ಲಿಯೂ ಆತನ ಸಂದೇಶವಾಹಕರಲ್ಲಿಯೂ ವಿಶ್ವಾಸ ತರಬೇಕೆಂದು (ಈ ಆಜ್ಞೆ ಕೊಡಲಾಗಿದೆ) ಮಾತ್ರವಲ್ಲ, ಇವು ಅಲ್ಲಾಹನ ಮೇರೆಗಳು. ಸತ್ಯನಿಷೇಧಿ ಗಳಿಗಾದರೋ ದುಃಖದಾಯಕ ಯಾತನೆ ಕಾದಿದೆ.

ಆಯತ್‌ಗಳನ್ನು ಓದಿ ಹೇಳಿದ ಬಳಿಕ ಪ್ರವಾದಿಯವರು(ಸ) ಖೌಲರೊಡನೆ(ರ) ಹೀಗೆಂದರು: "ಓರ್ವ ಗುಲಾಮನನ್ನು ವಿಮೋಚಿಸುವಂತೆ ಪತಿಗೆ ಹೇಳಿರಿ." ಆಗ ಖೌಲರು(ರ) ಹೇಳಿದರು: "ನನ್ನ ಪತಿಗೆ ಅಷ್ಟು ಸಾಮರ್ಥ್ಯವಿಲ್ಲ." ಅದಕ್ಕೆ ಪ್ರವಾದಿ(ಸ) ಹೇಳಿದರು: "ಹಾಗಿದ್ದರೆ ಎರಡು ತಿಂಗಳು ನಿರಂತರ ಉಪವಾಸ ಹಿಡಿಯಲಿ." "ಎಡೆಬಿಡದೆ ಎರಡು ತಿಂಗಳು ಉಪವಾಸ ಮಾಡುವ ಸಾಮರ್ಥ್ಯವೂ ಅವರಿಗಿಲ್ಲ." "ಹಾಗಿದ್ದರೆ 60 ಮಂದಿ ದರಿದ್ರರಿಗೆ ಆಹಾರ ನೀಡಲಿ" ಎಂದು ಪ್ರವಾದಿ(ಸ) ಆಜ್ಞಾಪಿಸಿದರು. "ನನ್ನ ಪತಿ ತೀರಾ ಬಡವ" ಖೌಲ(ರ) ಪುನಃ ಹೇಳಿದರು. "ಹಾಗಿದ್ದರೆ ಉಮ್ಮುಲ್ ಮುಂದಿರ್‌ನಿಂದ ಒಂದು ಬುಟ್ಟಿ ಒಣ ಖರ್ಜೂರವನ್ನು ಪಡೆದು ಅರುವತ್ತು ಬಡವರಿಗೆ ದಾನ ಮಾಡಿರಿ" ಎಂದು ಪ್ರವಾದಿ(ಸ) ಹೇಳಿದರು.

ಖೌಲ(ರ) ಸಂತೋಷದಿಂದ ತನ್ನ ಮನೆಗೆ ಮರಳಿದರು. ಪತಿಯು ಕಸಿವಿಸಿಯಿಂದ ಬಾಗಿಲಲ್ಲಿಯೇ ನಿಂತು ಕಾಯುತ್ತಿದ್ದರು. ಖೌಲರು(ರ) ನಡೆದ ವೃತ್ತಾಂತವೆಲ್ಲವನ್ನು ತಿಳಿಸಿ ದಾಗ ಅವರು ಆನಂದ ತುಂದಿಲರಾದರು. ಅವರು ಮನಸಾರೆ ಅಲ್ಲಾಹನನ್ನು ಸ್ತುತಿಸಿದರು.

ಈ ಘಟನೆಯು ಹ. ಖೌಲರನ್ನು(ರ) ಪ್ರಸಿದ್ಧಗೊಳಿಸಿತು. ಈ ಘಟನೆಗಾಗಿ ಸಹಾಬಿಗಳು ಅವರನ್ನು ಬಹಳವಾಗಿ ಗೌರವಿಸಿದ್ದರು. ಒಮ್ಮೆ ಉಮರ್(ರ) ಎಲ್ಲಿಗೋ ಹೊರಟಿದ್ದರು. ಖೌಲ(ರ) ಅವರನ್ನು ಬಳಿ ಕರೆದು ಕೆಲವಾರು ವಿಷಯಗಳ ಬಗ್ಗೆ ಮಾತನಾಡಲಾರಂಭಿಸಿದರು. ನಿಸ್ಸಂಕೋಚವಾಗಿ ಖೌಲ(ರ) ಖಲೀಫರೊಡನೆ ಮಾತನಾಡುತ್ತಿರುವುದು ನೋಡಿ ಸಂಗಡವಿದ್ದವರಿಗೆ ಕೋಪ ಬಂತು. ಈ ಮುದುಕಿ ಅಮೀರುಲ್ ಮುಅ್‌ಮಿನೀನ್‌ರೊಡನೆ ಯಾವ ಮರ್ಯಾದೆಯೂ ಇಲ್ಲದೆ ಮಾತಾಡುತ್ತಿದ್ದಾರೆಂದು ಅವರು ಹೇಳಿದರು. ಅದಕ್ಕೆ ಉಮರ್(ರ) "ಈ ವೃದ್ಧೆ ಯಾರೆಂದು ನಿಮಗೆ ತಿಳಿದಿದೆಯೇ? ಈ ವೃದ್ಧೆಯ ಮೊರೆಯನ್ನು ಅಲ್ಲಾಹನು ಆಲಿಸಿ ಅವರ ಕುರಿತು ಕುರ್‌ಆನ್ ವಾಕ್ಯ ಅವತೀರ್ಣಗೊಳಿಸಿದ್ದಾನೆ. ಅವರೊಡನೆ ಎಷ್ಟು ಹೊತ್ತು ಬೇಕಾದರೂ ನಿಂತು ಮಾತಾಡಲು ನಾನು ಸಿದ್ಧನಿದ್ದೇನೆ."

ಉಮರ್‌ರಂತಹ(ರ) ಸಹಾಬಿಗಳಿಗೆ ಹ. ಖೌಲರ(ರ) ಬಗೆಗಿದ್ದ ಗೌರವವನ್ನು ಪ್ರಸ್ತುತ ಘಟನೆಯು ಸ್ಪಷ್ಟಗೊಳಿಸುತ್ತದೆ.

□□□

# ಹ. ಫಾತಿಮ ಬಿಂತು ಖತ್ತಾಬ್(ರ)

ಹ. ಫಾತಿಮ ಬಿಂತು ಖತ್ತಾಬ್(ರ) ಪ್ರಸಿದ್ಧ ಸಹಾಬಿ ಮತ್ತು ಎರಡನೆಯ ಖಲೀಫರಾಗಿದ್ದ ಹ. ಉಮರ್ ಬಿನ್ ಖತ್ತಾಬ್‌ರ ಸಹೋದರಿ. ಆರಂಭ ಹಂತದಲ್ಲಿಯೇ ಹ. ಫಾತಿಮ(ರ) ಮತ್ತು ಅವರ ಪತಿ ಸಈದ್ ಬಿನ್ ಝೈದ್‌ರು(ರ) ಇಸ್ಲಾಮ್‌ನಲ್ಲಿ ವಿಶ್ವಾಸವಿರಿಸಿದ್ದರು. ಅಂದು ಕೆಲವೇ ಮಂದಿ ಪ್ರವಾದಿವರ್ಯರಲ್ಲಿ(ಸ) ವಿಶ್ವಾಸವಿರಿಸಿದ್ದರು. ವಿಶ್ವಾಸವಿರಿಸಿದವರನ್ನು ಕುರೈಶರು ಕ್ರೂರವಾಗಿ ಹಿಂಸಿಸುತ್ತಿದ್ದರು. ಪ್ರಾರಂಭ ಕಾಲದಲ್ಲಿ ಉಮರ್ ಬಿನ್ ಖತ್ತಾಬ್‌ರು(ರ) ಇಸ್ಲಾಮಿನ ಪ್ರಬಲ ವಿರೋಧಿಯಾಗಿದ್ದರು. ಉಮರ್‌ರ(ರ) ಕೋಪ ಮತ್ತು ಪ್ರತಾಪ ಪ್ರಸಿದ್ಧವಾಗಿದೆ. ತನ್ನ ಕುಟುಂಬದ ಯಾರಾದರೂ ಇಸ್ಲಾಮ್ ಸ್ವೀಕರಿಸಿದರೆ ಉಮರ್‌ರು(ರ) ಸಹಿಸುತ್ತಿರಲಿಲ್ಲ. ಲುಬೈನರು ಉಮರ್‌ರ(ರ) ಮನೆಯ ಸೇವಕಿಯಾಗಿದ್ದರು. ಇಸ್ಲಾಮ್ ಸತ್ಯವೆಂದರಿತು ಲುಬೈನರು ಇಸ್ಲಾಮ್ ಧರ್ಮ ಸ್ವೀಕರಿಸಿದರು. ಅದಕ್ಕಾಗಿ ಉಮರ್‌ರು(ರ) ಅವರನ್ನು ತೀವ್ರವಾಗಿ ದಂಡಿಸಿದರು.

ಉಮರ್‌ರ(ರ) ನಿರ್ದಾಕ್ಷಿಣ್ಯ ಸ್ವಭಾವವನ್ನೂ ಕುರೈಶರ ವಿರೋಧವನ್ನೂ ಲೆಕ್ಕಿಸದೆ ಹ. ಫಾತಿಮ(ರ) ಮತ್ತು ಅವರ ಪತಿ ಹ. ಸಈದ್ ಬಿನ್ ಝೈದ್‌ರೂ(ರ) ಇಸ್ಲಾಮ್ ಸ್ವೀಕರಿಸಿದ್ದರು. ಆದರೆ ಅವರು ಉಮರ್‌ರಿಗೆ(ರ) ಹೆದರಿ ತಮ್ಮ ವಿಶ್ವಾಸವನ್ನು ಗುಪ್ತವಾಗಿರಿಸಿದ್ದರು.

ಅಂದು ಪ್ರವಾದಿವರ್ಯರು(ಸ) ಅರ್ಕಮ್ ಬಿನ್ ಅಬಿಲ್ ಅರ್ಕಮ್‌ರ ಮನೆಯಲ್ಲಿ ಗುಪ್ತವಾಗಿ ಇಸ್ಲಾಮಿನ ಪ್ರಚಾರ ಮಾಡುತ್ತಿದ್ದರು. ರಾತ್ರಿ ವೇಳೆ ಮುಸ್ಲಿಮರು ಅಲ್ಲಿ ಜಮಾಯಿಸಿ ಪ್ರವಾದಿಯವರ(ಸ) ಉಪದೇಶವನ್ನು ಆಲಿಸುತ್ತಿದ್ದರು. ಆಗಾಗ್ಗೆ ಅವತೀರ್ಣವಾಗುತ್ತಿದ್ದ ಕುರ್‌ಆನ್ ವಾಕ್ಯಗಳನ್ನು ಕಲಿತುಕೊಳ್ಳುತ್ತಿದ್ದರು. ಅವರು ಮನೆಗೆ ತೆರಳಿ ಗುಪ್ತವಾಗಿ ಕುರ್‌ಆನ್ ಪಾರಾಯಣ ಮತ್ತು ನಮಾಝ್ ಮಾಡುತ್ತಿದ್ದರು. ಇಸ್ಲಾಮ್ ಧರ್ಮವನ್ನು ಅಂಗೀಕರಿಸಿದ ಹ. ಫಾತಿಮ(ರ) ಮತ್ತು ಪತಿಯು ಇತರರಂತೆಯೇ ಮನೆಯಲ್ಲಿ ಗುಪ್ತವಾಗಿ ಕುರ್‌ಆನ್ ಪಾರಾಯಣ ಮಾಡುತ್ತಿದ್ದರು; ನಮಾಝ್ ನಿರ್ವಹಿಸುತ್ತಿದ್ದರು.

ಮುಹಮ್ಮದ್(ಸ) ಗುಪ್ತವಾಗಿ ಇಸ್ಲಾಮ್ ಧರ್ಮವನ್ನು ಪ್ರಚಾರ ಮಾಡುತ್ತಿದ್ದಾರೆ. ಅನೇಕ ಸ್ತ್ರೀ ಪುರುಷರು ಅದರಿಂದ ಆಕರ್ಷಿತರಾಗಿದ್ದಾರೆಂಬುದನ್ನು ತಿಳಿದ ಉಮರ್‌ರು(ರ) ಕೋಪದಿಂದ ಕಿಡಿಕಿಡಿಯಾದರು. ಮುಹಮ್ಮದ್‌ರ(ಸ) ಕಥೆ ಮುಗಿಸಿಯೇ ಬಿಡುವೆನೆಂದು ಅವರು ದೃಢ ನಿರ್ಧಾರ ಮಾಡಿದರು. ಖಡ್ಗ ಹಿಡಿದು ಉಮರ್‌ರು(ರ) ಅರ್ಕಮ್‌ರ ಮನೆಗೆ ಹೊರಟರು. ದಾರಿಯಲ್ಲಿ ನಈಮ್ ಬಿನ್ ಅಬ್ದುಲ್ಲರನ್ನು(ರ) ಭೇಟಿಯಾದರು. ನಈಮ್‌ರು ಉಮರ್‌ರ(ರ) ಸಂಬಂಧಿಕರಾಗಿದ್ದರು. ಅವರು ಇಸ್ಲಾಮ್ ಸ್ವೀಕರಿಸಿರುವುದನ್ನು ಉಮರ್(ರ) ಅರಿತಿರಲಿಲ್ಲ. ಉಮರ್‌ರ(ರ) ರೌದ್ರ ರೂಪವನ್ನು ಕಂಡ ನಈಮ್‌ರು ಏನೋ ಗಂಡಾಂತರ ವಿದೆಯೆಂದು ಊಹಿಸಿದರು.

"ನಗ್ನ ಖಡ್ಗ ಹಿಡಿದು ಎಲ್ಲಿಗೆ ಹೊರಟಿದ್ದೀರಿ?" ನಈಮ್ ಪ್ರಶ್ನಿಸಿದರು. "ಹೊಸ ಧರ್ಮವನ್ನು ತಂದ ಮುಹಮ್ಮದನ ಕಥೆ ಮುಗಿಸಲಿಕ್ಕೆ" ಎಂಬ ಉತ್ತರ ಬಂತು. "ಮೊದಲು ತಮ್ಮ ಮನೆಯವರನ್ನು ಸರಿಪಡಿಸಿರಿ. ತರುವಾಯ ಇತರರನ್ನು ಸರಿಪಡಿಸಿದರೆ ಸಾಕು. ಸ್ವಸಹೋದರಿ ಮತ್ತು ಆಕೆಯ ಪತಿ ಇಸ್ಲಾಮ್ ಸ್ವೀಕರಿಸಿರುವ ಸುದ್ದಿ ತಿಳಿದಿಲ್ಲವೇ?" ಇದನ್ನು ಕೇಳಿದಾಗ ಉಮರ್‌ರ ಕೋಪ ಇಮ್ಮಡಿಸಿತು. ಅವರು ಕೆರಳಿ ವ್ಯಾಘ್ರದಂತೆ ಹ. ಫಾತಿಮರ(ರ) ಮನೆಗೆ ಧಾವಿಸಿದರು. ಅವರು ಹೊಸ ಧರ್ಮವನ್ನು ತೊರೆಯಬೇಕು. ಅದಲ್ಲದಿದ್ದರೆ ನನ್ನ ಖಡ್ಗಕ್ಕೆ ಬಲಿಯಾಗಬೇಕು ಎಂಬ ನಿರ್ಧಾರವನ್ನು ತಳೆದಿದ್ದರು. ಮನೆ ತಲಪಿದಾಗ ಒಳಗಿನಿಂದ ಕುರ್‌ಆನ್ ಓದುವ ಸದ್ದು ಕೇಳಿಸುತ್ತಿತ್ತು. ಉಮರ್‌ರ(ರ) ಕೋಪ ಪುನಃ ಪ್ರಜ್ವಲಿಸಿತು. ಉಮರ್‌ರ(ರ) ಪರಿಚಿತ ಕಾಲ ಸಪ್ಪಳ ಕೇಳಿದೊಡನೆ ಫಾತಿಮರು(ರ) ಕುರ್‌ಆನ್ ಓದುವುದನ್ನು ನಿಲ್ಲಿಸಿ ಅದು ಬರೆದಿಟ್ಟ ಗ್ರಂಥವನ್ನು ಅಡಗಿಸಿಟ್ಟರು. ಓದುತ್ತಿದ್ದುದೇನು? ಮತ್ತು ಅದನ್ನು ನನಗೆ ತೋರಿಸಬೇಕೆಂದು ಉಮರ್(ರ) ಅಪೇಕ್ಷಿಸಿದರು. ಅವರು ಅದನ್ನು ತೋರಿಸಲೊಪ್ಪಲಿಲ್ಲ. ನೀವು ಧರ್ಮ ಬದಲಾಯಿಸಿದ್ದೀರಾ ಎನ್ನುತ್ತಾ ಉಮರ್(ರ) ಆಕ್ರೋಶದಿಂದ ಸಈದ್‌ರನ್ನು(ರ) ಆಕ್ರಮಿಸಿದರು. ಪತಿಯ ರಕ್ಷಣೆಗಾಗಿ ಫಾತಿಮರು(ರ) ಅವರ ಮಧ್ಯಕ್ಕೆ ಧುಮುಕಿದರು. ಉಮರ್(ರ) ಅವರನ್ನು ಮರ್ದಿಸಿದರು. ಉಮರ್‌ರ(ರ) ಧಾಳಿಯಿಂದಾಗಿ ಅವರ ತಲೆಯಿಂದ ರಕ್ತ ಸುರಿಯಲಾರಂಭಿಸಿತು. ಆದರೆ ಈ ಕ್ರೌರ್ಯವು ಅವರನ್ನು ಸತ್ಯವಿಶ್ವಾಸದಿಂದ ವಿಚಲಿತಗೊಳಿಸಲಿಲ್ಲ. "ಉಮರ್, ನಿಮಗಿಷ್ಟ ವಿರುವಂತೆ ವರ್ತಿಸಿರಿ. ನಮ್ಮಲ್ಲಿ ಪ್ರಾಣವಿರುವ ತನಕ ಇಸ್ಲಾಮಿನಿಂದ ವಿಮುಖಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ." ಫಾತಿಮರ(ರ) ಈ ದೃಢ ಸ್ವರವು ಉಮರ್‌ರನ್ನು(ರ) ಸ್ವಪ್ನದಿಂದಲೆಂಬಂತೆ ಬಡಿದೆಬ್ಬಿಸಿತು. ಸಹೋದರಿಯ ತಲೆಯಿಂದ ಸುರಿಯುತ್ತಿರುವ ರಕ್ತವನ್ನು ಅವರು ಕಂಡರು. ಅವರ ಕೋಪ ಇಳಿಯಿತು. ಜ್ಞಾನೋದಯವಾಯಿತು. ತಾನು ಸ್ವಲ್ಪ ಅತಿರೇಕದಿಂದ ವರ್ತಿಸಿದೆನೆಂದು ಅವರಿಗೆ ಮನವರಿಕೆಯಾಯಿತು. "ನೀವು ಓದುತ್ತಿದ್ದುದನ್ನು ನನಗೆ ತೋರಿಸಿರಿ. ನಾನೂ ಅದನ್ನು ಓದಿ ನೋಡುತ್ತೇನೆ."

ಉಮರ್(ರ) ಶಾಂತ ಸ್ವರದಿಂದ ಹೇಳಿದರು. ಉಮರ್‌ರ(ರ) ಕೋಪ ತಣಿದಿರುವುದನ್ನು ಕಂಡ ಫಾತಿಮರು(ರ) ಕುರ್‌ಆನ್ ಬರೆದ ಗ್ರಂಥವನ್ನು ಅವರಿಗೆ ನೀಡಿದರು. ಉಮರ್ ಓದಲಾರಂಭಿಸಿದರು. ಅದರ ಪ್ರತಿಯೊಂದು ವಾಕ್ಯವೂ ತನ್ನನ್ನು ಸೆಳೆಯುತ್ತಿರುವಂತೆ ಅವರಿಗೆ ತೋರಿತು. "ಆದ್ದರಿಂದ ಅಲ್ಲಾಹನಲ್ಲಿಯೂ ಆತನ ಪ್ರವಾದಿಯಲ್ಲಿಯೂ ವಿಶ್ವಾಸವಿರಿಸಿರಿ" ಎಂಬ ಭಾಗವನ್ನು ಓದಿದಾಗ ಅನಿರೀಕ್ಷಿತವಾಗಿ ಉಮರ್(ರ) ನಾಲಗೆಯಿಂದ ಪವಿತ್ರ ವಾಕ್ಯವು ಹೊರ ಬಂತು. ಅದನ್ನು ಆಲಿಸಿದಾಗ ಹ. ಫಾತಿಮ(ರ) ಮತ್ತು ಅವರ ಪತಿಯು ಸಂತೋಷದಿಂದ ನಲಿದಾಡಿದರು.

ತರುವಾಯ ಉಮರ್‌ರು(ರ) ಪ್ರವಾದಿಯ(ಸ) ಬಳಿಗೆ ಹೋಗಿ ತಾನು ಇಸ್ಲಾಮ್ ಸ್ವೀಕರಿಸಿರುವೆನೆಂದು ಹೇಳಿದರು. ಪ್ರವಾದಿಯವರು(ಸ) ಸಂತೋಷಾತಿರೇಕದಿಂದ 'ಅಲ್ಲಾಹು ಅಕ್ಬರ್' ಎಂದು ಗಟ್ಟಿಯಾಗಿ ಹೇಳಿದರು. ಅನುಯಾಯಿಗಳೂ ಅದನ್ನು ಅನುಕರಿಸಿದಾಗ ಆ ಧ್ವನಿಯು ಸಫಾ ಬೆಟ್ಟದಲ್ಲಿ ಮಾರ್ದನಿಸಿತು. ಉಮರ್‌ರು(ರ) ಇಸ್ಲಾಮಿಗೆ ಸೇರಿದ ಬಳಿಕ ಇಸ್ಲಾಮ್ ಮತ್ತು ಮುಸ್ಲಿಮರ ಸ್ಥಾನವು ಬಲಪಡೆಯಿತು.

ವೈರಿಗಳ ಹಿಂಸೆ ಅಸಹ್ಯವಾದಾಗ ಇತರ ಮುಸ್ಲಿಮರೊಡನೆ ಹ. ಫಾತಿಮ(ರ) ಮತ್ತು ಪತಿಯು ಮದೀನಕ್ಕೆ ಹಿಜ್ರತ್ ಹೋದರು. ಬುದ್ಧಿವಂತಳಾಗಿದ್ದ ಫಾತಿಮರು(ರ) ಒಳಿತನ್ನು ಮೆಚ್ಚಿ ಕೆಡುಕನ್ನು ದ್ವೇಷಿಸುತ್ತಿದ್ದರು. ಒಳಿತನ್ನು ಆಜ್ಞಾಪಿಸಿ ಕೆಡುಕನ್ನು ವಿರೋಧಿಸುತ್ತಿದ್ದರೆಂದು ಕೆಲವು ಇತಿಹಾಸಗಾರರು ಫಾತಿಮರ(ರ) ಗುಣವನ್ನು ವಿವರಿಸುತ್ತಾ ಒತ್ತಿ ಹೇಳಿದ್ದಾರೆ.

ಹ. ಫಾತಿಮರಿಗೆ(ರ) ಅಬ್ದುಲ್ಲಾ, ಅಬ್ದುರ್ರಹ್ಮಾನ್, ಅಸ್‌ಅದ್ ಮತ್ತು ಅಸ್ವದ್ ಎಂಬ ನಾಲ್ಕರು ಮಕ್ಕಳಿದ್ದರು. ಹ. ಉಮರ್‌ರ ಖಿಲಾಫತ್ ಕಾಲದಲ್ಲಿ ಹ. ಫಾತಿಮ(ರ) ನಿಧನರಾದರು.

□□□

# ಹ. ಸುಮಯ್ಯಾ ಬಿಂತು ಖಬ್ಬಾತ್(ರ)

ಹ. ಸುಮಯ್ಯಾ ಬಿಂತು ಖಬ್ಬಾತ್‌ರು(ರ) ಇಸ್ಲಾಮಿಗಾಗಿ ಅಸಂಖ್ಯಾತ ತ್ಯಾಗ ಮತ್ತು ಹಿಂಸೆಗಳನ್ನು ಸಹಿಸಿ, ಮುಸ್ಲಿಮ್ ಮಹಿಳಾ ಲೋಕಕ್ಕೆ ತ್ಯಾಗದ ಅನಶ್ವರ ಮಾದರಿಯನ್ನು ತೋರಿಸಿ, ಅಲ್ಲಾಹನ ಮಾರ್ಗದಲ್ಲಿ ವೀರ ಮೃತ್ಯುವನ್ನು ಅಪ್ಪಿಕೊಂಡ ಮಹಿಳಾ ರತ್ನ. ಆ ಮಹಿಳೆಯು ಇಸ್ಲಾಮಿನ ಅನೇಕ ಹುತಾತ್ಮರಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾರೆ. ಅಲ್ಲಾಹನ ಮಾರ್ಗದಲ್ಲಿ ಪ್ರಥಮವಾಗಿ ಪ್ರಾಣ ಅರ್ಪಿಸಿ ಹುತಾತ್ಮರಾಗಿರುವರೆಂಬುದು ಸುಮಯ್ಯಾರ(ರ) ಅತಿ ದೊಡ್ಡ ವೈಶಿಷ್ಟ್ಯ. ತ್ಯಾಗದ ಅಗ್ನಿಕುಂಡದಲ್ಲಿ ವಿಚಲಿತರಾಗದೆ ಮುನ್ನಡೆದು ಗುರಿ ತಲಪಿದ ವೀರ ಪುತ್ರ ಅಮ್ಮಾರ್(ರ). ಸತ್ಯದಲ್ಲಿ ವಿಶ್ವಾಸವಿರಿಸಿದರೆಂಬ ಏಕೈಕ ಕಾರಣಕ್ಕಾಗಿ ವೈರಿಗಳ ಕ್ರೂರ ಮರ್ದನಗಳಿಗೆ ಬಲಿಯಾಗಿ ತನ್ನಂತೆಯೇ ತನ್ನ ಹಿಂದೆ ಸಾವನ್ನಪ್ಪಿದ ಪತಿ ಯಾಸಿರ್(ರ). ಇದುವೇ ಹ. ಸುಮಯ್ಯರ(ರ) ಪುಟ್ಟ ಕುಟುಂಬ.

ಹ. ಸುಮಯ್ಯಾ(ರ) ಅಬೂ ಹುದೈಫ ಬಿನ್ ಮುಗೀರರ ದಾಸಿಯಾಗಿದ್ದರು. ಹ. ಸುಮಯ್ಯಾರು(ರ) ಯೌವನಾವಸ್ಥೆಗೆ ತಲಪಿದಾಗ ಅವರನ್ನು ಯಾರಿಗಾದರೂ ವಿವಾಹ ಮಾಡಿಕೊಡಬೇಕೆಂದು ಯಜಮಾನ ತೀರ್ಮಾನಿಸಿದರು. ಆದರೆ ಆ ಗುಲಾಮ ಹೆಣ್ಣನ್ನು ವಿವಾಹವಾಗಲು ಯಾರೂ ಮುಂದೆ ಬರಲಿಲ್ಲ. ಹೀಗಿರಲು ಯಮನ್‌ನಿಂದ ಯಾಸಿರ್ ಬಿನ್ ಆಮಿರ್ ಎಂಬೋರ್ವರು ಮಕ್ಕಾಕ್ಕೆ ಬಂದರು. ಯಾಸಿರ್‌ರು ಅಬ್‌ಸ್ ಗೋತ್ರದವರಾಗಿದ್ದರು. ಸುಮಯ್ಯಾರ(ರ) ಯಜಮಾನ ಅಬೂ ಹುದೈಫರು ಬನೂ ಮಕ್ಸೂಮ್ ಗೋತ್ರದವರಾಗಿದ್ದರು. ಉಭಯ ಗೋತ್ರಗಳೂ ಮೈತ್ರಿಯಿಂದಿದ್ದುವು. ಮೈತ್ರಿ ಸಂಬಂಧವನ್ನು ಅರಬರು ಸಹೋದರಿ ಸಂಬಂಧಕ್ಕೆ ಸಮಾನವೆಂದು ಪರಿಗಣಿಸುತ್ತಿದ್ದರು. ಯಾಸಿರ್ ಗುಲಾಮರಲ್ಲವಾದರೂ ಬಡವರಾಗಿದ್ದರು. ಸುಮಯ್ಯರನ್ನು ವಿವಾಹವಾಗುವ ಬಗ್ಗೆ ಅವರಿಗೆ ಯಾವ ಅಸಂತೃಪ್ತಿಯೂ ಇರಲಿಲ್ಲ. ಸುಮಯ್ಯರಿಗೂ ಅದು ಹಿಡಿಸಿತು. ಹೀಗೆ ಸುಮಯ್ಯಾ ಮತ್ತು ಯಾಸಿರ್‌ರು ಸತಿಪತಿಯರಾದರು.

ಆ ದಾಂಪತ್ಯ ಜೀವನವು ಪ್ರೇಮಮಯವಾಗಿತ್ತು. ಬುದ್ಧಿ ಮತ್ತು ವಿವೇಕದಲ್ಲಿಯೂ

ಸಾಮ್ಯತೆಯಿತ್ತು. ಇದುವೇ ಆ ದಾಂಪತ್ಯ ಜೀವನದ ಯಶಸ್ಸಿನ ಗುಟ್ಟು. ವರ್ಷಗಳು ಉರುಳಿದುವು. ಸುಮಯ್ಯಾ-ಯಾಸಿರ್ ದಂಪತಿಗಳಿಗೆ ಒಂದು ಗಂಡು ಮಗು ಹುಟ್ಟಿತು-ಅಮ್ಮಾರ್. ತ್ಯಾಗಿವರ್ಯೆಯಾಗಿದ್ದ ಮಾತೆಯು ಹೆತ್ತು ತ್ಯಾಗಿವರ್ಯಪುತ್ರರೇ ಅಮ್ಮಾರ್. ಇಸ್ಲಾಮಿಗಾಗಿ ಅಮ್ಮಾರ್‌ರು(ರ) ಅನೇಕ ಸಂಕಷ್ಟ ಮತ್ತು ಯಾತನೆಗಳನ್ನು ಅನುಭವಿಸಿದರು. ಕೊನೆಗೆ ಸಿಪ್ಪೀನ್ ಯುದ್ಧದಲ್ಲಿ ಹುತಾತ್ಮರಾದರು.

ಅಮ್ಮಾರ್ ಜನಿಸಿದಾಗ ಅಬೂ ಹುದೈಫರು ಸುಮಯ್ಯರನ್ನು(ರ) ಸ್ವತಂತ್ರಗೊಳಿಸಿದರು. ಅನೇಕ ಸಂಕಷ್ಟಗಳಿದ್ದರೂ ಆ ಪುಟ್ಟ ಕುಟುಂಬವು ಸಂತೃಪ್ತಿಯಿಂದ ಜೀವನ ಸಾಗಿಸುತ್ತಿತ್ತು.

ಪ್ರವಾದಿ ಮುಹಮ್ಮದ್(ಸ) ಆಗತರಾದರು. ಕೆಲವಾರು ಮಂದಿ ಪ್ರವಾದಿಯವರಲ್ಲಿ(ಸ) ವಿಶ್ವಾಸವಿರಿಸಿದ್ದರು. ವಿಶ್ವಾಸಿಗಳಿಗೆ ಕುರೈಶರು ನಾನಾ ವಿಧದ ಹಿಂಸೆ ನೀಡುತ್ತಿದ್ದರು. ಸುಮಯ್ಯಾರು(ರ) ಇಸ್ಲಾಮಿನ ಸಂದೇಶವನ್ನು ಆಲಿಸಿದರು. ಇಸ್ಲಾಮ್ ಸತ್ಯಧರ್ಮವೆಂದು ಆ ನಿಷ್ಕಳಂಕ ಹೃದಯಕ್ಕೆ ವೇದ್ಯವಾಯಿತು. ವಿಶ್ವಾಸವಿರಿಸಿದರೆ ಕುರೈಶರೆಲ್ಲರೂ ನಮ್ಮ ವಿರುದ್ಧ ತಿರುಗುವರು. ಆಪ್ತೇಷ್ಟರಿಲ್ಲದ ಬಡ ಹಾಗೂ ಅಸಹಾಯಕರಾದ ತಮ್ಮನ್ನು ಅವರು ಏನು ಬೇಕಾದರೂ ಮಾಡಬಹುದು? ಆ ಬಗ್ಗೆ ಯಾರೂ ಪ್ರಶ್ನಿಸುವವರಿರಲಾರರು? ಅದಕ್ಕಾಗಿ ಸತ್ಯವನ್ನು ನಿರಾಕರಿಸಲಾದೀತೇ? ಮಾನವನ ಪ್ರೀತಿ ಸಂಪಾದಿಸಲಿಕ್ಕಾಗಿ ಅಲ್ಲಾಹನ ಕೋಪವನ್ನು ಖರೀದಿಸುವುದು ಬುದ್ಧಿವಂತಿಕೆಯೇ? ಸರ್ವಥಾ ಸಾಧ್ಯವಿಲ್ಲ. ಪತಿ ಮತ್ತು ಪುತ್ರನ ಅಭಿಪ್ರಾಯವೂ ಅದೇ ಆಗಿತ್ತು. ಯಾವುದೇ ಹಿಂಸೆ ದೌರ್ಜನ್ಯವನ್ನು ಸಹಿಸುವ ದೃಢ ನಿರ್ಧಾರದಿಂದ ಹ. ಸುಮಯ್ಯ(ರ) ಮತ್ತು ಅವರ ಕುಟುಂಬವು ಇಸ್ಲಾಮ್ ಸ್ವೀಕರಿಸಿತು.

ಯಾಸಿರ್ ಮತ್ತು ಕುಟುಂಬವು ಇಸ್ಲಾಮ್ ಸ್ವೀಕರಿಸಿದೆಯೆಂಬ ಸಮಾಚಾರ ಕೇಳಿ ಕುರೈಶರು ರೋಷಾಕುಲರಾದರು. ಸುಮಯ್ಯಾರನ್ನೂ(ರ) ಅವರ ಪತಿ ಮತ್ತು ಪುತ್ರನನ್ನೂ ಇಸ್ಲಾಮಿನಿಂದ ಮರಳಿಸಲು ವೈರಿಗಳು ನಾನಾ ಕುತಂತ್ರಗಳನ್ನು ಪ್ರಯೋಗಿಸಿದರು. ಎಲ್ಲವೂ ವಿಫಲವಾದಾಗ ಅವರನ್ನು ಕ್ರೂರವಾಗಿ ಹಿಂಸಿಸತೊಡಗಿದರು. ಬಿಸಿ ಮರಳಿನಲ್ಲಿ ಮಲಗಿಸಿ ಕೊರಡೆಯಿಂದ ಪೈಶಾಚಿಕವಾಗಿ ಹೊಡೆದರು. ದಿನಂಪ್ರತಿ ನಡು ಮಧ್ಯಾಹ್ನ ವೇಳೆ ಈ ಚಿತ್ರಹಿಂಸೆಯನ್ನು ನಡೆಸಿದರು. ಇದನ್ನು ನೋಡಿ ಪ್ರವಾದಿ(ಸ) ಹೀಗೆನ್ನುತ್ತಿದ್ದರು: "ಯಾಸಿರ್ ಕುಟುಂಬವೇ. ತಾಳ್ಮೆ ವಹಿಸಿರಿ. ಸ್ವರ್ಗವೇ ನಿಮಗೆ ಪ್ರತಿಫಲ."

ಎಲ್ಲಿ ನೋಡಿದರೂ ಕ್ರೌರ್ಯ ಹಿಂಸೆಗಳ ನಗ್ನ ತಾಂಡವ. ಅದೋ ಅಲ್ಲಿ ಹರ್ರುತ್ ಬಿಲಾಲ್(ರ) ಮರ್ದಿಸಲ್ಪಡುತ್ತಿದ್ದಾರೆ. ಬಿಲಾಲ್‌ರನ್ನು(ರ) ಕಾದ ಮರಳಿನ ಮೇಲೆ ಮಲಗಿಸಿ ಎದೆಯ ಮೇಲೆ ಭಾರವಾದ ಕಲ್ಲನ್ನು ಹೊರಿಸಿ ಉಮಯ್ಯ ಹೇಳುತ್ತಾರೆ. "ಇಸ್ಲಾಮಿನಿಂದ ಮರಳು. ಇಲ್ಲದಿದ್ದರೆ ಚಿತ್ರಹಿಂಸೆ ನೀಡಿ ಕೊಂದು ಬಿಡುವೆನು." ಕೊರಡೆಯಿಂದ ಆ ವೀರ

ಪುರುಷನಿಗೆ ಬಲವಾಗಿ ಹೊಡೆದರು. ಕುತ್ತಿಗೆಗೆ ಹಗ್ಗ ಹಾಕಿ ಬೀದಿಯಲ್ಲಿ ಎಳೆದಾಡುತ್ತಿದ್ದರು. ಆ ವೇಳೆಗಳಲ್ಲಿ ಅವರ ಕಂಠನಾಳದಿಂದ "ಅಹದ್, ಅಹದ್" (ಅಲ್ಲಾಹನು ಏಕನು) ಎಂಬ ಧ್ವನಿ ಮಾತ್ರ ಕೇಳಿಬರುತ್ತಿತ್ತು.

ಇನ್ನೊಂದೆಡೆ ಹ. ಸುಹೈಬ್‌ರನ್ನು(ರ) ಹಿಂಸಿಸಲಾಗುತ್ತಿದೆ. ಉಮರ್ ಬಿನ್ ಖತ್ತಾಬ್‌ರ ದಾಸಿಯರಾದ ಲುಬೈನ(ರ) ಮತ್ತು ಸುನ್ನೈರರು(ರ) ಮತ್ತೊಂದೆಡೆ ಮರ್ದಿಸಲ್ಪಡುತ್ತಿದ್ದಾರೆ. ನಹ್‌ದಿಯ್ಯ(ರ) ಮತ್ತು ಉಮ್ಮು ಉಬೈಸ್‌ರನ್ನು(ರ) ಇಸ್ಲಾಮಿನ ಹೆಸರಿನಲ್ಲಿಯೇ ಬಡಿದು ಜಜ್ಜಲಾಗುತ್ತಿದೆ. ಹ. ಸುಮಯ್ಯಾರ(ರ) ಕುಟುಂಬವು ಇವೆಲ್ಲವನ್ನೂ ಕಣ್ಣಾರೆ ಕಂಡಿತ್ತು. ಆದರೆ ಆ ಹಿಂಸೆಯಿಂದ ಜೀವಾರ್ಪಣೆ ಮಾಡುವ ವಿನಾ ಅಲ್ಲಾಹನ ಧರ್ಮವನ್ನು ಕೈಬಿಡಲು ಅವರು ಸಿದ್ಧರಾಗಲಿಲ್ಲ.

ತರುವಾಯ ಹ. ಸುಮಯ್ಯರನ್ನು(ರ) ದಂಡಿಸುವ ಕೆಲಸವನ್ನು ಇಸ್ಲಾಮಿನ ಬದ್ಧ ವೈರಿಯಾದ ಅಬೂಜಹಲ್ ವಹಿಸಿಕೊಂಡನು. ಅಬೂಜಹಲ್‌ನ ಹಿಂಸಾಕೃತ್ಯಗಳು ಅಮಾನುಷ ಮತ್ತು ಅತ್ಯಂತ ಕ್ರೂರವಾಗಿದ್ದುವು. ಸುಮಯ್ಯಾರನ್ನು(ರ) ಇಸ್ಲಾಮಿನಿಂದ ವಿಮುಖಗೊಳಿಸಲಸಾಧ್ಯವೆಂದು ಮನಗಂಡ ಅಬೂಜಹಲ್ ಅವರನ್ನು ಕೊಂದು ಬಿಡಲು ನಿರ್ಧರಿಸಿದ. ಕ್ರುದ್ಧ ಮತ್ತು ಹತಾಶನಾದ ಅಬೂಜಹಲ್ ಹರಿತವಾದ ಬಾಣವೊಂದನ್ನು ಹ. ಸುಮಯ್ಯಾರ(ರ) ನೇರಕ್ಕೆ ಬಲವಾಗಿ ಎಸೆದನು. ಅದು ಅವರ ಗುಪ್ತಾಂಗಕ್ಕೆ ನಾಟಿತು. ಅವರು ಕುಸಿದು ಬಿದ್ದರು. ಹೊರಳಿ ಹೊರಳಿ ಮಡಿದರು. ಹೀಗೆ ಇಸ್ಲಾಮಿನ ಹುತಾತ್ಮರ ಯಾದಿಯಲ್ಲಿ ಹ. ಸುಮಯ್ಯಾ(ರ) ಪ್ರಥಮ ಸ್ಥಾನ ಗಳಿಸಿದರು.

ಮಾತೆಯ ಶೋಚನೀಯ ಮೃತ್ಯು ಅಮ್ಮಾರರನ್ನು ದುಃಖಸಾಗರದಲ್ಲಿ ಮುಳುಗಿಸಿತು. ಅವರು ಸ್ವಯಂ ಸ್ಥೈರಿಸಲಾಗದೆ ಬಿಕ್ಕಿ ಬಿಕ್ಕಿ ರೋದಿಸಿದರು. ಪ್ರವಾದಿಯವರು(ಸ) ಅಮ್ಮಾರ್‌ರನ್ನು(ರ) ಸಾಂತ್ವನಗೊಳಿಸಿದರು. ಅವರಿಗಾಗಿ ಪ್ರಾರ್ಥಿಸಿದರು: "ಅಲ್ಲಾಹನೇ, ಯಾಸಿರ್ ಕುಟುಂಬದ ಯಾವೊಬ್ಬನನ್ನೂ ನೀನು ಶಿಕ್ಷಿಸಬೇಡ."

ಬದ್‌ರ್‌ಯುದ್ಧದಲ್ಲಿ ಅಬೂಜಹಲ್ ವಧಿಸಲ್ಪಟ್ಟಾಗ ಪ್ರವಾದಿಯವರು(ಸ) ಅಮ್ಮಾರ್‌ರೊಡನೆ(ರ) ಹೀಗೆಂದರು: "ಅಮ್ಮಾರ್, ನಿನ್ನ ಪ್ರಿಯ ಮಾತೆಯ ಘಾತುಕನೊಡನೆ ಅಲ್ಲಾಹನು ಸೇಡು ತೀರಿಸಿಕೊಂಡಿದ್ದಾನೆ."

ವೈರಿಗಳ ಎಲ್ಲ ಕ್ರೌರ್ಯಗಳನ್ನು ಸಹಿಸಿ ಹ. ಸುಮಯ್ಯಾರ(ರ) ಪತಿ ಹ. ಯಾಸಿರ್‌ರೂ(ರ) ಇಸ್ಲಾಮಿನಲ್ಲಿಯೇ ಸ್ಥಿರವಾಗಿ ನಿಂತರು. ಕೊನೆಗೆ ಆ ವೀರ ಪುರುಷನೂ ಅಲ್ಲಾಹನ ಮಾರ್ಗದಲ್ಲಿ ತನ್ನ ಪ್ರಿಯ ಪತ್ನಿಯನ್ನು ಹಿಂಬಾಲಿಸಿದರು.

□□□

# ಹ. ಅಸ್ಮಾ ಬಿಂತು ಉಮ್ಮೈಸ್(ರ)

ಹ. ಅಸ್ಮಾ ಬಿಂತು ಉಮ್ಮೈಸ್‌ರು(ರ) ಇಸ್ಲಾಮಿನ ಆರಂಭ ಕಾಲದಲ್ಲಿ ಸರ್ವ ತ್ಯಾಗಗಳಿಗೂ ಸಿದ್ಧರಾಗಿ ಪ್ರವಾದಿಯವರಲ್ಲಿ(ಸ) ವಿಶ್ವಾಸವಿರಿಸಲು ಧೈರ್ಯದಿಂದ ಮುಂದೆ ಬಂದ ವೀರ ಮಹಿಳೆಯರಲ್ಲಿ ಓರ್ವರಾಗಿದ್ದಾರೆ. ಅಲ್ಲಾಹನ ಮಾರ್ಗದಲ್ಲಿ ಅವರು ಅನೇಕ ಕಷ್ಟನಷ್ಟಗಳನ್ನು ಮತ್ತು ಯಾತನೆಗಳನ್ನು ಅನುಭವಿಸಿದರು. ಪ್ರವಾದಿಯವರು(ಸ) ಅರ್ಕಮ್‌ನ ಮನೆಯಲ್ಲಿ ರಹಸ್ಯವಾಗಿ ಧರ್ಮಪ್ರಚಾರ ಮಾಡುತ್ತಿದ್ದ ವೇಳೆ ಹ. ಅಸ್ಮಾ ಬಿಂತು ಉಮ್ಮೈಸ್(ರ) ಮತ್ತು ಅವರ ಪತಿ ಹ. ಜಅ್‌ಫರ್ ಬಿನ್ ಅಬೀತಾಲಿಬ್‌ರು ಇಸ್ಲಾಮ್ ಸ್ವೀಕರಿಸಿದರು. ತನ್ನಿಮಿತ್ತ ಅವರು ಇತರ ಮುಸ್ಲಿಮರಂತೆ ವೈರಿಗಳ ಮರ್ದನಗಳಿಗೆ ಬಲಿಯಾದರು. ಕೊನೆಗೆ ಮನೆಮಾರನ್ನು ತೊರೆದು ಅಬಿಸೀನಿಯಾದಲ್ಲಿ ಅಭಯ ಪಡೆಯ ಬೇಕಾಯಿತು. ನಜ್ಜಾಶಿ ರಾಜನ ಬಳಿಗೆ ಮುಸ್ಲಿಮ್ ನಿರಾಶ್ರಿತ ತಂಡವನ್ನು ಒಯ್ದು ಅವರಿಗೆ ಇಸ್ಲಾಮ್ ಧರ್ಮದ ಸಂದೇಶವನ್ನು ಹ. ಜಅ್‌ಫರ್ ಬಿನ್ ಅಬೀತಾಲಿಬ್‌ರೇ(ರ) ನೀಡಿದ್ದರು. ನಿರಾಶ್ರಿತರಾದ ಮುಸ್ಲಿಮರನ್ನು ಮಕ್ಕಾದಿಂದ ಮರಳಿ ಕರೆದೊಯ್ಯಲಿಕ್ಕಾಗಿ ಆಗಮಿಸಿದ ವೈರಿಗಳ ನಿವೇದಕ ತಂಡವು ಹ. ಜಅ್‌ಫರ್‌ರು ನಜ್ಜಾಶಿ ರಾಜನ ಮುಂದೆ ಮಾಡಿದ ಭಾಷಣದ ಬಳಿಕ, ನಿರಾಶರಾಗಿ ಹಿಂತಿರುಗಬೇಕಾಯಿತು. ಕುರೈಶರ ಕಾಣಿಕೆ ಮತ್ತು ಮನವಿಯನ್ನು ನಜ್ಜಾಶಿ ರಾಜರು ಸ್ವೀಕರಿಸಲೊಪ್ಪಲಿಲ್ಲ.

ಕೆಲವಾರು ವರ್ಷ ಅವರು ಅಬಿಸೀನಿಯದಲ್ಲಿಯೇ ಅಭಯಾರ್ಥಿಗಳಾಗಿ ಜೀವಿಸಿದರು. ಅವರ ಅಬಿಸೀನಿಯಾ ಜೀವನವು ತ್ಯಾಗಮಯವಾಗಿದ್ದಿತು. ಕ್ರೈಸ್ತರಿಗೆ ಇಸ್ಲಾಮಿ ಸಂದೇಶವನ್ನು ತಲಪಿಸುವ ಹಾಗೂ ಅನೇಕ ಅನುಭವ ಮತ್ತು ಜ್ಞಾನವನ್ನು ಗಳಿಸುವ ಅವಕಾಶ ಒದಗಿತ್ತು. ಮಾತ್ರವಲ್ಲ ಎರಡು ಬಾರಿ ಹಿಜ್ರತ್ ನಡೆಸಿದ ಮಹಾ ಸೌಭಾಗ್ಯವನ್ನೂ ಗಳಿಸಲು ಅವರಿಗೆ ಸಾಧ್ಯವಾಯಿತು.

ಅಬಿಸೀನಿಯಾದಲ್ಲಿ ಅಸ್ಮಾ ಮತ್ತು ಜಅ್‌ಫರ್ ದಂಪತಿಗಳಿಗೆ ಮೂರು ಮಕ್ಕಳು ಹುಟ್ಟಿದರು. ಮುಹಮ್ಮದ್, ಅಬ್ದುಲ್ಲಾ ಮತ್ತು ಔನ್.

ಹಿಜರಿ ಏಳನೇ ವರ್ಷ ಹ. ಅಸ್ಮಾ ಮತ್ತು ಕುಟುಂಬವು ಸಮುದ್ರ ದಾರಿಯಿಂದ ಮದೀನಕ್ಕೆ ಹೊರಟರು. ಅವರಿಗೆ ಮದೀನದಲ್ಲಿ ವಾಸಿಸಲು ಮನೆಯಿರಲಿಲ್ಲ. ಪ್ರಾಯಶಃ

ಇದರಿಂದಾಗಿಯೇ ಅವರು ಮೊದಲು ಪ್ರವಾದಿಯವರ(ಸ) ಪತ್ನಿ ಹ. ಹಫ್ಸಾರ(ರ) ಮನೆಗೆ ಹೋದರು. ಹ. ಉಮರ್ ಬಿನ್ ಖತ್ತಾಬ್‌ರು(ರ) ಖೈಬರ್ ಯುದ್ಧ ಮುಗಿಸಿ, ಮಗಳ ಭೇಟಿಗಾಗಿ ಬಂದಾಗ ಹ. ಅಸ್ಮಾರನ್ನು ಕಂಡರು. ಕ್ಷೇಮ ಸಮಾಚಾರ ವಿಚಾರಿಸಿದ ಬಳಿಕ ಉಮರ್(ರ) ಹೇಳಿದರು: 'ನಾವು ಮುಹಾಜಿರರು. ಆದ್ದರಿಂದ ನಮಗಿರುವಷ್ಟು ಶ್ರೇಷ್ಠತೆ ನಿಮಗಿಲ್ಲ.' ಇದು ಅಸ್ಮಾರಿಗೆ(ರ) ಹಿಡಿಸಲಿಲ್ಲ. ಅವರು ಅದನ್ನು ಖಂಡಿಸಿದರು. "ನೀವು ಪ್ರವಾದಿಯೊಂದಿಗೆ ಅನೇಕ ತ್ಯಾಗಗಳನ್ನು ಮಾಡಿರುವಿರೆಂಬುದು ನಿಜ. ಆದರೆ ನಾವು ಅಲ್ಲಾಹನ ಸಂತೃಪ್ತಿಗಾಗಿ ವಿದೂರ ದೇಶದಲ್ಲಿ ಅಸಹಾಯಕರಾಗಿ ಅನೇಕ ವರ್ಷಗಳನ್ನು ಕಳೆದಿದ್ದೇವೆ. ಇದಕ್ಕೆ ಯಾವ ಮಹತ್ವವೂ ಇಲ್ಲವೆಂದು ನೀವು ಹೇಳುತ್ತೀರಾ?" ಅಷ್ಟರಲ್ಲಿ ಪ್ರವಾದಿ(ಸ) ಅಲ್ಲಿಗೆ ಬಂದರು. ಅಸ್ಮಾರೊಡನೆ(ರ) ಕುಶಲ ವಿಚಾರಿಸಿದರು. ಸ್ವಲ್ಪ ಮುಂಚೆ ಉಮರ್(ರ) ಮತ್ತು ಅಸ್ಮಾರೊಳಗೆ(ರ) ನಡೆದ ಸಂಭಾಷಣೆಯನ್ನರಿತ ಪ್ರವಾದಿ(ಸ) ಹೀಗೆಂದರು: "ಉಮರ್ ಕೇವಲ ಒಂದು ಹಿಜ್ರತ್ ಮಾಡಿದ್ದಾರೆ. ಅಸ್ಮಾರು ಎರಡು ಬಾರಿ ಹಿಜ್ರತ್ ಮಾಡಿದ್ದಾರೆ." ಇದನ್ನು ಕೇಳಿ ಅಲ್ಲಿದ್ದ ಅಸ್ಮಾರಿಗೂ(ರ) ಅಬಿಸೀನಿಯದ ಇತರ ಮುಹಾಜಿರರಿಗೂ ಬಹಳ ಸಂತೋಷವಾಯಿತು. ಇಸ್ಲಾಮಿಗಾಗಿ ಎರಡು ಬಾರಿ ಹಿಜ್ರತ್ ಹೋಗುವ ಸೌಭಾಗ್ಯ ದೊರೆತುದಕ್ಕಾಗಿ ಅವರು ಹರ್ಷಪಟ್ಟರು.

ಅಬಿಸೀನಿಯದಿಂದ ಮರಳಿ ಒಂದು ವರ್ಷ ಪೂರ್ಣವಾಗುವುದಕ್ಕಿಂತ ಮುಂಚೆಯೇ ಜಅ್‌ಫರ್ ಬಿನ್ ಅಬೀತಾಲಿಬ್‌ರು(ರ) ವೈರಿಗಳೊಡನೆ ಹೋರಾಡಲಿಕ್ಕಾಗಿ ಮುಅ್‌ತಃ ಎಂಬ ಸ್ಥಳಕ್ಕೆ ಹೋಗಬೇಕಾಯಿತು. ಝೈದ್ ಬಿನ್ ಹಾರಿಸ್‌ರು(ರ) ಮುಸ್ಲಿಮ್ ಸೇನೆಯ ನಾಯಕರಾಗಿದ್ದರು. ಹೊರಡುವುದಕ್ಕಿಂತ ಮುಂಚಿತವಾಗಿ ಪ್ರವಾದಿವರ್ಯರು(ಸ) ಹೀಗೆ ಆಜ್ಞಾಪಿಸಿದರು. "ಝೈದ್ ಯುದ್ಧದಲ್ಲಿ ಮಡಿದರೆ ಜಅ್‌ಫರ್ ಸೇನೆಯ ನಾಯಕತ್ವ ವಹಿಸಬೇಕು. ಜಅ್‌ಫರ್ ವಧಿಸಲ್ಪಟ್ಟರೆ ಅಬ್ದುಲ್ಲಾ ಬಿನ್ ರವಾಹ್ ಸೇನೆಯನ್ನು ಮುನ್ನಡೆಸಬೇಕು."

ಸೇನೆಯು ಹೊರಟು ಹೋದ ಕೆಲವಾರು ದಿನಗಳ ಬಳಿಕ ಪ್ರವಾದಿಯವರು(ಸ) ಅಸ್ಮಾರ(ರ) ವಸತಿಗೆ ಭೇಟಿಯಿತ್ತರು. ಜಅ್‌ಫರ್‌ರ(ರ) ಮಕ್ಕಳನ್ನು ಬಳಿ ಕರೆದು ವಾತ್ಸಲ್ಯ ದಿಂದ ಮುದ್ದಾಡುತ್ತಲಿದ್ದರು. ಪ್ರವಾದಿಯವರ(ಸ) ಮುಖದಲ್ಲಿ ವಿಷಾದದ ಛಾಯೆಯನ್ನು ಗಮನಿಸಿ ಅಸ್ಮಾರ(ರ) ಹೃದಯ ಬಡಿತ ಜೋರಾಯಿತು. "ಅಲ್ಲಾಹನ ಪ್ರವಾದಿಯೇ, ಜಅ್‌ಫರ್‌ರ ಕುರಿತು ಏನಾದರೂ ಸುದ್ದಿ ಬಂದಿದೆಯೇ?" ಕಾತರದಿಂದ ಅಸ್ಮಾ(ರ) ಪ್ರಶ್ನಿಸಿದರು: 'ಹೌದು' ಪ್ರವಾದಿ(ಸ) ಹೇಳಿದರು: ಜಅ್‌ಫರ್ ಅಲ್ಲಾಹನ ಮಾರ್ಗದಲ್ಲಿ ಹುತಾತ್ಮರಾಗಿದ್ದಾರೆ. ಹ. ಅಸ್ಮಾ(ರ) ಜೋರಾಗಿ ಅಳಲಾರಂಭಿಸಿದರು. ಸುದ್ದಿ ತಿಳಿದ ನೆರೆಮನೆಯ ಸ್ತ್ರೀಯರು ಓಡಿ ಬಂದರು. ತರುವಾಯ ಮನೆಯಲ್ಲಿ ಸಾಮೂಹಿಕ ರೋದನ

ಮುಗಿಲು ಮುಟ್ಟಿತು. ಜಾಹಿಲಿಯ್ಯ ಕಾಲದಲ್ಲಿ ಯಾರಾದರೂ ಮರಣ ಹೊಂದಿದರೆ ಸ್ತ್ರೀಯರು ಎದೆಬಡಿದು ಬಟ್ಟೆಬರೆಯನ್ನು ಹರಿದು ಚಿಂದಿ ಮಾಡಿ ಅಳುವ ಸಂಪ್ರದಾಯ ವಿತ್ತು. ಪ್ರವಾದಿವರ್ಯರು(ಸ) ಅದನ್ನು ವಿರೋಧಿಸಿ ಅವರನ್ನು ಸಾಂತ್ವನಗೊಳಿಸಿದರು. ತರುವಾಯ ಪ್ರವಾದಿಯವರು(ಸ) ಫಾತಿಮರ(ರ) ಮನೆಗೆ ತೆರಳಿ ಹೀಗೆಂದರು: "ಜಅ್‌ಫರ್‌ರ ಮಕ್ಕಳಿಗೆ ತಿಂಡಿ ಮಾಡಿ ಕೊಡು. ಅಸ್ಮಾ ಇಂದು ದುಃಖಿತರಾಗಿದ್ದಾರೆ. ಅವರಿಗೆ ಆಹಾರ ತಯಾರಿಸಲು ಸಾಧ್ಯವಿಲ್ಲ.!"

ಮೂತಾ ಯುದ್ಧದಲ್ಲಿ ಸೇನಾಧಿಪತಿಯಾಗಿದ್ದ ಝೈದ್‌ರು(ರ) ವಧಿಸಲ್ಪಟ್ಟಾಗ ಜಅ್‌ಫರ್ ಬಿನ್ ಅಬೀತಾಲಿಬ್‌ರು ಮುಂದೆ ಬಂದು ಧ್ವಜವನ್ನು ವಹಿಸಿಕೊಂಡರು. ವೀರಾವೇಶದಿಂದ ಅವರು ವೈರಿಗಳೊಡನೆ ಕಾದಾಡಿದರು. ಖಡ್ಗ ಮತ್ತು ಬಾಣಗಳು ಜಅ್‌ಫರ್‌ರ ಮೇಲೆ ಒಂದೇ ಸವನೆ ಬಂದೆರಗಿತು. ಕೊನೆಗೆ ಆ ವೀರ ಯೋಧರು ನೆಲಕ್ಕೆ ಬಿದ್ದರು. ಅವರ ದೇಹದಲ್ಲಿ ತೊಂಭತ್ತು ಗಾಯಗಳಿದ್ದುವು. ಎಲ್ಲವೂ ಮುಂಭಾಗ ದಲ್ಲಿಯೇ ಇದ್ದುವು. ಯುದ್ಧರಂಗದಲ್ಲಿ ಹುತಾತ್ಮರಾಗುವ ತನಕ ಅವರು ಬೆನ್ನು ತಿರುಗಿಸಿ ಓಡಲು ಪ್ರಯತ್ನಿಸಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ. ತರುವಾಯ ಅಬ್ದುಲ್ಲಾ ಬಿನ್ ರವಾಹರು ಸೇನೆಯ ನಾಯಕತ್ವ ವಹಿಸಿದರು. ಶೀಘ್ರದಲ್ಲಿಯೇ ಅವರೂ ವಧಿಸಲ್ಪಟ್ಟರು. ತರುವಾಯ ಸೇನೆಯನ್ನು ಖಾಲಿದ್ ಬಿನ್ ವಲೀದ್‌ರು(ರ) ಮುನ್ನಡೆಸಿದರು.

ಹ. ಜಅ್‌ಫರ್‌ರ ನಿಧನಾನಂತರ ಹ. ಅಸ್ಮಾರಿಗೆ(ರ) ವಿಧವಾ ಜೀವನ ನಡೆಸುವ ಪ್ರಮೇಯ ಬರಲಿಲ್ಲ. ಆರು ತಿಂಗಳ ಬಳಿಕ ಹ. ಅಬೂಬಕರ್ ಸಿದ್ದೀಕ್‌ರು(ರ) ಅಸ್ಮಾ ರನ್ನು(ರ) ವಿವಾಹವಾದರು. ಅಬೂಬಕರ್‌ರಿಗೆ(ರ) ಅಸ್ಮಾರಲ್ಲಿ ಮುಹಮ್ಮದ್ ಎಂಬ ಹೆಸರಿನ ಮಗು ಜನಿಸಿತು. ಹಿಜರಿ 11ನೇ ವರ್ಷದಲ್ಲಿ ಹ. ಅಬೂಬಕರ್(ರ) ನಿಧನರಾದಾಗ ಹ. ಅಲೀಯವರು(ರ) ಅಸ್ಮಾರನ್ನು(ರ) ವಿವಾಹವಾದರು. ಹೊಸ ದಾಂಪತ್ಯ ಜೀವನದಲ್ಲಿ ಯಹ್ಯಾ ಎಂಬ ಮಗು ಹುಟ್ಟಿತು.

ಒಮ್ಮೆ ಜಅ್‌ಫರ್‌ರ(ರ) ಪುತ್ರ ಮುಹಮ್ಮದ್ ಮತ್ತು ಅಬೂಬಕರ್‌ರ(ರ) ಪುತ್ರ ಮುಹಮ್ಮದ್(ಈರ್ವರೂ ಅಸ್ಮಾರ ಪುತ್ರರು) ತಂತಮ್ಮ ಪಿತರ ಹಿರಿಮೆಯ ಕುರಿತು ಪರಸ್ಪರ ತರ್ಕಿಸುತ್ತಿದ್ದರು. "ನನ್ನ ತಂದೆಯೇ ನಿನ್ನ ತಂದೆಗಿಂತ ಶ್ರೇಷ್ಠ" ಒಬ್ಬ ವಾದಿಸಿದ. ಇನ್ನೊಬ್ಬ ಅದನ್ನು ವಿರೋಧಿಸಿದ. ಇದನ್ನು ನೋಡಿದ ಅಲೀಯವರು(ರ) ಆ ಬಗ್ಗೆ ತೀರ್ಪು ನೀಡುವಂತೆ ಅಸ್ಮಾರಿಗೆ(ರ) ತಿಳಿಸಿದರು. ಅಸ್ಮಾ(ರ) ಈ ರೀತಿ ತೀರ್ಪು ನೀಡಿದರು: "ಯುವಕರಲ್ಲಿ ಜಅ್‌ಫರ್‌ಗಿಂತ ಉತ್ತಮ ಯುವಕರನ್ನೂ ಹಿರಿಯರಲ್ಲಿ ಅಬೂಬಕರ್‌ರಿ ಗಿಂತ(ರ) ಉತ್ತಮ ಹಿರಿಯರನ್ನೂ ನಾನು ಕಂಡಿಲ್ಲ." ಆಗ ಅಲೀಯವರು(ರ) ವಿನೋದವಾಗಿ ಹೀಗೆಂದರು: "ಹಾಗಿದ್ದರೆ ಅಸ್ಮಾ, ನೀನು ನನಗೆ ಯಾವ ಸ್ಥಾನವನ್ನೂ ನೀಡಿಲ್ಲವಲ್ಲಾ."

ಹ. ಅಸ್ಮಾರಿಗೆ(ರ) ಚಿಕಿತ್ಸೆಯ ಪರಿಜ್ಞಾನವಿತ್ತು. ಪ್ರವಾದಿಯವರು(ಸ) ರೋಗಶಯ್ಯೆಯಲ್ಲಿದ್ದಾಗ ಹ. ಅಸ್ಮಾ(ರ) ಮತ್ತು ಹ. ಉಮ್ಮು ಸಲ್ಮಾರೇ(ರ) ಅವರ ಶುಶ್ರೂಷೆ ನಡೆಸಿದ್ದರು. ಅವರು ರೋಗವನ್ನು ಗುರುತಿಸಿ ಔಷಧಿ ನೀಡಿದರೂ ಪ್ರವಾದಿ(ಸ) ಅದನ್ನು ಕುಡಿಯಲಿಲ್ಲ. ಆದರೂ ಪ್ರವಾದಿವರ್ಯರು(ಸ) ಪ್ರಜ್ಞಾಹೀನ ಸ್ಥಿತಿಯಲ್ಲಿದ್ದಾಗ ಅವರು ಔಷಧಿ ಕುಡಿಸಿಯೇ ಬಿಟ್ಟರು.

ಹ. ಅಸ್ಮಾರಿಂದ(ರ) ಸುಮಾರು ಅರುವತ್ತು ಹದೀಸ್‌ಗಳು ಉಲ್ಲೇಖಿಸಲ್ಪಟ್ಟಿವೆ. ಅನೇಕ ಸಹಾಬಿಗಳು ಅವರ ಶಿಷ್ಯರಾಗಿದ್ದರು.

ಹಿಜರಿ ನಲ್ವತ್ತನೇ ವರ್ಷದಲ್ಲಿ ಹ. ಅಲೀ(ರ) ವಧಿಸಲ್ಪಟ್ಟರು. ಸುಮಾರು ಅದೇ ಕಾಲದಲ್ಲಿ ಹ. ಅಸ್ಮಾರೂ(ರ) ನಿಧನರಾದರು.

□□□

# ಹಝ್ರತ್ ಉಮ್ಮು ಸುಲೈಮ(ರ)

ಹ. ಉಮ್ಮು ಸುಲೈಮ್‌ರು(ರ) ಮದೀನಾದಲ್ಲಿ ಇಸ್ಲಾಮ್ ಪ್ರವೇಶಿಸಿದ ಪ್ರಥಮ ದಲ್ಲಿಯೇ ಅದನ್ನು ಸ್ವಾಗತಿಸಿದ ಮಹಿಳೆ. ಮಾಲಿಕ್ ಬಿನ್ ನಸ್ರ್ ಅವರ ಪತಿಯಾಗಿದ್ದರು. ಅವರು ಇಸ್ಲಾಮ್ ಸ್ವೀಕರಿಸಿರಲಿಲ್ಲ. ಪ್ರಸಿದ್ಧ ಸಹಾಬಿ ಹಾಗೂ ಪ್ರವಾದಿಯವರ(ಸ) ಉತ್ತಮ ಸೇವಕರಾಗಿದ್ದ ಹ. ಅನಸ್‌ರೇ(ರ) ಮಾಲಿಕ್ ಮತ್ತು ಉಮ್ಮು ಸುಲೈಮ್‌ರ(ರ) ಏಕೈಕ ಪುತ್ರ. ಉಮ್ಮು ಸುಲೈಮ್(ರ) ಇಸ್ಲಾಮ್ ಸ್ವೀಕರಿಸಿದ ವೇಳೆ ಅನಸ್‌ರು(ರ) ಬಾಲಕ ರಾಗಿದ್ದರು. ಮಗನನ್ನು ಇಸ್ಲಾಮೀ ಶಿಕ್ಷಣ ಶೀಲದಂತೆ ಬೆಳೆಸಬೇಕೆಂದು ತಾಯಿ ಆದೇಶಿ ಸಿದ್ದರು. ಉಮ್ಮು ಸುಲೈಮ್‌ರು(ರ) ಮಗನಿಗೆ ಪವಿತ್ರ ವಾಕ್ಯವನ್ನೂ ಇಸ್ಲಾಮಿನ ಮೂಲ ವಿಶ್ವಾಸವನ್ನೂ ಕಲಿಸಿ ಕೊಡುತ್ತಿದ್ದರು. ಅವಿಶ್ವಾಸಿಯಾಗಿದ್ದ ಪತಿಗೆ ಅದು ಇಷ್ಟವಿರಲಿಲ್ಲ. "ನೀನು ಧರ್ಮಭ್ರಷ್ಟೆಯಾದೆ. ನನ್ನ ಮಗನನ್ನೂ ಧರ್ಮಭ್ರಷ್ಟಗೊಳಿಸಬೇಕೆಂದು ನಿನ್ನ ಹಂಬಲವೇ?" ಕುಪಿತ ಪತಿ ಗದರಿಸುತ್ತಿದ್ದರು.

ಉಮ್ಮು ಸುಲೈಮ್‌ರನ್ನು(ರ) ಇಸ್ಲಾಮಿನಿಂದ ಅಗಲಿಸಲು ಪತಿಯು ಸಾಧ್ಯ ವಿದ್ದಷ್ಟು ಪ್ರಯತ್ನಿಸಿದರು. ಆದರೆ ಆಮಿಷ ಮತ್ತು ಬೆದರಿಕೆಗಳಿಗೆ ಉಮ್ಮು ಸುಲೈಮ್(ರ) ಮಣಿಯಲಿಲ್ಲ. ಇನ್ನು ಮುಂದೆ ನನ್ನ ಪತ್ನಿಯಾಗಿ ಬಾಳಬೇಕಾದರೆ ಇಸ್ಲಾಮ್ ತ್ಯಜಿಸ ಬೇಕೆಂದು ಅವರು ಹಠ ಹಿಡಿದರು. ಹಾಗೆಯೇ ಅವಿಶ್ವಾಸಿಯಾದ ಪತಿಯನ್ನು ತಾಳಿಕೊಳ್ಳಲು ಉಮ್ಮು ಸುಲೈಮ್‌ರೂ ಸಿದ್ಧರಿರಲಿಲ್ಲ. ಎಲ್ಲಾ ಸಂಧಾನಗಳೂ ವಿಫಲವಾದುವು. ಕೊನೆಗೆ ಹತಾಶನಾದ ಪತಿಯು ಸಿರಿಯಕ್ಕೆ ಹೋದರು. ಅಲ್ಲಿ ಓರ್ವ ಹಳೆಯ ಶತ್ರು ಅವರನ್ನು ವಧಿಸಿಬಿಟ್ಟನು.

## ಮರುವಿವಾಹ

ವಿಧವೆಯಾಗಿದ್ದ ಉಮ್ಮು ಸುಲೈಮ್‌ರಿಗೆ(ರ) ಹಲವು ವಿವಾಹ ಪ್ರಸ್ತಾಪಗಳು ಬಂದುವು. ಆದರೆ ಅವರು ಯಾವುದನ್ನೂ ಒಪ್ಪಲಿಲ್ಲ. "ಮಗನು ಪ್ರಾಪ್ತ ವಯಸ್ಕನಾಗಿ ಆತ ಒಪ್ಪಿದರೆ ಮಾತ್ರ ತಾನು ಮರು ವಿವಾಹ ಮಾಡಿಕೊಳ್ಳುವೆ" ಎಂದು ಅವರು ವಿವಾಹ ಪ್ರಸ್ತಾಪ ಮಾಡುವವರೊಡನೆ ಹೇಳುತ್ತಿದ್ದರು.

ಕೆಲವಾರು ವರ್ಷಗಳ ಬಳಿಕ ಸ್ವಗೋತ್ರದಲ್ಲಿದ್ದ ಅಬೂತಲ್ಹ ಎಂಬೋರ್ವರು ಉಮ್ಮು ಸುಲೈಮ್‌ರನ್ನು(ರ) ವಿವಾಹವಾಗಲು ಇಚ್ಛೆ ಪ್ರಕಟಿಸಿದರು. ಅಬೂತಲ್ಹರು ಪ್ರಥಮ ಪತಿ ಮಾಲಿಕ್ ಬಿನ್ ನಸ್ರ್‌ನಂತೆಯೇ ಅವಿಶ್ವಾಸಿಯಾಗಿದ್ದರು. ಉಮ್ಮು ಸುಲೈಮ್(ರ) ಅಡ್ಡಿ ಹೇಳಿದ್ದರು "ನಾನು ಇಸ್ಲಾಮಿನಲ್ಲಿ ವಿಶ್ವಾಸವಿರಿಸಿರುವ ಹೆಣ್ಣು. ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯೆಂದು ನಾನು ವಿಶ್ವಾಸವಿಟ್ಟಿದ್ದೇನೆ. ನೀವು ಯಾವೊಂದು ಉಪಕಾರ ಅಥವಾ ಅಪಕಾರವೆಸಗಲು ಸಾಮರ್ಥ್ಯವಿಲ್ಲದ ಕಲ್ಲುಗಳನ್ನೂ ಪ್ರತಿಮೆಗಳನ್ನೂ ದೇವರೆಂದು ಆರಾಧಿಸುತ್ತೀರಿ. ನಮ್ಮಲ್ಲಿ ಪರಸ್ಪರ ಹೊಂದಾಣಿಕೆ ಹೇಗೆ ಸಾಧ್ಯ? ನನ್ನ ಪ್ರಥಮ ಪತಿಯ ವಿಷಯ ನಿಮಗೆ ತಿಳಿದಿದೆಯಲ್ಲವೇ?" ಅಬೂ ತಲ್ಹರ ಬಳಿ ಯಾವ ಉತ್ತರವೂ ಇರಲಿಲ್ಲ. ಅವರು ಮರಳಿ ಹೋದರು.

ಕೆಲವು ದಿನಗಳ ಬಳಿಕ ಅಬೂತಲ್ಹ ಪುನಃ ಉಮ್ಮು ಸುಲೈಮ್‌ರ(ರ) ಬಳಿಗೆ ಬಂದರು. "ನೀವು ಹೇಳಿರುವುದು ಸತ್ಯವೆಂದು ನಾನು ಮನಗಂಡಿದ್ದೇನೆ. ಆದ್ದರಿಂದ ನಾನು ಇಸ್ಲಾಮ್ ಸ್ವೀಕರಿಸುತ್ತೇನೆ.". ಅಬೂತಲ್ಹ ಹೇಳಿದರು. ಉಮ್ಮು ಸುಲೈಮ್‌ರಿಗೆ(ರ) ಸಂತೋಷವಾಯಿತು. ಅಬೂತಲ್ಹ ಬಡವರಾಗಿದ್ದರೂ ತನ್ನ ಮೂಲಕ ಇಸ್ಲಾಮ್ ಸ್ವೀಕರಿಸಿದ ಬಗ್ಗೆ ಅವರಲ್ಲಿ ಅನುರಾಗ ಮೂಡಿತು. "ನಿಮ್ಮೊಡನೆ ವಿವಾಹ ಸಂಬಂಧ ಬೆಳೆಸಲು ನಾನು ಸಿದ್ಧಳಿದ್ದೇನೆ. ನೀವು ಇಸ್ಲಾಮ್ ಧರ್ಮ ಸ್ವೀಕರಿಸಿರುವುದೇ ನನ್ನ ಮಹ್ರ್ (ಕನ್ಯಾಧನ). ಬೇರೇನೂ ನನಗೆ ಅಗತ್ಯವಿಲ್ಲ" ಉಮ್ಮು ಸುಲೈಮ್(ರ) ಹೇಳಿದರು. ಶೀಘ್ರವೇ ಅವರು ಪರಸ್ಪರ ವಿವಾಹವಾದರು.

## ಪ್ರಾರ್ಥನೆಯ ಫಲ

ಪ್ರವಾದಿಯವರು(ಸ) ಮದೀನಕ್ಕೆ ಬಂದಾಗ ಉಮ್ಮು ಸುಲೈಮ್ ಮತ್ತು ಅಬೂತಲ್ಹರು ಆನಂದ ತುಂದಿಲರಾದರು. ಪ್ರವಾದಿಯ(ಸ) ಸೇವೆಗಾಗಿ ಅವರು ಸ್ಫೂರ್ತಿಯಿಂದ ಮುಂದೆ ಬಂದರು. ಉಮ್ಮು ಸುಲೈಮ್‌ರು(ರ) ತನ್ನ ಪ್ರಿಯ ಪುತ್ರ ಅನಸ್‌ರನ್ನು(ರ) ಪ್ರವಾದಿಯ(ಸ) ಸೇವೆಗಾಗಿ ಮುಡಿಪಾಗಿಟ್ಟರು. ಅನಸ್‌ರು(ರ) ಪ್ರವಾದಿಯ ಅಚ್ಚುಮೆಚ್ಚಿನ ಸೇವಕರಾಗಿ ಇತಿಹಾಸದಲ್ಲಿ ಶೋಭಿಸಿದ್ದಾರೆ.

ಒಂದು ದಿನ ಪ್ರವಾದಿವರ್ಯರು(ಸ) ಉಮ್ಮು ಸುಲೈಮ್‌ರ(ರ) ಮನೆಗೆ ಭೇಟಿ ನೀಡಿದರು. ಅಂದು ಪ್ರವಾದಿವರ್ಯರು(ಸ) ಐಚ್ಛಿಕ ಉಪವಾಸ ಅನುಷ್ಠಿಸಿದ್ದರಿಂದ ಉಮ್ಮು ಸುಲೈಮ್‌ರ(ರ) ಆತಿಥ್ಯ ಸ್ವೀಕರಿಸಲಾಗಲಿಲ್ಲ. ಪ್ರವಾದಿಯವರು(ಸ) ಅಲ್ಲಿ ಸುನ್ನತ್ ನಮಾಝ್ ನಿರ್ವಹಿಸಿ ಉಮ್ಮು ಸುಲೈಮ್‌ರ(ರ) ಕುಟುಂಬಕ್ಕಾಗಿ ಪ್ರಾರ್ಥಿಸಿದರು. ತನ್ನ ಪ್ರೀತಿಯ ಪುತ್ರ ಅನಸ್‌ರಿಗಾಗಿ(ರ) ಪ್ರತ್ಯೇಕ ಪ್ರಾರ್ಥಿಸಬೇಕೆಂದು ಉಮ್ಮು ಸುಲೈಮ್(ರ)

ಪ್ರವಾದಿಯವರನ್ನು(ಸ) ವಿನಂತಿಸಿದರು. ಉಮ್ಮು ಸುಲೈಮ್‌ರ(ರ) ವಿನಂತಿಯನ್ನು ಮನ್ನಿಸಿ ಪ್ರವಾದಿ(ಸ) ಹೀಗೆ ಪ್ರಾರ್ಥಿಸಿದರು: "ಅಲ್ಲಾಹನೇ, ಅನಸ್‌ರಿಗೆ ಸಂಪತ್ತು ಮತ್ತು ಸಂತಾನವನ್ನು ದಯಪಾಲಿಸು. ಅವರ ಮೇಲೆ ಅನುಗ್ರಹವನ್ನು ಸುರಿಸು."

ಪ್ರವಾದಿವರ್ಯರ(ಸ) ಪ್ರಾರ್ಥನೆಯ ಫಲವೆಂಬಂತೆ ಅನಸ್(ರ) ಧಾರಾಳ ಸಂಪತ್ತು ಮತ್ತು ಸಂತಾನಗಳನ್ನು ಪೊಂದಿ ನೂರು ವರ್ಷಕ್ಕೂ ಮಿಕ್ಕಿ ಜೀವಿಸಿದರು. ಪ್ರವಾದಿ ಯವರ(ಸ) ಪ್ರಾರ್ಥನೆಯನ್ನು ಜ್ಞಾಪಿಸುತ್ತಾ ಅನಸ್(ರ) ಅನಂತರದ ಕಾಲಗಳಲ್ಲಿ ಹೀಗೆನ್ನುತ್ತಿದ್ದರು: "ಪ್ರವಾದಿ(ಸ) ಪ್ರಾರ್ಥನೆಯಿಂದ ಧನಿಕರಾದ ಅನ್ಸಾರಿಗಳಲ್ಲಿ ನಾನೂ ಓರ್ವನಾದೆ. ನನಗೆ ಹಲವು ಮಕ್ಕಳಿದ್ದರು. ಹಜ್ಜಾಜ್ ಬಸ್ರಾಕ್ಕೆ ಗವರ್ನರ್‌ರಾಗಿ ಬರುವ ವೇಳೆ ನನ್ನ ಮಕ್ಕಳೂ ಮರಿ ಮಕ್ಕಳೂ ಸೇರಿದಂತೆ ನೂರು ಮಂದಿಗೂ ಮಿಕ್ಕಿ ಮರಣ ಹೊಂದಿದ್ದರು."

## ಮನೋಸ್ಥೈರ್ಯ

ತಾಳ್ಮೆ, ಸಹನೆಗಳು ಉಮ್ಮು ಸುಲೈಮ್‌ರ(ರ) ಹುಟ್ಟು ಗುಣವಾಗಿತ್ತು. ಯಾವ ಸಂದಿಗ್ಧ ಘಟ್ಟವನ್ನೂ ಎದುರಿಸುವ ಅವರ ಮನೋಸ್ಥೈರ್ಯವು ಅದ್ವಿತೀಯವಾಗಿತ್ತು. ಅಬೂತಲ್ಹರಿಂದ ಉಮ್ಮು ಸುಲೈಮ್‌ರಿಗೆ(ರ) ಜನಿಸಿದ ಅಬೂ ಉಮೈರ್ ಎಂಬ ಮಗು ಮರಣ ಹೊಂದಿತು. ಅಬೂತಲ್ಹರು ಮದೀನದಿಂದ ಸ್ವಲ್ಪ ದೂರ ಹೋಗಿದ್ದರು. ಹೋಗುವಾಗ ಮಗು ರೋಗಶಯ್ಯೆಯಲ್ಲಿತ್ತು. ರಾತ್ರಿ ತುಂಬಾ ತಡವಾಗಿ ಅವರು ಮನೆಗೆ ಬಂದರು. ಮನೆಗೆ ಬಂದೊಡನೆಯೇ ಅವರು ಮಗುವಿನ ಕ್ಷೇಮ ವಿಚಾರಿಸಿದರು. ಉಮ್ಮು ಸುಲೈಮ್(ರ) ಪತಿಯನ್ನು ಸಮಾಧಾನಪಡಿಸುತ್ತಾ ಹೀಗೆಂದರು: "ನೀವು ಹೋಗುವಾಗ ಇದ್ದುದಕ್ಕಿಂತ ಕಡಿಮೆಯಾಗಿದೆ." ಅಬೂತಲ್ಹರಿಗೆ ಸಮಾಧಾನವಾಯಿತು. ಊಟ ಮಾಡಿ ಅವರು ಮಲಗಿದರು. ಕ್ಷಣಗಳು ಕಳೆದು ಹೋದುವು. ಏನೂ ನಡೆದಿಲ್ಲವೆಂಬಂತೆ ಉಮ್ಮು ಸುಲೈಮ್(ರ) ಪತಿಯೊಡನೆ ಹೇಳಿದರು: "ಓರ್ವರು ನಿಮ್ಮೊಡನೆ ಒಂದು ವಸ್ತುವನ್ನು ತೆಗೆದಿರಿಸಲು ಕೊಟ್ಟಿರುವರೆಂದು ಭಾವಿಸಿರಿ. ಅವರು ಅದನ್ನು ನಿಮ್ಮಿಂದ ಮರಳಿ ಪಡೆದರೆ ನಿಮಗೆ ದುಃಖವಾಗುವುದೇ?" "ಇಲ್ಲ. ನನಗೆ ಅದರಲ್ಲಿ ಯಾವ ಅಸಂತೃಪ್ತಿಯೂ ಇಲ್ಲ" ಅಬೂತಲ್ಹ ಉತ್ತರಿಸಿದರು. ಉಮ್ಮು ಸುಲೈಮ್(ರ) ಮುಂದುವರಿಸಿದರು. "ನಿಮ್ಮ ಮಗು ಅಲ್ಲಾಹನ ವಿಶ್ವಸ್ಥ ನಿಧಿಯಲ್ಲವೇ? ಅದನ್ನು ಆತನು ಮರಳಿ ಪಡೆದಿದ್ದಾನೆ." "ಇನ್ನಾಲಿಲ್ಲಾಹಿ ವಇನ್ನಾ ಇಲೈಹಿ ರಾಜಿಊನ್" ಅಬೂತಲ್ಹ ಬೆಚ್ಚಿಬಿದ್ದರು. ಘಟನೆಯನ್ನು ಗುಪ್ತವಾಗಿರಿ ಸಿದ್ದಕ್ಕೆ ಅವರಿಗೆ ಉಮ್ಮು ಸುಲೈಮ್‌ರ(ರ) ಮೇಲೆ ರೇಗಿತು.

ಬೆಳಿಗ್ಗೆ ಅಬೂತಲ್ಹಾರು(ರ) ಈ ಕುರಿತು ಪ್ರವಾದಿಯ ಬಳಿ ದೂರಿಕೊಂಡರು. ಒಂದು ಮರಣ ಸಂಭವಿಸಿದಾಗ ಆ ರಾತ್ರಿ ಒಂದು ಜನನದ ಬೀಜಾಂಕುರವಾಗಿದೆ. ಕಳೆದ ರಾತ್ರಿಯು ನಿಮಗೊಂದು ಅನುಗ್ರಹೀತ ರಾತ್ರಿಯಾಗಲೆಂದು ಪ್ರವಾದಿ(ಸ) ಪ್ರಾರ್ಥಿಸಿದರು. ತಿಂಗಳುಗಳು ಕಳೆಯಿತು. ಉಮ್ಮು ಸುಲೈಮರು(ರ) ಒಂದು ಗಂಡು ಮಗುವನ್ನು ಹೆತ್ತರು. ಆನಂದಭರಿತರಾದ ಅಬೂತಲ್ಹಾರು(ರ) ಮಗುವನ್ನೆತ್ತಿ ಪ್ರವಾದಿಯ(ಸ) ಬಳಿಗೆ ಬಂದರು. ಪ್ರವಾದಿಯವರು(ಸ) ಖರ್ಜೂರವನ್ನು ಜಗಿದು ಅದರ ನೀರನ್ನು ಮಗುವಿನ ಬಾಯಿಗೆ ಉಣಿಸಿದರು. ಮಗುವಿಗೆ ಅಬ್ದುಲ್ಲಾ ಎಂದು ನಾಮಕರಣ ಮಾಡಿದರು.

## ಪ್ರವಾದಿ ಸ್ನೇಹ

ಉಮ್ಮು ಸುಲೈಮ್‌ರಿಗೆ(ರ) ಪ್ರವಾದಿಯ(ಸ) ಬಗ್ಗೆ ಅತೀವ ಗೌರವವಿತ್ತು. ಹಲವೊಮ್ಮೆ ಪ್ರವಾದಿಯವರನ್ನು(ಸ) ಸತ್ಕರಿಸಿ, ಅವರಿಗೆ ಫಲಾಹಾರಗಳನ್ನು ತಯಾರು ಮಾಡಿ ಕಳುಹಿಸಿ ಕೊಡುತ್ತಿದ್ದರು. ಒಂದು ದಿನ ಅಬೂತಲ್ಹಾ ಮನೆಗೆ ಬಂದು ಮಡದಿ ಯೊಡನೆ, "ಪ್ರವಾದಿಯವರಿಗೆ(ಸ) ಹಸಿವಾಗಿದೆ. ನೀನು ಸ್ವಲ್ಪ ಆಹಾರ ತಯಾರಿಸಿ ಕೊಡು" ಎಂದು ಹೇಳಿದರು. ಸ್ವಲ್ಪ ಹಿಟ್ಟು ಮಾತ್ರವಿತ್ತು. ಉಮ್ಮು ಸುಲೈಮರು(ರ) ಅದರಿಂದ ರೊಟ್ಟಿ ತಯಾರಿಸಿದರು. ಪ್ರವಾದಿಯವರನ್ನು(ಸ) ಕರೆತರಲು ಅನಸ್‌ರನ್ನು(ರ) ಕಳುಹಿ ಸಿದರು. ಪ್ರವಾದಿ(ಸ) ಅಲ್ಲಿದ್ದವರನ್ನೆಲ್ಲ ಸಂಗಡ ಕರಕೊಂಡು ಉಮ್ಮು ಸುಲೈಮ್‌ರ(ರ) ಮನೆಗೆ ಬಂದರು. ಅಬೂತಲ್ಹಾ ಮತ್ತು ಉಮ್ಮು ಸುಲೈಮ್(ರ) ಕಂಗಾಲಾದರು. ರೊಟ್ಟಿ ಸ್ವಲ್ಪವೇ ಇತ್ತು. ಅತಿಥಿಗಳು ಅಪಾರವಿದ್ದಾರೆ. ಏನು ಮಾಡುವುದು? ತಮ್ಮಲ್ಲಿದ್ದ ಆಹಾರವನ್ನು ಅತಿಥಿಗಳ ಮುಂದಿಟ್ಟರು. ಎಲ್ಲರೂ ಹೊಟ್ಟೆ ತುಂಬಾ ತಿಂದರು. ಈ ಘಟನೆಯು ಪ್ರವಾದಿಯವರ(ಸ) ಪವಾಡಗಳಲ್ಲೊಂದು.

ಪ್ರವಾದಿಯವರಿಗೆ(ಸ) ಉಮ್ಮು ಸುಲೈಮ್‌ರೊಡನೆ(ರ) ಬಹಳ ಪ್ರೀತಿಯಿತ್ತು. ಪ್ರವಾದಿಯವರು(ಸ) ಉಮ್ಮು ಸುಲೈಮ್‌ರ(ರ) ಮನೆಗೆ ಭೇಟಿ ನೀಡಿ, ಕುಶಲ ವಿಚಾರಿಸು ವುದನ್ನು ರೂಢಿಯಾಗಿರಿಸಿದ್ದರು. ಖೈಬರ್ ಯುದ್ಧದಲ್ಲಿ ಹ. ಸಫಿಯ್ಯಾರು(ರ) ಪ್ರವಾದಿಯ(ಸ) ವಶವಾದಾಗ ಪ್ರವಾದಿ(ಸ) ಅವರನ್ನು ವಿವಾಹವಾಗಿ, ಗೃಹ ಪ್ರವೇಶಕ್ಕೆ ಬೇಕಾದ ಏರ್ಪಾಡು ಮಾಡುವಂತೆ ಉಮ್ಮು ಸುಲೈಮ್‌ರಿಗೆ(ರ) ತಿಳಿಸಿದ್ದರು. ಹ. ಸಫಿಯ್ಯಾರು(ರ) ಹ. ಉಮ್ಮು ಸುಲೈಮ್‌ರ(ರ) ಮನೆಯಲ್ಲಿ ವಾಸವಾಗಿದ್ದರು.

## ಯುದ್ಧರಂಗದಲ್ಲಿ

ಉಹದ್ ಯುದ್ಧದಲ್ಲಿ ಹ. ಉಮ್ಮು ಸುಲೈಮ್‌ರು(ರ) ಪತಿಯೊಡನೆ

ಭಾಗವಹಿಸಿದರು. ಹ. ಅಬೂತಲ್ಹರು(ರ) ವೈರಿಗಳ ಬಾಣ ಭರ್ಚಿಗಳಿಗೆ ಎದೆಯೊಡ್ಡಿ ಪ್ರವಾದಿಯವರನ್ನು(ಸ) ರಕ್ಷಿಸುತ್ತಿದ್ದಾಗ ಉಮ್ಮು ಸುಲೈಮ್‌ರು(ರ) ಗಾಯಗೊಂಡವರ ಆರೈಕೆ ಮಾಡುತ್ತಾ ಚರ್ಮ ಪಾತ್ರೆಯನ್ನು ಹೊತ್ತುಕೊಂಡು ಯೋಧರಿಗೆ ನೀರು ತಲಪಿಸು ವುದರಲ್ಲಿ ನಿರತರಾಗಿದ್ದರು.

ಹ. ಉಮ್ಮು ಸುಲೈಮ್(ರ) ಖೈಬರ್ ಮತ್ತು ಹುನೈನ್ ಯುದ್ಧಗಳಲ್ಲಿ ಭಾಗವಹಿಸಿದ್ದರು. ಹುನೈನ್ ಯುದ್ಧದಲ್ಲಿ ಭಾಗವಹಿಸುವ ವೇಳೆ ಅವರು ಗರ್ಭಿಣಿ ಯಾಗಿದ್ದರು. ಕೈಯಲ್ಲಿ ಹರಿತವಾದ ಕಠಾರಿ ಹಿಡಿದು ಸರ್ವ ಸನ್ನದ್ಧವಾಗಿ ಉಮ್ಮು ಸುಲೈಮ್(ರ) ನಿಂತಿದ್ದರು. ವೈರಿಗಳ ಆಕಸ್ಮಿಕ ಹೊಂಚು ಧಾಳಿಯನ್ನು ಎದುರಿಸಲಾಗದೆ ಮುಸ್ಲಿಮರು ಹಿಂಜರಿದಾಗ ಉಮ್ಮು ಸುಲೈಮರು(ರ) ಯುದ್ಧರಂಗಕ್ಕಿಳಿಯಲು ತನಗೆ ಅನುಮತಿ ನೀಡಬೇಕೆಂದು ಪ್ರವಾದಿವರ್ಯರನ್ನು(ಸ) ಕೋರಿದರು. ಆದರೆ ಪ್ರವಾದಿ(ಸ) ಒಪ್ಪಿಗೆ ನೀಡಲಿಲ್ಲ.

ಹ. ಉಮ್ಮು ಸುಲೈಮರು(ರ) ವಿದ್ಯೆ ಬುದ್ಧಿಯಲ್ಲಿ ಯಾರಿಗೂ ಕಡಿಮೆಯಿರಲಿಲ್ಲ. ಅಬ್ದುಲ್ಲಾ ಬಿನ್ ಅಬ್ಬಾಸ್ ಮುಂತಾದ ಪ್ರಮುಖ ಸಹಾಬಿಗಳೂ ಅನೇಕ ವಿಷಯಗಳ ಕುರಿತು ಅವರಿಂದ ಅಭಿಪ್ರಾಯ ಕೇಳಿ ತಿಳಿದುಕೊಳ್ಳುತ್ತಿದ್ದರು.

ಸ್ತ್ರೀಯರಿಗೆ ಸಂಬಂಧಿಸಿದ ಇಸ್ಲಾಮಿ ನಿಯಮಗಳ ಕುರಿತು ಕೇಳಿ ತಿಳಿದುಕೊಳ್ಳಲು ಉಮ್ಮು ಸುಲೈಮ್(ರ) ನಾಚುತ್ತಿರಲಿಲ್ಲ. ಒಮ್ಮೆ ಅವರು ಪ್ರವಾದಿಯ ಬಳಿ ಹೋಗಿ ಹೀಗೆ ಪ್ರಶ್ನಿಸಿದರು.: "ಸ್ತ್ರೀಯರಿಗೆ ಸ್ವಪ್ನ ಸ್ಖಲನವಾದರೆ ಸ್ನಾನ ಕಡ್ಡಾಯವಾಗುವುದೇ?" ಇದನ್ನು ಕೇಳಿ ಉಮ್ಮು ಸಲ್ಮ(ರ) ನಕ್ಕುಬಿಟ್ಟರು. "ನೀವು ಸ್ತ್ರೀ ಲೋಕವನ್ನು ಅವಮಾನಿ ಸುತ್ತೀರಿ. ಸ್ತ್ರೀಯರಿಗೆ ಪುರುಷರಂತೆ ಸ್ವಪ್ನಸ್ಖಲನವುಂಟಾಗುವುದೇ?" ಉಮ್ಮು ಸಲ್ಮ(ರ) ಪ್ರಶ್ನಿಸಿದರು. ಪ್ರವಾದಿ(ಸ) ಹೇಳಿದರು: "ಸ್ತ್ರೀಯರಿಗೂ ಸ್ವಪ್ನಸ್ಖಲನವುಂಟಾಗುತ್ತದೆ. ಇಲ್ಲ ದಿದ್ದರೆ ಮಗುವು ಮಾತೆಯನ್ನು ಹೋಲುವುದು ಹೇಗೆ?"

ಉಮ್ಮು ಸುಲೈಮರ(ರ) ನಿಧನದ ಕುರಿತು ಚರಿತ್ರೆಯಲ್ಲಿ ಸ್ಪಷ್ಟ ದಾಖಲೆಗಳಿಲ್ಲ. ಹ. ಅಬೂಬಕರ್ ಅಥವಾ ಹ. ಉಮರ್‌ರ(ರ) ಖಿಲಾಫತ್ ಕಾಲದಲ್ಲಿ ಹ. ಉಮ್ಮು ಸುಲೈಮರು(ರ) ನಿಧನರಾಗಿರಬಹುದೆಂದು ಊಹಿಸಲಾಗಿದೆ.

□□□